

ಕರ್ನಾಟಕ

# ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೩೧, ಸಂಚಿಕೆ : ೦೨

ಜುಲೈ-ಡಿಸೆಂಬರ್ ೨೦೧೭

ಬಿ.ಎಂ.ಶ್ರೀ ಪ್ರತಿಷ್ಠಾನ

ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ ಕಲಾಭವನ (ರಿ.)

೩ನೇ ಮುಖ್ಯ ರಸ್ತೆ, ನರಸಿಂಹರಾಜ ಕಾಲೋನಿ

ಬೆಂಗಳೂರು ೫೬೦೦೧೯

ಕರ್ನಾಟಕ

# ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೩೧, ಸಂಚಿಕೆ : ೦೨
ಜುಲೈ-ಡಿಸೆಂಬರ್ ೨೦೧೭

ಸಂಪಾದಕ
ಡಾ. ಎಚ್.ಎನ್. ಮುರಳೀಧರ



ಬಿ.ಎಂ.ಶ್ರೀ. ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ (ರಿ)
೩ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ
ಬೆಂಗಳೂರು-೫೬೦೦೧೯.
ದೂರವಾಣಿ : ೨೬೬೧೫೮೭೭, ೨೬೬೭೬೭೭೩
ಇ-ಅಂಚೆ : bmsritrust@gmail.com bmsrilochana@gmail.com

**KARNATAKA LOCHANA**
Half yearly Research Journal
Edited by Dr. H.N. Muralidhara and
Published by B.M.Sri. Prathistana
M.V.Si. P.G. Research Centre
B.M.Sri. Kalabhavana(R)
3rd Main Road
Narasimharaja Colony, Bangalore 560 019.
Ph.No. 080-26615877, 26676773
e-mail
bmsritrust@gmail.com
bmsrilochana@gmail.com

July-Decmber 2017 (Vol. 31, No. 2)

Pages: viii + 140

Subscription Details :

**Annual : Rs. 100/-**

**Life : Rs. 1500/-**

ಚಂದಾ ವಿವರ:
ವಾರ್ಷಿಕ : ರೂ. ೧೦೦/-
ಆಜೀವ : ರೂ. ೧೫೦೦/-

Published with Financial Assistance from the Central Institute of Indian Languages (Department of Higher Education, Ministry of Human Resource Development, Government of India)- Manasagangotri, Mysuru-570006 sanctioned vide letter No. 53-4(1)2014-15/KAN/LM/GRNT dated 5th December 2016 under the Little Magazine scheme of Grant-in-Aid.

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೪೧೨೪, ೨೬೬೧ ೮೬೫೨

## ಸಂಪಾದಕರ ನುಡಿ...

ನಮ್ಮ ನಡುವೆ ಬಳಕೆಯಲ್ಲಿರುವ 'ನಾಡು-ನುಡಿ' ಎಂಬ ನುಡಿಗಟ್ಟು ಸಾಕಷ್ಟು ಜನಪ್ರಿಯವೂ ಆಗಿದೆ. ಆದರೆ ಬಹಳಷ್ಟು ಸಂದರ್ಭಗಳಲ್ಲಿ ಇದನ್ನು ಬಳಸುವ ಬಹುತೇಕ ಜನ ಇದನ್ನೊಂದು ದ್ವೈಧದಲ್ಲಿ, 'ನಾಡು ಮತ್ತು ನುಡಿ' ಎನ್ನುವಂತೆ, ಬಳಸುತ್ತಿರುವಂತೆ ತೋರುತ್ತದೆ. ನಾಡಿನಿಂದ ನುಡಿಯನ್ನು ಹೀಗೆ ಬೇರ್ಪಡಿಸುವಲ್ಲಿ ಪ್ರಸ್ತುತ ಚಾಲ್ತಿಯಲ್ಲಿರುವ ನಮ್ಮ ಶಿಕ್ಷಣ ಕ್ರಮದ ಗ್ರಹಿಕೆಯೂ ತನ್ನ ಕೊಡುಗೆಯನ್ನು ನೀಡಿರುವಂತೆ ತೋರುತ್ತದೆ. ಈ ಬಗೆಯ ಕಲಿಕೆಯ ವ್ಯವಸ್ಥೆ ನುಡಿಯನ್ನು ಒಂದು 'ಸಂವಹನ-ಮಾಧ್ಯಮ'ವಾಗಿ ಮಾತ್ರವೇ ಗ್ರಹಿಸುತ್ತದೆ. ಅಲ್ಲದೆ ಇದರಿಂದ ಈ ವ್ಯವಸ್ಥೆಗೆ ಕೆಲವು 'ಅನುಕೂಲ'ಗಳೂ ಇವೆ. ಯಾವುದೇ ಒಂದು ನುಡಿಗೆ ಬೇರಾವುದೇ ಇನ್ನೊಂದು ನುಡಿ 'ಬದಲಿನ' ಕಾರ್ಯವನ್ನು ನಿರ್ವಹಿಸಬಲ್ಲುದು ಎಂದು ಈ ವ್ಯವಸ್ಥೆ ನಂಬುತ್ತದೆ ಮತ್ತು ನಂಬಿಸುತ್ತದೆ. ನುಡಿಯನ್ನು ಆರ್ಥಿಕ ಬಂಡವಾಳವನ್ನಾಗಿ ಕಾಣುವ ಶೈಕ್ಷಣಿಕ ಕ್ರಮಕ್ಕೆ ಈ ನಂಬಿಕೆ ಅತ್ಯಂತ ಮುಖ್ಯವಾಗುತ್ತದೆ ಮತ್ತು ಉಪಯುಕ್ತವೂ ಆಗುತ್ತದೆ.

ಆದರೆ ಗಂಭೀರವಾದ ಭಾಷಾಧ್ಯಯನಗಳು ಮತ್ತು ಸಾಂಸ್ಕೃತಿಕ ಅಧ್ಯಯನಗಳು ಇಂತಹ ನಂಬಿಕೆಗಳನ್ನು ಮೊದಲಿನಿಂದಲೂ ಹುಸಿ ಮಾಡುತ್ತ ಬಂದಿವೆ. ನಾಡು-ನುಡಿಗಳು ಒಂದೇ ಅಖಂಡ ಅಸ್ತಿತ್ವದ ವಿಭಿನ್ನ ಆಯಾಮಗಳೆಂಬುದನ್ನು ಸಾಬೀತುಪಡಿಸಿವೆ. ನಾಡು ಭಾಷೆಯಿಂದ ಬದುಕುತ್ತದೆ ಮಾತ್ರವಲ್ಲಿ ಭಾಷೆಯಾಗಿ ಬದುಕುತ್ತದೆ ಎಂಬ ಸತ್ಯವನ್ನು ಮನಗಾಣಿಸಿದೆ. ಪ್ರಸ್ತುತ ಪತ್ರಿಕೆಯ ಉದ್ದೇಶವಾದರೂ ಈ ಸತ್ಯದ ಹಲವು ಮುಖಗಳ ಅನಾವರಣವೇ ಆಗಿದೆ. ಅದು ಇಲ್ಲಿನ ಹಲವು ಬರಹಗಳಲ್ಲಿ ಹಲವು ಬಗೆಗಳಲ್ಲಿ ಸಂಭವಿಸುತ್ತಿದೆ ಎಂದು ಆಶಿಸುತ್ತೇವೆ.

ಈ ಹಿನ್ನೆಲೆಯಲ್ಲಿ, ಈ ಸಂಚಿಕೆ, ಇದೋ ನಿಮ್ಮ ಮುಂದಿದೆ. ಈ ಸಂಚಿಕೆಯನ್ನು ಹೊರತರುವಲ್ಲಿ ಸಹಕರಿಸಿದ ಎಲ್ಲರಿಗೂ ಧನ್ಯವಾದಗಳು. ಎಂದಿನಂತೆ ಶ್ರದ್ಧೆಯಿಂದ ಮುದ್ರಿಸಿದ ಲಕ್ಷ್ಮೀ ಮುದ್ರಣಾಲಯದವರಿಗೆ ಕೃತಜ್ಞತೆಗಳು.

-ಎಚ್.ಎನ್. ಮುರಳೀಧರ

## ಲೇಖಕರಿಗೆ ಸೂಚನೆಗಳು...

೧. ಸಾಹಿತ್ಯ-ಸಂಸ್ಕೃತಿಗಳಿಗೆ ಸಂಬಂಧಿಸಿದ ಸಂಶೋಧನೆ ವಿಮರ್ಶೆಗಳ ಅಪ್ರಕಟಿತ ಬರಹಗಳನ್ನು 'ಕರ್ನಾಟಕ ಲೋಚನ' ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಸ್ವೀಕರಿಸಲಾಗುವುದು.

೨. ಲೇಖನಗಳು ನುಡಿ ಅಥವಾ ಬರಹ ತಂತ್ರಾಂಶದಲ್ಲಿ ಬೆರಳಚ್ಚು ಮಾಡಿದವಾಗಿರಬೇಕು ಅಥವಾ ಸ್ಫುಟವಾದ ಕೈಬರಹದಲ್ಲಿರಬೇಕು.

೩. ಲೇಖನಗಳು ಒಪ್ಪಿತವಾದ ಮಾದರಿಯಲ್ಲಿ ಸೂಕ್ತ ಉಲ್ಲೇಖಗಳು ಮತ್ತು ಟಿಪ್ಪಣಿಗಳಿಂದ ಕೂಡಿರಬೇಕು.

೪. ಚಿತ್ರಗಳು, ನಕ್ಷೆಗಳು ಮೊದಲಾದುವನ್ನು ಸ್ಕ್ಯಾನ್ ಮಾಡಿದ ತಂತ್ರಾಂಶದಲ್ಲಿ ನೀಡಬೇಕು.

೫. ಲೇಖಕರು ತಮ್ಮ ವಿಳಾಸ, ದೂರವಾಣಿ ಸಂಖ್ಯೆ ಮತ್ತು ವಿ-ಅಂಚೆಗಳನ್ನು ತಪ್ಪದೆ ನೀಡಬೇಕು.

೬. ಅಸ್ವೀಕೃತ ಬರಹಗಳನ್ನು ಹಿಂದಿರುಗಿಸಲಾಗುವುದಿಲ್ಲ ಮತ್ತು ಈ ಬಗೆಗೆ ಪತ್ರವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

೭. ಲೇಖನಗಳನ್ನು ಪ್ರತಿಷ್ಠಾನದ ಅಂಚೆವಿಳಾಸಕ್ಕೆ ಅಥವಾ bmsrilochana@gmail.com ಈ ವಿ-ಅಂಚೆಗೆ ಕಳುಹಿಸಬಹುದು.

೮. ಪ್ರಕಟವಾದ ಬರಹಗಳಿಗೆ ಪ್ರತಿಷ್ಠಾನವು ಸಾಂಕೇತಿಕ ಗೌರವ ಸಂಭಾವನೆಯನ್ನು ನೀಡುತ್ತದೆ.

೯. ಲೇಖನದಲ್ಲಿನ ಅಭಿಪ್ರಾಯಗಳು ಲೇಖಕರದೇ ಆಗಿದ್ದು ಪ್ರತಿಷ್ಠಾನದ ನಿಲುವುಗಳನ್ನು ಪ್ರತಿನಿಧಿಸುವುದಿಲ್ಲ.

## ಈ ಸಂಚಿಕೆಯಲ್ಲಿ...

# ಶ್ರವಣಬೆಳಗೊಳದ ಬಾಹುಬಲಿ



**ಡಾ. ಅಪ್ಪಣ್ಣ ಎನ್. ಹಂಜೆ**

**೧. ಪೀಠಿಕೆ**

"ಅಹಿಂಸೆಯಿಂದ ಸುಖ, ತ್ಯಾಗದಿಂದ ಶಾಂತಿ, ಮೈತ್ರಿಯಿಂದ ಪ್ರಗತಿ, ಧ್ಯಾನದಿಂದ ಸಿದ್ಧಿ" ಎಂಬ ವಿಶ್ವಶಾಂತಿ ಮಹಾಮಂತ್ರವನ್ನು ಮಾನವಕುಲಕ್ಕೆ ಸಾರಿದ ಪ್ರಥಮ ಮೋಕ್ಷಗಾಮಿ ಬಾಹುಬಲಿಯ ಶಿಲ್ಪಗಳು ಜೈನ ಶಿಲ್ಪಕಲಾ ಪರಂಪರೆಯಲ್ಲಿ ವಿಶಿಷ್ಟವಾದ ಸ್ಥಾನವನ್ನು ಪಡೆದಿವೆ. ಕ್ರಿ.ಶ. ಸುಮಾರು ೧ನೆಯ ಶತಮಾನದಿಂದಲೂ ಬೆಳೆದು ಬಂದಿರುವ ಬಾಹುಬಲಿಯ ಕಥಾಪರಂಪರೆ ಭಾರತೀಯ ಸಾಹಿತ್ಯ ಕ್ಷೇತ್ರದಲ್ಲಿ ವಿಶಿಷ್ಟವಾದ ಸ್ಥಾನವನ್ನು ಪಡೆದಿದೆ. ಬಾಹುಬಲಿಯನ್ನು ಕೇಂದ್ರ ಮತ್ತು ಪೂರಕವಾಗಿಟ್ಟುಕೊಂಡು ಪ್ರಾಕೃತ, ಅಪಭ್ರಂಶ, ಸಂಸ್ಕೃತ, ಹಿಂದಿ, ತಮಿಳು, ಕನ್ನಡ ಮೊದಲಾದ ಭಾಷೆಗಳಲ್ಲಿ ನೂರಾರು ಕೃತಿಗಳು, ಕಾವ್ಯಗಳು, ಪುರಾಣಗಳು ರಚನೆಯಾಗಿವೆ. ಇವುಗಳಲ್ಲಿ ನಿರೂಪಿತವಾಗಿರುವ ಬಾಹುಬಲಿಯ ಕಥಾನಿರೂಪಣೆಯಲ್ಲಿ ವೈವಿಧ್ಯತೆ ತೋರಿದರೂ, ಉದ್ದೇಶ ಮಾತ್ರ ಒಂದೇಯಾಗಿದೆ. ಶಿಲ್ಪಿಗಳು ಆ ಕಥಾನಿರೂಪಣೆಗಳನ್ನು ಆಧಾರವಾಗಿಟ್ಟುಕೊಂಡು ಬಾಹುಬಲಿಯ ಶಿಲ್ಪಗಳನ್ನು ಕಂಡರಿಸಿದ್ದಾರೆ. ಬಾಹುಬಲಿ ತನ್ನ ಹಿರಿಯ ಸಹೋದರ ಭರತ ಚಕ್ರವರ್ತಿಯೊಂದಿಗೆ ದೃಷ್ಟಿಯುದ್ಧ, ಜಲಯುದ್ಧ ಮತ್ತು ಮಲ್ಲಯುದ್ಧದಲ್ಲಿ ಸೆಣಸಿ ಜಯಶೀಲನಾಗುತ್ತಾನೆ. ಆದರೂ ಕೊನೆಯಲ್ಲಿ ಪಶ್ಚಾತ್ತಾಪಪಟ್ಟು ವೈರಾಗ್ಯಹೊಂದಿ ರಾಜ್ಯವನ್ನು ತ್ಯಜಿಸಿ ಘೋರ ತಪಸ್ಸಿಗೆ ನಿಲ್ಲುತ್ತಾನೆ. ಹನ್ನೆರಡು ತಿಂಗಳು ತಪಸ್ಸು ಮಾಡಿ ಕೇವಲಜ್ಞಾನವನ್ನು (ಜ್ಞಾನೋದಯ) ಸಂಪಾದಿಸಿ, ತನ್ನ ತಂದೆ ಆದಿನಾಥನಗಿಂತ ಮೊದಲೆ ಸಿದ್ಧಶಿಲೆಯಲ್ಲಿ 'ಸಿದ್ಧಪದವಿ'ಯನ್ನು ಪಡೆಯುತ್ತಾನೆ. ಬಾಹುಬಲಿ ತಪಸ್ಸಿಗೆ ನಿಂತ ಸಂದರ್ಭದಲ್ಲಿ ಈತನ ಕಾಲುಗಳ ಇಕ್ಕೆಲಗಳಲ್ಲಿ ಹಾವಿನ ಹುತ್ತಗಳು ಬೆಳೆದು ಮಾಧವೀ ಲತೆಗಳು ಈತನ ಅಂಗಾಂಗಗಳನ್ನು ಬಳಸಿ ಮುಗಿಲೆತ್ತರಕ್ಕೆ ಬೆಳೆಯುತ್ತವೆ. ಆದರೂ ಈತನ ತಪಸ್ಸು ಅವಿಚಲವಾಗಿ ಮುಂದುವರೆಯುತ್ತದೆ. ಮುಗಿಲಲ್ಲಿ ಹೆಣೆದುಕೊಂಡಿರುವ ಮಾಧವಿ ಲತೆಗಳು ಆಕಾಶಮಾರ್ಗವಾಗಿ ಸಾಗುವ ವಿದ್ಯಾಧರ

ದಂಪತಿಗಳಿಗೆ ತಡೆಯಾಗುತ್ತವೆ. ಇದನ್ನು ದಾಟಿ ಹೋಗುವಾಗ ಎಲ್ಲಿ ಬಾಹುಬಲಿಯ ತಪಸ್ಸು ಭಂಗವಾಗುತ್ತದೆಯೋ ಎಂದು ಅವರಿಗೆ ಭಯ. ಆದ್ದರಿಂದ ಅವರು ಆಗಾಗ್ಗೆ ಕೆಳಗಿಳಿದು ಬಂದು ಮಾಧವಿ ಲತೆಗಳನ್ನು ಬಿಡಿಸಿ, ಈತನಗೆ ವಂದಿಸಿ ಹೋಗುತ್ತಾರೆ. ಈ ಕಥಾನಿರೂಪಣೆಯೇ ಬಾಹುಬಲಿಯ ಬಹುತೇಕ ಉಬ್ಬುಶಿಲ್ಪಗಳಲ್ಲಿ ಅಭಿವ್ಯಕ್ತವಾಗಿದೆ.

ಬಾಹುಬಲಿಯನ್ನು ಶಾಸನಗಳಾದಿ ಕೃತಿ-ಕಾವ್ಯಗಳಲ್ಲಿ ಗೊಮ್ಮಟೇಶ್ವರ, ಗೊಮ್ಮಟೇಶ, ಗೊಮ್ಮಟಜಿನ, ಗೊಮ್ಮಟದೇವ, ದಕ್ಷಿಣ ಕುಕ್ಕುಟಜಿನ, ಭುಜಬಲಿ, ದೋರ್ಬಲೀಶ, ಪೌದನೇಶ, ನಾಭಿಪುತ್ರ, ಮನ್ಮಥ, ಮನೋಭವ, ಮನೋಜ, ಮನೋಭೊ, ಅಂಗಜ, ಮದನ, ಅನನ್ಯಜ ಎಂದೆಲ್ಲ ಕರೆಯಲಾಗಿದೆ. ಹಾಗೆಯೇ ಈತನು ನಾಭಿರಾಜನ ಮೊಮ್ಮಗ, ಪ್ರಥಮ ಪ್ರಜಾಪತಿ ಮತ್ತು ಆದಿತೀರ್ಥಂಕರನಾದ ಋಷಭನಾಥನ ಮಗ, ಆದಿಚಕ್ರವರ್ತಿ ಭರತನ ಸಹೋದರ, ಪ್ರಥಮ ಕಾಮದೇವ, ಅನಂತವೀರ್ಯ, ಇಂದ್ರಪೂಜಿತ, ದೇವೇಂದ್ರಪೂಜಿತ ಮೊದಲಾದ ವಿಶೇಷಣಗಳಿಂದ ಕರೆಯಲ್ಪಟ್ಟಿದ್ದಾನೆ. ನೇಮಿಚಂದ್ರ ಸಿದ್ಧಾಂತಚಕ್ರವರ್ತಿಗಳು ತಮ್ಮ ಶಿಷ್ಯ ಚಾವುಂಡರಾಯನಿಗೆ ಸಿದ್ಧಾಂತ ವಿಷಯಗಳನ್ನು ಸಂಗ್ರಹವಾಗಿ ತಿಳಿಸುವುದಕ್ಕೋಸ್ಕರ ರಚಿಸಿರುವ ಗ್ರಂಥಕ್ಕೆ 'ಗೋಮಟಸಾರ' ಎಂದು ಹೆಸರನ್ನಿಟ್ಟಿದ್ದಾರೆ. ಚಾವುಂಡರಾಯನು ಶ್ರವಣಬೆಳಗೊಳದಲ್ಲಿ ಮಾಡಿಸಿರುವ ಬಾಹುಬಲಿ ಶಿಲ್ಪವು ಅನುಪಮ ಸುಂದರವಾಗಿ ಜಗನ್ಮೋಹಕವಾಗಿರುವುದರಿಂದ ಆ ಶಿಲ್ಪವನ್ನು ನೇಮಿಚಂದ್ರಸಿದ್ಧಾಂತ ಚಕ್ರವರ್ತಿಗಳು 'ಗೊಮ್ಮಟ' ಎಂದು ನಾಮಕರಣವನ್ನು ಮಾಡಿರುವರೆಂದೂ, ಗುಣರತ್ನಭೂಷಣ, ಸತ್ಯಯುಧಿಷ್ಠಿರ, ಸಮ್ಯಕ್ತ್ವರತ್ನಾಕರ ಎಂದೆನಿಸಿದ ಚಾವುಂಡರಾಯನು ಬಾಹುಬಲಿ ಶಿಲ್ಪವನ್ನು ಮಾಡಿಸಿ ಲೋಕವನ್ನು ಮೋಹ-ಸಂತೋಷಗೊಳಿಸಿದುದರಿಂದ ಅವನಿಗೆ 'ಗೊಮ್ಮಟ' ಎಂದು ಪ್ರಶಸ್ತಿಯನ್ನಿತ್ತಿರುವರೆಂದೂ ತಿಳಿಯುತ್ತದೆ. ಎಂತಲೇ ಶ್ರವಣಬೆಳಗೊಳದ ಶಾಸನಗಳಲ್ಲಿ ಚಾವುಂಡರಾಯನನ್ನು 'ಗೊಮ್ಮಟ' ಎಂದೂ ಅವನು ಮಾಡಿಸಿದ ಬಾಹುಬಲಿ ಶಿಲ್ಪವನ್ನು 'ಗೊಮ್ಮಟೇಶ್ವರ' ಎಂದೂ ಕರೆಯಲಾಗಿದೆ. ಗೊಮ್ಮಟ ಎಂದರೆ ಚೆಲುವ, ಸುಂದರ, ಮನ್ಮಥ ಎಂಬ ಅರ್ಥಗಳಿವೆ. ಚಾವುಂಡರಾಯನನ್ನು ಅವನ ಆಪ್ತರು, ಹಿರಿಯರು ಗೊಮ್ಮಟ ಎಂದು ಕರೆಯುತ್ತಿದ್ದರು. ಆದ್ದರಿಂದ ಚಾವುಂಡರಾಯನು ಮಾಡಿಸಿದ ಅವನ ಆರಾಧ್ಯದೈವವಾದ ಬಾಹುಬಲಿ ಶಿಲ್ಪಕ್ಕೆ ಗೊಮ್ಮಟೇಶ್ವರ ಎಂಬ ಹೆಸರು ಬಂದಿದೆ. ಅಲ್ಲಿಂದ ಮುಂದೆ ಬಾಹುಬಲಿ ಶಿಲ್ಪಗಳಿಗೆಲ್ಲ ಗೊಮ್ಮಟೇಶ್ವರ ಎಂಬ ಹೆಸರು ಸಾಮಾನ್ಯವಾಯಿತು, ಸ್ಥಿರವಾಯಿತು ಮತ್ತು ಅದೇ ಪ್ರಸಿದ್ಧವೂ ಆಯಿತು.[೧] ಆದರೆ ತಲಕಾಡಿನ ಗಂಗರ ಎರೆಗನ ಚಿಕ್ಕಹನಸೋಗೆಯ ಕ್ರಿ.ಶ. ೯೧೦ರ ಶಾಸನದಲ್ಲಿ-

..........ಗೊಮ್ಮಟದೇವರ ಸ್ಥಾವರತೀರ್ತ್ಥಂ ಕಲ್ನೆಲೆ
ದೇವಭ್ರೂಸವಳಯದೊಳಗೆ ಜಜಮತೀರ್ತ್ಥಮ್......

ಎಂದು ಗೊಮ್ಮಟ ಪದದ ಪ್ರಯೋಗವಿದೆ.[೨] ಈ ಹಿನ್ನೆಲೆಯಲ್ಲಿ ಗೊಮ್ಮಟ ಎಂಬ ಹೆಸರು ನೇಮಿಚಂದ್ರ ಸಿದ್ಧಾಂತಚಕ್ರವರ್ತಿಗಳ ಪೂರ್ವದಲ್ಲಾಗಲೇ ಪ್ರಚಲಿತವದಲ್ಲಿತ್ತೇ? ಎಂಬುದು ವಿಚಾರಣೀಯವಾಗಿದೆ.

ಕನ್ನಡನಾಡಿನಲ್ಲಿ ದಿಗಂಬರ ಪಂಥದ ಪರಂಪರೆಯ ಬಾಹುಬಲಿ ಕಥಾ ನಿರೂಪಣೆಯೇ ಸಮಕಾಲೀನ ಶಿಲ್ಪಿಗಳ ಕಲ್ಪನಾಚಾತುರ್ಯ ಮತ್ತು ಕಲಾಪ್ರೌಢಿಮೆಯ ಅಭಿವ್ಯಕ್ತಿಗೆ ಇಂಬುಕೊಟ್ಟಿದೆ. ಈ ನಾಡಿನಲ್ಲಿ ಕ್ರಿ.ಶ. ಸುಮಾರು ೪ನೆಯ ಶತಮಾನದಿಂದಲೂ ಬಾಹುಬಲಿ ಬಸದಿಗಳ ನಿರ್ಮಾಣ, ಶಿಲ್ಪಗಳ ಪ್ರತಿಷ್ಠಾಪನೆ ಚಟುವಟಿಕೆಗಳು ವಿಶೇಷ ಮತ್ತು ವಿಶಿಷ್ಟವಾಗಿ ನಡೆಯುತ್ತ ಬಂದಿವೆ. ಈ ನಾಡಿನಲ್ಲಿ ಬಾಹುಬಲಿ ಆರಾಧನೆಗೆ ದೊರೆತಷ್ಟು ಜನಪ್ರಿಯತೆ ಭಾರತದ ಬೇರಾವದೆಡೆಗೂ ಗೋಚರಿಸುವುದಿಲ್ಲ. ಉತ್ತರ ಕರ್ನಾಟಕದಲ್ಲಿ ದೊರೆತಿರುವ (ಯಾವ ಗ್ರಾಮ ಮತ್ತು ಯಾವಾಗ ಎಂಬುದು ಸ್ಪಷ್ಟವಿಲ್ಲ) ಬನವಾಸಿ ಕದಂಬರ ಕಾಲಾವಧಿಯ ಕ್ರಿ.ಶ. ಸುಮಾರು ೪ನೆಯ ಶತಮಾನದ ಬಾಹುಬಲಿ ಪಂಚಲೋಹದ ಪ್ರತಿಮೆ ಈಗ ಅಮೇರಿಕದ ನ್ಯೂಯಾರ್ಕ ಮೆಟ್ರೋಪಾಲಿಟನ್ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿದೆ. ಕದಂಬರ ರವಿವರ್ಮನು ಕ್ರಿ.ಶ. ಸುಮಾರು ೫ನೆಯ ಶತಮಾನದಲ್ಲಿ ಗುಡ್ನಾಪುರದ ತನ್ನ ಅರಮನೆಯ ಎಡಬದಿಯಲ್ಲಿ ಮನ್ಮಥನಿಗೆ ಕಾಮಜಿನಾಲಯವನ್ನು ನಿರ್ಮಿಸಿದ್ದನು. ಆದರೆ ಆ ಬಸದಿ ಮತ್ತು ಶಿಲ್ಪ ಇಂದು ಉಳಿದು ಬಂದಿಲ್ಲ. ಶ್ರವಣ ಬೆಳಗೊಳದ ಹೊಲದಲ್ಲಿ ದೊರೆತಿರುವ (ಯಾವಾಗ ಎಂಬುದು ಸ್ಪಷ್ಟವಿಲ್ಲ) ಬಾದಾಮಿ ಚಲುಕ್ಯರ ಕಾಲಾವಧಿಯ ಕ್ರಿ.ಶ. ಸುಮಾರು ೭ನೆಯ ಶತಮಾನದ ಬಾಹುಬಲಿ ಪಂಚ ಲೋಹದ ಪ್ರತಿಮೆ ಈಗ ಮುಂಬಯಿಯ ಪ್ರಿನ್ಸ್ ಆಫ್ ವೇಲ್ಸ ವಸ್ತುಸಂಗ್ರಹಾಲಯದಲ್ಲಿದೆ. ಪುತ್ತೂರು ತಾಲ್ಲೂಕಿನ ಸವಣೂರಿನ ಚಂದ್ರಪ್ರಭನಾಥ ಬಸದಿಯಲ್ಲಿ ತಲಕಾಡಿನ ಗಂಗರ ಕಾಲಾವಧಿಯ ಕ್ರಿ.ಶ. ಸುಮಾರು ೭ನೆಯ ಶತಮಾನದ ಬಾಹುಬಲಿ ಪ್ರತಿಮೆಯಿದೆ.

ಕನ್ನಡನಾಡಿನಲ್ಲಿ ಬಾಹುಬಲಿಯನ್ನು ಉಬ್ಬುಶಿಲ್ಪದ ರೂಪದಲ್ಲಿ ಕಂಡರಿಸುವ ಪರಂಪರೆ ಕ್ರಿ.ಶ. ಸುಮಾರು ೬ನೆಯ ಶತಮಾನದಿಂದಲೂ ನಡೆದು ಬಂದಿದೆ. ಬಾದಾಮಿ, ಐಹೊಳೆ, ಶ್ರವಣಬೆಳಗೊಳ, ಹಳ್ಳೂರು, ಮುಳಗುಂದ, ಹೊಂಬುಜ ಮೊದಲಾದೆಡೆಗಳಲ್ಲಿ ಬಾಹುಬಲಿಯ ಉಬ್ಬುಶಿಲ್ಪಗಳಿವೆ. ಬಾಹುಬಲಿಯನ್ನು ಏಕಶಿಲೆಯಲ್ಲಿ ದುಂಡುಶಿಲ್ಪ ರೂಪದಲ್ಲಿ ಕಂಡರಿಸಿ ಪ್ರತಿಷ್ಠಾಪಿಸುವ ಪರಂಪರೆ ಕ್ರಿ.ಶ. ಸುಮಾರು ೧೦ನೆಯ ಶತಮಾನದಿಂದ ಪ್ರಾರಂಭವಾಯಿತು. ಈ ದುಂಡು ಶಿಲ್ಪಗಳಲ್ಲಿ ಬಾಹುಬಲಿಯ ಕೈಗಳು ಮತ್ತು ಕಾಲುಗಳನ್ನು ಮಾಧವಿ ಲತೆಗಳು ಬಳಸಿರುವುದು ಮತ್ತು ಈತನ ಪಾದದಡಿಯಲ್ಲಿ ಹುತ್ತ, ಸರ್ಪ, ಪ್ರಾಣಿಗಳನ್ನು ಮಾತ್ರ ತೋರಿಸಲಾಗಿದೆ. ಇಲ್ಲಿ ಹಿಂಭಿತ್ತಿ ಇರದ ಕಾರಣ ಉಬ್ಬುಶಿಲ್ಪಗಳಲ್ಲಿ ತೋರಿಸಿರುವ ಆಕಾಶ, ಅರಣ್ಯ, ವಿದ್ಯಾಧರ ದಂಪತಿಗಳನ್ನು ತೋರಿಸಲು ಅವಕಾಶ ಇರುವುದಿಲ್ಲ. ಈ ಪರಂಪರೆ ಪ್ರಪ್ರಥಮವಾಗಿ ಶ್ರವಣಬೆಳಗೊಳದಲ್ಲಿ ಪ್ರಾರಂಭವಾಯಿತು.

### ೨. ಶ್ರವಣಬೆಳಗೊಳ

ಜೈನ ಧರ್ಮದ ವಾಸ್ತು-ಶಿಲ್ಪ-ಶಾಸನಗಳ ಸಿಂಹಾಸನ ಎಂದೆನಿಸಿರುವ ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ ಶ್ರವಣಬೆಳಗೊಳವು ದಕ್ಷಿಣಕಾಶಿ, ಜೈನಬದರಿ, ರಿಷಿಗಿರಿ, ತೀರ್ಥಗಿರಿ ಎಂದೆಲ್ಲ ಪ್ರಸಿದ್ಧವಾಗಿದೆ. ಸಮಕಾಲೀನ ಶಾಸನಗಳು ಮತ್ತು

ಕೃತಿ-ಕಾವ್ಯಗಳಲ್ಲಿ ವೆಳ್ಗೊಳ, ಬೆಳ್ಗೊಳ, ಬೆಳುಗೊಳ, ಬೆಳ್ಗೊಳತೀರ್ಥ, ಬೆಳ್ಳುಗೊಳ, ಬೆಳ್ಗುಳ, ಬೆಳಗುಳ, ಬೆಳುಗುಳತೀರ್ಥ, ಬೆಳ್ಗೊಳ, ಬಳಗುಳ, ಬೆಳಿಗುಳ, ಬೆಳಗುಳ ನಗರ, ಬೆಳ್ಗುಳ ಪಟ್ಟಣ, ಕಸಬೆ ಬೆಳಗುಳ, ಬೆಳಗುಳನಾಡು, ಶ್ರವಣಬಳಗುಳ, ಶ್ರವಣಬೆಳಗುಳ, ಗೊಮ್ಮಟಪುರ, ದೇವರ ಬೆಳ್ಳುಗುಳ, ಸಿತತಟಾಕ, ಪೂಗತಟಾಕ, ಚೋಳರಾಜಪುರ, ಅಭಿನವ ಪೌದನಪುರ, ಜಿನಗಿರಿ, ರಿಷಿಗಿರಿ, ತೀರ್ಥಗಿರಿ, ಪಟ್ಟಣ ಶ್ರೇಷ್ಠವಾದ ಜೈನರ ದಕ್ಷಿಣಕಾಶಿ, ಉಪಮಾತೀತ ಪವಿತ್ರ ಕ್ಷೇತ್ರ, ಧವಳಸರಸತೀರ್ಥ, ಶ್ವೇತಸರೋವರ ಎಂದೆಲ್ಲ ಉಲ್ಲಿಖಿತವಾಗಿದೆ. ಇದು ಕ್ರಿಪೂ. ಸುಮಾರು ೪ನೆಯ ಶತಮಾನದಿಂದಲೂ ಕನ್ನಡನಾಡಿನ ಚರಿತ್ರೆ ಮತ್ತು ಸಂಸ್ಕೃತಿಯೊಂದಿಗೆ ಹಾಸುಹೊಕ್ಕಾಗಿ ಬೆಳೆದು ಬಂದಿದೆ. ದಕ್ಷಿಣ ಭಾರತದ ಚರಿತ್ರೆ ಹಾಗೂ ಜೈನ ಧರ್ಮದ ಸಾಂಸ್ಕೃತಿಕ ಇತಿಹಾಸವನ್ನು ವಸ್ತುನಿಷ್ಠವಾಗಿ ರೂಪಿಸುವಲ್ಲಿ ಮಹತ್ವದ ಪಾತ್ರವಹಿಸಿರುವ ಕೆಲವೇ ಕೆಲವು ಸ್ಥಳಗಳಲ್ಲಿ ಸುಪ್ರಸಿದ್ಧವಾಗಿದೆ. ಈ ಸ್ಥಳವು ಯಾವುದೋ ಅರಸು ಮನೆತನದ ರಾಜಧಾನಿಯಾಗಿ, ರಾಜಕೀಯ ಕೇಂದ್ರವಾಗಿ ಬೆಳೆಯದೇ, ಜಾಗೃತ ಅತಿಶಯ ಭಕ್ತಿಯ ಗುರುತ್ವಾಕರ್ಷಣ ಶಕ್ತಿಯ ಧಾರ್ಮಿಕ ವಲಯವಾಗಿ ತನ್ನೆಡೆಗೆಯೇ ಮುನಿಗಳು, ಆರ್ಯಿಕೆಯರು, ಭಟ್ಟಾರಕರು, ಅರಸರು, ರಾಣಿಯರು, ಅಧಿಕಾರಿಗಳು, ಕವಿಗಳು, ವರ್ತಕರು, ಶ್ರಾವಕರು, ಜೈನಾಭಿಮಾನಿಗಳನ್ನು ಆಕರ್ಷಿಸಿ, ತನ್ನ ಪ್ರಭಾವಲಯದಲ್ಲಿ ಅವರನ್ನು ಪೋಷಿಸಿ ಬೆಳೆಸುವುದರೊಂದಿಗೆ ಅವರಿಗೆ ಆತ್ಮೋದ್ಧಾರಕ್ಕೆ ಸ್ಫೂರ್ತಿ-ಪ್ರೇರಣೆ ನೀಡಿರುವುದು ವಿಶೇಷವಾಗಿದೆ. ಕನ್ನಡನಾಡಿನಲ್ಲಿ ಜೈನ ಮುನಿಪರಂಪರೆ, ಸಮಾಧಿಮರಣ ಆಚರಣೆ, ಕನ್ನಡ ಸಾಹಿತ್ಯದ ಬೆಳವಣಿಗೆ, ಶಾಸನ ಸಾಹಿತ್ಯದ ವೈಶಿಷ್ಟ್ಯತೆ, ವಾಸ್ತುಕಲೆಯ ಸ್ವರೂಪ, ಶಿಲ್ಪಕಲೆಯ ವೈವಿಧ್ಯತೆ, ಚಿತ್ರಕಲೆಯ ಚಿತ್ತಾರ, ಮಠಪರಂಪರೆ ಮೊದಲಾದ ಸಾಂಸ್ಕೃತಿಕ ಇತಿಹಾಸದ ವಿವಿಧ ಮಗ್ಗಲುಗಳ ಅಧ್ಯಯನಕ್ಕೆ ಇಲ್ಲಿಯ ಶಾಸನಗಳಾದಿ ವಿವಿಧ ಪುರಾತತ್ವ ಮತ್ತು ಸಾಹಿತ್ಯಿಕ ಕುರುಹುಗಳ ಕೊಡುಗೆ ಅಪಾರವಾಗಿದೆ.

ಪಂಚಮ ಶ್ರುತಕೇವಲಿ ಭದ್ರಬಾಹು ಭಟ್ಟಾರಕರ (ಕ್ರಿ.ಪೂ. ೩೯೪-೩೬೫) ಕಾಲದಿಂದಲೂ ತಪೋಧನರ ತೇಜಸ್ಸಿನ ತಿಳಿಬೆಳಗಿನಿಂದ ಪರಮಪಾವನ ಜಾಗೃತ ಸ್ಥಳವಾಗಿರುವ ಶ್ರವಣಬೆಳಗೊಳಕ್ಕೆ ದರ್ಶನ, ಆತ್ಮೋದ್ಧಾರ ಮೊದಲಾದ ವಿಭಿನ್ನವಾದ ಆಶಯಗಳೊಂದಿಗೆ ಆಗಮಿಸಿದ ಆಳರಸರು, ರಾಣಿಯರು, ಅಧಿಕಾರಿಗಳು, ವರ್ತಕರು, ಶ್ರಾವಕರು, ಜೈನಾಭಿಮಾನಿಗಳು ಈ ಪರಿಸರದಲ್ಲಿ ಬಸದಿಗಳು, ಕೆರೆಗಳು, ಬಾವಿಗಳು, ಅರವಟ್ಟಿಗೆಗಳ ನಿರ್ಮಾಣ, ಶಿಲ್ಪಗಳ ಪ್ರತಿಷ್ಠಾಪನೆ ಮೊದಲಾದ ಧಾರ್ಮಿಕ ಮತ್ತು ಲೌಕಿಕ ಸ್ಮಾರಕಗಳನ್ನು ನಿರ್ಮಿಸುವುದರೊಂದಿಗೆ ಉದಾರವಾಗಿ ದಾನ-ದತ್ತಿಗಳನ್ನು ಕೊಡಮಾಡಿದ್ದಾರೆ. ಹೀಗಾಗಿ ಜೈನ ವಾಸ್ತುಕಲೆಯ ತಾತ್ವಿಕ ವಿಚಾರಗಳು, ಬೆಳವಣಿಗೆ, ವಿನ್ಯಾಸ, ಶೈಲಿ ಇತ್ಯಾದಿ ಆಯಾಮಗಳು ಮತ್ತು ಲಕ್ಷಣಗಳ ತಲಸ್ಪರ್ಶಿ ವಸ್ತುನಿಷ್ಠ ಅಧ್ಯಯನಕ್ಕೆ ಈ ಪರಿಸರವು ಪ್ರಯೋಗಶಾಲೆಯಾಗಿದೆ. ಇಲ್ಲಿರುವ ಚಿಕ್ಕಬೆಟ್ಟವು (ಚಂದ್ರಗಿರಿ) ಸಂಸ್ಕೃತ ಶಾಸನಗಳು ಮತ್ತು ಸಾಹಿತ್ಯದಲ್ಲಿ ಕಟವಪ್ರ, ಕಟವಪ್ರಗಿರಾನಿಹ, ಕಟವಪ್ರಶೈಲ, ಕಟವಪ್ರಶೈಲ ಶಿಖರೇ, ಕನ್ನಡ ಶಾಸನಗಳು ಮತ್ತು ಸಾಹಿತ್ಯದಲ್ಲಿ ಕಟವಪ್ಪನಲ್ಗಿರಿ,

ಕಟವಪ್ರಶೈಲ, ಕಟವಪ್ರಗಿರಿ, ಕಟ್ವಪ್ರಗಿರಿ, ಕಟಪ್ಪ, ಕಟಪ್ರ, ಕಟ್ವಪ್ಪ, ಕಟ್ವಿಪ್ಪಿನಾವೆಟ್ಟ, ಕಟ್ವಿಪ್ಪಿನ್ದುರ್ಗ, ಕಟ್ವಿಪ್ಪಿ, ಕಟ್ವಿಪ್ಪು, ಕಟ್ವಪ್ಪತೀರ್ಥ, ಕಟಬ್ರಾಪ್ಪರ್ವತ, ಕಟ್ಬಿಪ್ಪ, ಕಟ್ಬಿಪ್ಪು, ಕಬ್ಬಪ್ಪು, ಕಟ್ಬಿಪ್ಪಿನಾ ಶೈಲದುಳ್, ಕಾಟ್ಬಿಪ್ಪುತೀರ್ಥ, ಕಾಟ್ಬಿಪ್ಪುನಾಡು, ಕಟ್ಬಿಪ್ಪು ನಾಡಡವಿಯ ಬೆಟ್ಟ, ತೀರ್ಥಗಿರಿ, ರಿಷಿಗಿರಿ, ಚಂದ್ರಗಿರಿ ಎಂದೆಲ್ಲ ಕರೆಯಲ್ಪಟ್ಟಿದೆ. ಕನ್ನಡ ಶಾಸನಗಳ ತಲಕಾವೇರಿ, ಕನ್ನಡ ಲಿಪಿ ವಿಕಾಸದ ಪ್ರಯೋಗಶಾಲೆ ಎಂದೆನಿಸಿರುವ ಈ ಬೆಟ್ಟದ ಮೇಲ್ಭಾಗದಲ್ಲಿಯೇ ಪ್ರಾರಂಭದಲ್ಲಿ ಧಾರ್ಮಿಕ ಮತ್ತು ಲೌಕಿಕ ವಾಸ್ತು ರಚನೆಗಳ ನಿರ್ಮಾಣ ಆರಂಭವಾಗಿದೆ. ಇಲ್ಲಿ ಒಟ್ಟು ಹನ್ನೆರಡು ಬಸದಿಗಳಿವೆ. ಇವೆಲ್ಲವೂ ಕೆಂಪು ಛಾಯೆಯಿಂದ ಕೂಡಿದ ಬಿಳಿಯ ವರ್ಣದ ಶಿಲೆಗಳಲ್ಲಿ ನಿರ್ಮಾಣವಾಗಿವೆ. ಕ್ರಿ.ಶ. ಸುಮಾರು ೧೦ನೆಯ ಶತಮಾನದಿಂದ ದೊಡ್ಡಬೆಟ್ಟದ (ಇಂದ್ರಗಿರಿ / ವಿಂದ್ಯಗಿರಿ) ಮೇಲ್ಭಾಗದಲ್ಲಿ ವಾಸ್ತು ರಚನೆಗಳ ನಿರ್ಮಾಣ ಪ್ರಾರಂಭವಾಗಿದೆ. ಕೆಲವು ಶಾಸನಗಳು ಮತ್ತು ಸಾಹಿತ್ಯದಲ್ಲಿ ಪೆರ್ಗ್ಗಟ್ವಿಪ್ಪು (ಪಿರಿಯ ಕಟ್ವಿಪ್ಪು) ಎಂದು ಕರೆಯಲ್ಪಟ್ಟಿರುವ ಈ ಬೆಟ್ಟದ ಮೇಲೆ ಎಂಟು ಬಸದಿಗಳಿವೆ. ಈ ಎರಡೂ ಬೆಟ್ಟಗಳ ಮಧ್ಯದಲ್ಲಿರುವ ಶ್ರವಣಬೆಳಗೊಳ ನಗರದಲ್ಲಿ ಕ್ರಿ.ಶ. ಸುಮಾರು ೧೨ನೆಯ ಶತಮಾನದ್ದಿಂದ ವಾಸ್ತು ರಚನೆಗಳ ನಿರ್ಮಾಣ ಪ್ರಾರಂಭವಾಗಿದೆ. ಇಲ್ಲಿ ಏಳು ಬಸದಿಗಳಿವೆ.

ಶ್ರವಣಬೆಳಗೊಳದ ಚರಿತ್ರೆಯ ದಿಕ್ಕನ್ನೇ ಬದಲಿಸಿ ಇದನ್ನು ಮಾನವ ಧರ್ಮದ ಪರಮೋಚ್ಚ ಕೇಂದ್ರವನ್ನಾಗಿ ರೂಪಿಸುವಲ್ಲಿ ಚಾವುಂಡರಾಯನ ಶ್ರದ್ಧೆ, ಭಕ್ತಿ, ಸಾಹಸ ಅಮೋಘವಾಗಿದೆ. ದಕ್ಷಿಣ ಮಧುರೆಯ ಬ್ರಹ್ಮಕ್ಷತ್ರಿಯ ವಂಶದ ಮಹಾಬಲಯ್ಯ ಮತ್ತು ಕಾಳಲಾದೇವಿ ದಂಪತಿಗಳ ಮಗನಾದ ಚಾವುಂಡರಾಯನು ರಾಜಕೀಯ, ಆಡಳಿತ, ಧಾರ್ಮಿಕ, ಸಾಮಾಜಿಕ, ಆರ್ಥಿಕ, ಸಾಹಿತ್ಯಿಕ, ವಾಸ್ತುಕಲೆ, ಶಿಲ್ಪಕಲೆ ಮೊದಲಾದ ಕ್ಷೇತ್ರ ಗಳಲ್ಲಿ ಗಣನೀಯ ಸಾಧನೆಗೈದಿದ್ದಾನೆ. ಆತನ ಕೊಡುಗೆಗಳು ಇಂದಿಗೂ ಅಜರಾಮರವಾಗಿ ಉಳಿದಿವೆ. ಗಂಗರ ಮರುಲದೇವ, ಇಮ್ಮಡಿ ಮಾರಸಿಂಹ, ನಾಲ್ವಡಿ ರಾಚಮಲ್ಲ ಮತ್ತು ರಕ್ಕಸಗಂಗರ ಸೇನಾಪತಿಯೂ ಯೋಧಾಗ್ರಣಿಯೂ ಸಂಧಿವಿಗ್ರಹಿಯೂ ಮಹಾಮಂತ್ರಿಯೂ ಆಗಿ ಗಂಗ ಮನೆತನವನ್ನು ಕಟ್ಟಿ ಬೆಳೆಸಿದ ಮಹಾಪುರುಷನಾಗಿದ್ದಾನೆ. ಆತನ ಅಜ್ಜ ಗೋವಿಂದಯ್ಯ, ತಂದೆ ಮಹಾಬಲಯ್ಯ, ತಾಯಿ ಕಾಳಲಾದೇವಿ, ಧರ್ಮಪತ್ನಿ ಅಜಿತಾ ದೇವಿ, ಮಗ ಜಿನದೇವಣ್ಣ, ಸಹೋದರ ನಾಗವರ್ಮ, ಸಹೋದರಿ ಪುಲ್ಲವ್ವ, ಚಿಕ್ಕಪ್ಪ ಈಶ್ವರಯ್ಯ ಅವರುಗಳು ಕೈಗೊಂಡ ಜೈನ ಚಟುವಟಿಕೆಗಳೂ ಅನನ್ಯವಾಗಿವೆ.

### ೩. ಶ್ರವಣಬೆಳಗೊಳದ ಬಾಹುಬಲಿ ಶಿಲ್ಪ

ಶ್ರವಣಬೆಳಗೊಳದ ಬಾಹುಬಲಿ ಶಿಲ್ಪದ ಪ್ರಾಚೀನತೆ, ಪ್ರತಿಷ್ಠಾಪನೆಯ ಕುರಿತು ಪಂಚಬಾಣನ 'ಭುಜಬಲಿ ಚರಿತೆ', 'ಸ್ಥಳಪುರಾಣ' ಮತ್ತು ದೇವಚಂದ್ರನ 'ರಾಜಾವಳಿ ಕಥಾಸಾರ'ದಲ್ಲಿ, "ಚಾವುಂಡರಾಯನ ತಾಯಿ ಕಾಳಲಾದೇವಿ ಭರತ ಚಕ್ರವರ್ತಿಯಿಂದ ಪೌದನಪುರದಲ್ಲಿ ಸ್ಥಾಪಿತವಾದ ಬಾಹುಬಲಿ ಮೂರ್ತಿಯನ್ನು ನೋಡುವವರೆಗೆ ತುತ್ತೆತ್ತೆನೆಂದು ಪ್ರತಿಜ್ಞೆ ಮಾಡಿದಳು. ತಾಯಿಯ ಆಸೆಯನ್ನು ಈಡೇರಿಸಲು ಚಾವುಂಡ

ರಾಯನು ಸಕಲ ಪರಿವಾರ ಸಮೇತ ಪೋದನಪುರಕ್ಕೆ ಹೊರಟು ಪ್ರಯಾಣ ಮಧ್ಯದಲ್ಲಿ ಶ್ರವಣಬೆಳಗೊಳದಲ್ಲಿ ತಂಗಿದನು. ಅಂದು ರಾತ್ರಿ ಕನಸಿನಲ್ಲಿ ಪದ್ಮಾವತಿ-ಬ್ರಹ್ಮರು ಕಾಣಿಸಿಕೊಂಡು "ಪೋದನಪುರ ದೂರ, ದುರ್ಗಮ. ಈ ಚಂದ್ರಗಿರಿಯಲ್ಲಿ (ಚಿಕ್ಕಬೆಟ್ಟ) ನಿಂತು ಇಂದ್ರಗಿರಿಗೆ (ದೊಡ್ಡಬೆಟ್ಟ) ಬಾಣಬಿಡಲು ಬಾಹುಬಲಿಜಿನ ಇಲ್ಲಿಯೇ ಪ್ರತ್ಯಕ್ಷನಾಗುವನು" ಎಂದು ಹೇಳಿದರು. ಕಾಳಲಾದೇವಿಗೂ ಇಂಥದೇ ಕನಸು ಬಿದ್ದಿದ್ದಿತು. ಮರುದಿನ ಮುಂಜಾನೆ ಚಾವುಂಡರಾಯನು ಶುಚಿರ್ಭೂತನಾಗಿ ಚಂದ್ರಗಿರಿಯ ಮೇಲೆ ದಕ್ಷಿಣಾಭಿಮುಖವಾಗಿ ನಿಂತು, ಇಂದ್ರಗಿರಿಗೆ ಬಾಣಪ್ರಯೋಗ ಮಾಡಿದನು. ಬಾಹುಬಲಿಯ ಮಸ್ತಕ ದರ್ಶನವಾಯಿತು. ಜೈನಾಚಾರ್ಯರು ಸುತ್ತಿಗೆಯಿಂದ ಹೊಡೆಯಲು ಸುತ್ತಲೂ ಆವರಿಸಿದ್ದ ಕಲ್ಲು ಕಳಚಿ 'ಕೋಟಿ ಚಂದ್ರಾದಿತ್ಯಕಿರಣ, ಸುಮನೋಹರಭಯಂಕರ ಜಿನಚಂದ್ರನ' ದರ್ಶನವಾಯಿತು. ಆ ಮೂರ್ತಿಯ ಮಗ್ಗುಲಲ್ಲಿ 'ರಾಮ-ರಾವಣಪೂಜಿತ' ಎಂದಿದ್ದ ಅಕ್ಷರ ಓದಿ ಚಾವುಂಡರಾಯನು ರೋಮಾಂಚನಗೊಂಡನು" ಎಂದೆಲ್ಲ ನಿರೂಪಣೆಗಳಿವೆ.[೧೦] ಚಿಕ್ಕಬೆಟ್ಟದ ಮೇಲೆ ಒಂದು ಎತ್ತರವಾದ ಬಂಡೆಯಿದೆ. ಇದರ ಮೇಲೆ ಪಾದಚಿಹ್ನೆಗಳಿವೆ. ಈ ಬಂಡೆಯನ್ನು 'ಚಾವುಂಡರಾಯನ ಕಲ್ಲು' (ಚಾವುಂಡರಾಯನ ಗುಂಡು) ಎಂದು ಕರೆಯಲಾಗುತ್ತದೆ. ಇದರ ಮೇಲೆಯೇ ಚಾವುಂಡರಾಯನು ನಿಂತು ದೊಡ್ಡಬೆಟ್ಟಕ್ಕೆ ಚಿನ್ನದ ಬಾಣವನ್ನು ಬಿಟ್ಟನೆಂದು ಐತಿಹ್ಯಗಳಿವೆ.[೧೧]

ಈ ಮೇಲಿನ ನಿರೂಪಣೆಗಳು ಮತ್ತು ಐತಿಹ್ಯದ ಹಿನ್ನೆಲೆ ಏನೇ ಇದ್ದರೂ, ಚಾವುಂಡರಾಯನು ತನ್ನ ತಾಯಿಯ ಅಪೇಕ್ಷೆಯನ್ನು ಪೂರೈಸಲು ಕ್ರಿ.ಶ. ೯೮೧ರ ಮಾರ್ಚ್ ೭ರಂದು ಶ್ರವಣಬೆಳಗೊಳದ ದೊಡ್ಡಬೆಟ್ಟದ ಮೇಲೆ ಬಾಹುಬಲಿ ಶಿಲ್ಪವನ್ನು ಪ್ರತಿಷ್ಠಾಪಿಸಿದನು ಎಂಬುದಕ್ಕೆ ಕನ್ನಡ, ತಮಿಳು, ಮರಾಠಿ ಲಿಪಿ ಮತ್ತು ಭಾಷೆಯ_

ಶ್ರೀ ಚಾಮುಣ್ಡರಾಜಂ ಮಾಡಿಸಿದಂ ॥
ಶ್ರೀ ಚಾಮುಣ್ಡರಾಜನ್ ಶೆಯ್‌ವಿತ್ತಾನ್ ॥
ಶ್ರೀ ಚಾವುಂಡರಾಜೇಂ ಕರವಿಯಲೇಂ ॥

ಶಾಸನಾಧಾರಗಳಿವೆ.[೧೨] ಇದು ನೇಮಿಚಂದ್ರ ಸಿದ್ಧಾಂತಚಕ್ರವರ್ತಿಗಳ 'ಗೊಮ್ಮಟಸಾರ' ದಲ್ಲಿನ_

ಗೊಮ್ಮಟ ಸಂಗಹಸುತ್ತಂ ಗೊಮ್ಮಟಸಿಹರುವರಿ ಗೋಮ್ಮಟಜಿಣೋ ಯ
ಗೊಮ್ಮಟರಾಯವಿಣಿಮ್ಮಿಯ ದಖ್ಖಿಣಕುಕ್ಕಡ ಜಿಣೋ ಜಯಉ ॥
ಜೇಣ ವಿಣಿಮ್ಮಿಯಪಡಿಮಾವಯಣಂ ಸರ್ವಟಸಿದ್ಧಿ ದೇವೇಹಿಂ
ಸರ್ವಪರಮೋಹಿಜೋಗಿಹಿಂ ದಿಟಂ ಸೋ ಗೊಮ್ಮಟೋ ಜಯಉ ॥

"ಗೊಮ್ಮಟರಾಯನಿಂದ (ಚಾವುಂಡರಾಯನಿಂದ) ನಿರ್ಮಿತವಾದ ದಕ್ಷಿಣ ಕುಕ್ಕುಟ ಜಿನನಿಗೆ (ಬಾಹುಬಲಿಗೆ) ಜಯವಾಗಲಿ, ಈ ಜಿನಬಿಂಬವನ್ನು (ಬಾಹುಬಲಿಯನ್ನು) ನಿಲ್ಲಿಸಿದ ಗೊಮ್ಮಟನಿಗೆ (ಚಾವುಂಡರಾಯುನಿಗೆ) ಜಯುವಾಗಲಿ" ಎಂಬ

ನಿರೂಪಣೆಯಿಂದಲೂ ಮನದಟ್ಟಾಗುತ್ತದೆ.[೧೩] ಹಾಗೆಯೇ ಇದನ್ನು ಕ್ರಿ.ಶ. ೧೧೮೦ರ ಶಾಸನವೂ–

ಜನದಿಂ ತಜ್ಜಿನ ವಿಶ್ರುತಾತಿಶಯಮಂ ತಾಂ ಕೇಳ್ದುನೋಳ್ಪಳ್ತಿ ಚೇ
ತನೆಯೊಳ್ಪುಟ್ಟಿರೆ ಪೋಗಲುದ್ಯಮಿಸೆ ದೂರಂ ದುರ್ಗ್ಗಮಂ ತತ್ಪುರಾ
ವನಿಯೆನ್ದಾರ್ಯ್ಯಜನಂ ಪ್ರಬೋಧಿಸಿದೊಡನ್ತಾದಂದು ತದ್ದೇವಕ
ಲ್ಪನೆಯಿಂ ಮಾಡಿಪೆನೆನ್ದು ಮಾಡಿಸಿದನಿನ್ತೀದೇವನಂ ಗೋಮಟಂ ॥

ಶ್ರುತಮುಂ ದರ್ಶನಶುದ್ಧಿಯುಂ ವಿಭವಮುಂ ಸದ್ವೃತ್ತಮುಂ ದಾನಮುಂ
ಧೃತಿಯುಂ ತನ್ನೊಳೆ ಸನ್ದ ಗಂಗಕುಳಚಂದ್ರಂ ರಾಚಮಲ್ಲಂ ಜಗ
ನ್ನುತನಾಭೂಮಿಪನದ್ವಿತೀಯವಿಭವಂ ಚಾಮುಂಡರಾಯಂ ಮನು
ಪ್ರತಿಮಂ ಗೊಮ್ಮಟನಲ್ತೆ ಮಾಡಿಸಿದನಿನ್ತೀದೇವನಂ ಯತ್ನದಿಂ ॥

"ಗೊಮ್ಮಟರಾಯನು (ಚಾವುಂಡರಾಯ) ಅವರಿವರಿಂದ ಕುಕ್ಕುಟೇಶ್ವರನ (ಬಾಹುಬಲಿ) ಮಹಿಮೆಯನ್ನು ಕೇಳಿ ಆ ವಿಗ್ರಹವನ್ನು ನೋಡಲು ಹಂಬಲಿಸಿದನು. ಇದಕ್ಕಾಗಿ ಪ್ರಯಾಣವನ್ನೂ ಹೊರಟನು. ಅದು ಬಹು ದೂರ ಮತ್ತು ದುರ್ಗಮವಾದ ಸ್ಥಳ ಎಂದು ತಿಳಿದವರು ಹೇಳಿದಾಗ ಅಂಥ ವಿಗ್ರಹವನ್ನು ಇಲ್ಲೂ ಮಾಡಿಸುವೆನು ಎಂದು ಚಾವುಂಡರಾಯನು ಶ್ರವಣಬೆಳಗೊಳದಲ್ಲಿ ಮಹಾಮೂರ್ತಿಯನ್ನೂ ಮಾಡಿಸಿದನು. ಗಂಗಕುಲ ಚಂದ್ರನಾದ ರಾಚಮಲ್ಲನು ಜೈನಾಗಮ ಪಾರಂಗತ. ಸಮ್ಯಗ್ ದೃಷ್ಟಿ, ವೈಭವಶಾಲಿ, ಸದಾಚಾರ ಸಂಪನ್ನ, ದಾನಿ, ಜೊತೆಗೆ ಭದ್ರ ಪರಿಣಾಮಿ. ಇಂಥ ಅರಸನ ಅದ್ವಿತೀಯ ವಿಭವನಾದ ಗೊಮ್ಮಟರಾಯನು ಕಲಿಕಾಲದ ಮನುವೆನಿಸಿದನು. ಈ ಮಹಾಪುರುಷನೇ ಮಹಾಪ್ರಯತ್ನವೆಸಗಿ ಗೊಮ್ಮಟ ಮೂರ್ತಿಯನ್ನೂ ಪ್ರತಿಷ್ಠೆ ಮಾಡಿಸಿದನು" ಎಂದು ಸ್ಪಷ್ಟಪಡಿಸುತ್ತದೆ.[೧೪] ಕ್ರಿ.ಶ. ೧೩೯೮ರ ಶಾಸನವೂ–

ಯಸ್ಮಿಂಶ್ಚಾಮುಂಡರಾಜೋ ಭುಜಬಲಿನಮಿನಂ ಗುಂಮಟಂ
ಕರ್ಮ್ಮತಾಜ್ಞಂ ಭಕ್ತ್ಯಾ ಶಕ್ತ್ಯಾ ಚ ಮುಕ್ತ್ಯೈ ಜಿತಸುರನಗರೇ
ಸ್ಥಾಪಯದ್ಭದ್ರ ಮದ್ರೌತದ್ವತ್ಕಾಲತ್ರಯೋತ್ಥೋಜ್ವಲತನು
ಜಿನಬಿಂಬಾನಿ ಮಾನ್ಯಾನಿಚಾನ್ಯಃ ಕೈಲಾಸೇ ಶೀಲಶಾಲೀ
ತ್ರಿಭುವನವಿಲಸರ್ತ್ಕೀರ್ತ್ತಿಚಕ್ರೀವ ಚಕ್ರೇ ॥

"ಅಮರಾವತಿಯನ್ನು ಮೀರಿಸಿದ ಈ ನಗರದಲ್ಲಿ (ಶ್ರವಣಬೆಳಗೊಳ) ಚಾವುಂಡರಾಯನು ಭಕ್ತಿಯಿಂದಲೂ ಪ್ರಯತ್ನಪೂರ್ವಕವಾಗಿಯೂ ಮೋಕ್ಷಾರ್ಥಿಯಾಗಿ ಬೆಟ್ಟದ ಮೇಲೆ ಬಾಹುಬಲಿ ಗೊಮ್ಮಟನನ್ನು ಪ್ರತಿಷ್ಠೆ ಮಾಡಿಸಿದನು" ಎಂದು ದೃಢಪಡಿಸುತ್ತವೆ.

ಈ ಮೇಲಿನ ಸಂಗತಿಯನ್ನು ಬೊಪ್ಪಣ್ಣ ಪಂಡಿತನು ಕ್ರಿ.ಶ. ಸುಮಾರು ೧೨ನೆಯ ಶತಮಾನದ ಶಾಸನದಲ್ಲಿ ಈ ಕೆಳಗಿನಂತೆ ಸವಿಸ್ತಾರವಾಗಿ ನಿರೂಪಿಸಿದ್ದಾನೆ.

ಧೃತಜಯಬಾಹು ಬಾಹುಬಳಿ ಕೇವಳಿರೂಪಸಮಾನ ಪಂಚವಿಂ
ಶತಿಸಮುಪೇತಪಂಚಶತಚಾಪಸಮುಂ ನತಿಯುಕ್ತಮಪ್ಪ ತತ್ಪ್ರ
ತಿಕೃತಿಯಂ ಮನೋಮುದದೆ ಮಾಡಿಸಿದಂ ಭರತಂ ಜಿತಾಖಿಳ
ಕ್ಷಿತಿಪತಿಚಕ್ರಿ ಪೌದನಪುರಾಂತಿಕದೊಳ್ಪುರುದೇವನಂದನಂ ॥

ಚಿರಕಾಲಂ ಸಲೆ ತಜ್ಜಿನಾನ್ತಿಕಧರಿತ್ರೀದೇಶದೊಳ್ ಲೋಕಭೀ
ಕರಣಂ ಕುಕ್ಕುಟಸರ್ಪ್ಪಸಂಕುಳಮಸಂಖ್ಯಂ ಪುಟ್ಟೆದಲ್ಲುಕ್ಕುಟೇ
ಶ್ವರನಾಮನ್ತದಘಾರಿಗಾದುದು ಬಳಿಕ್ಕಂ ಪ್ರಾಕೃತಗ್ಗ್ರಾಯ್ತಗೋ
ಚರಮನ್ತಾಮಹಿಮಂತ್ರತಂತ್ರನಿಯತರ್ಕ್ಕಾಣ್ಬರ್ಗ್ಗಡಿನ್ನುಂ ಪಲರ್ ॥

ಕೇಳಲ್ಕಪ್ಪುದು ದೇವದುಂದುಭಿರವಂ ಮಾತೇನೊ ದಿವ್ಯಾರ್ಚ್ಚನಾ
ಜಾಳಂ ಕಾಣಲುಮಪ್ಪುದಾ ಜಿನನ ಪಾದೋದ್ಯನ್ನಖಪ್ರಸ್ಫುರ
ಲ್ಲೀಲಾದರ್ಪ್ಪಣಮಂ ನಿರೀಕ್ಷಿಸಿದವರ್ಕ್ಕಾಣ್ಬರ್ನ್ನಿಜಾತೀತಜ
ನ್ಮಾಳಂಬಾಕೃತಿಯಂ ಮಹಾತಿಶಯಮಾದೇವಂಗಿಳಾವಿಶ್ರುತಂ ॥

ಜನದಿಂ ತಜ್ಜಿನ ವಿಶ್ರುತಾತಿಶಯಮಂ ತಾಂ ಕೇಳ್ದು ನೋಳ್ಪಕ್ತಿ ಚೇ
ತನೆಯೊಳ್ಪುಟ್ಟಿರೆ ಪೋಗಲುದ್ಯಮಿಸೆ ದೂರಂ ದುರ್ಗ್ಗಮಂ ತತ್ಪುರಾ
ವನಿಯೆನ್ದಾರ್ಯ್ಯಜನಂ ಪ್ರಬೋಧಿಸಿದೊಡನ್ತಾದಂದು ತದ್ದೇವಕ
ಲ್ಪನೆಯಿಂ ಮಾಡಿಪೆನೆನ್ದು ಮಾಡಿಸಿದನಿನ್ತೀದೇವನಂ ಗೋಮಟಂ ॥

ಶ್ರುತಮುಂ ದರ್ಶನಶುದ್ಧಿಯುಂ ವಿಭವಮುಂ ಸದ್ವೃತ್ತಮುಂ ದಾನಮುಂ
ಧೃತಿಯುಂ ತನ್ನೊಳೆ ಸನ್ದ ಗಂಗಕುಳಚಂದ್ರಂ ರಾಚಮಲ್ಲಂ ಜಗ
ನ್ನುತನಾಭೂಮಿಪನದ್ವಿತೀಯವಿಭವಂ ಚಾಮುಂಡರಾಯಂ ಮನು
ಪ್ರತಿಮಂ ಗೊಮ್ಮಟನಲ್ತೆ ಮಾಡಿಸಿದನಿನ್ತೀದೇವನಂ ಯತ್ನದಿಂ ॥

"ವಿಜಯದ ಬಾಹುಗಳನುಳ್ಳ (ತೋಳುಗಳು) ಬಾಹುಬಲಿ ಕೇವಲಿಯ (ಮುಕ್ತಜೀವನ) ರೂಪಕ್ಕೆ ಸಮಾನವಾಗಿರುವಂತೆ ೫೨೫ ಬಿಲ್ಲುಗಳಷ್ಟು ಒಳ್ಳೆಯ ಎತ್ತರದ ಆತನ ಪ್ರತಿರೂಪವನ್ನು (ಪ್ರತಿಮೆಯನ್ನು) ವೃಷಭನಾಥನ ಮಗನೂ, ಸಮಸ್ತ ಪ್ರಭುಗಳನ್ನು ಸಾಧಿಸಿದವನೂ ಆದ ಚಕ್ರವರ್ತಿ ಭರತನು ಪೌದನಪುರದ ಸಮೀಪದಲ್ಲಿ ಸಂತೋಷದಿಂದ ನಿರ್ಮಿಸಿದನು. ಬಹಳ ಕಾಲವಾದ ಮೇಲೆ ಆ ಬಾಹುಬಲಿ ಜಿನನ (ಪ್ರತಿಮೆಯಿದ್ದ) ಭೂಪ್ರದೇಶದಲ್ಲಿ ಲೋಕಕ್ಕೆ ಭಯವುಂಟು ಮಾಡುವ ಲೆಕ್ಕವಿಲ್ಲದಷ್ಟು ಕುಕ್ಕುಟ ಸರ್ಪಗಳ (ಹಾವಿನ ಹೆಡೆಯಂತೆ ತಲೆ, ಕೋಳಿಯ ಮೈಯಂತೆ ಮೈಯುಳ್ಳ ಒಂದು ಕಾಲ್ಪನಿಕ ಪ್ರಾಣಿ, ವಿಷಜಂತು) ರಾಶಿ ಕಾಣಿಸಿಕೊಳ್ಳಲು, ಅಂದಿನಿಂದ ಆ ಪಾಪಗಳಿಗೆ ಶತ್ರುವಾದವನಿಗೆ (ಬಾಹುಬಲಿಗೆ) ಕುಕ್ಕುಟೇಶ್ವರ ಎಂಬ ಹೆಸರಾದುದು ನಿಶ್ಚಯ. (ಹಾಗೆ ಆಗಿ) ಬಳಿಕ ಸಾಮಾನ್ಯ ಜನರಿಗೆ (ಆ ಪ್ರತಿಮೆ) ಅಗೋಚರವಾಯಿತು. (ಆದರೆ) ಆ ನಾಗಮಂತ್ರ, (ನಾಗವಶೀಕರಣ) ತಂತ್ರ ತಿಳಿದವರು ಹಲವರು ಇನ್ನೂ (ಈಗಲೂ) ದರ್ಶನ

ಮಾಡುತ್ತಾರಪ್ಪಾ! ಹೆಚ್ಚು ಮಾತಿನಿಂದೇನು? (ಈಗಲೂ) ದೇವದುಂದುಭಿಧ್ವನಿಯನ್ನು ಕೇಳಬಹುದಾಗಿದೆ, ದಿವ್ಯವಾದ ಪೂಜಾ ಸಾಮಗ್ರಿಗಳ ರಾಶಿಯನ್ನು ಕಾಣಬಹುದಾಗಿದೆ. ಆ ಜಿನನ ಪಾದಗಳ ಶ್ರೇಷ್ಠವಾದ ಉಗುರುಗಳೆಂಬ ಹೊಳೆಯುವ, ಮನೋಹರವಾದ ಕನ್ನಡಿಯನ್ನು ನೋಡಿದವರು (ಪಾದಗಳಿಗೆ ತಲೆಯಿಟ್ಟು ನಮಸ್ಕರಿಸಿದವರು, ಪಾದಗಳ ದರ್ಶನ ಮಾಡಿದವರು) ತಮ್ಮ ಕಳೆದುಹೋದ ಹುಟ್ಟುಗಳ ಸುದೀರ್ಘತೆಯ ಸ್ವರೂಪವನ್ನು (ಜನ್ಮಜನ್ಮಾಂತರಗಳನ್ನು) ಕಾಣುತ್ತಾರೆ (ತಿಳಿಯಬಲ್ಲವರಾಗುತ್ತಾರೆ). ಆ ದೇವನಿಗೆ ಈ ಮಹಾತಿಶಯ ಎನ್ನುವುದು ಲೋಕಪ್ರಸಿದ್ಧವಾದದ್ದು. ಗೋಮಟನು (ಚಾಮುಂಡ ರಾಯನು) ಆ ಜಿನನ ಪ್ರಸಿದ್ಧವಾದ ಮಹಿಮೆಯನ್ನು ಜನರಿಂದ ತಾನು ಕೇಳಿ, ನೋಡುವ ಆಸೆ ಮನಸ್ಸಿನಲ್ಲಿ ಹುಟ್ಟಿರಲು, (ಪೌದನಪುರಕ್ಕೆ) ಹೋಗಬೇಕೆಂದು ಸಿದ್ಧನಾಗಲು, ಹಿರಿಯರು ಆ ಪಟ್ಟಣ ಪ್ರದೇಶ (ಇಲ್ಲಿಗೆ) ದೂರ, (ಅಲ್ಲದೆ) ಪ್ರವೇಶಿಸಲು ಕಷ್ಟಕರವಾದ್ದು ಎಂದು ತಿಳಿವಳಿಕೆ ಹೇಳಲಾಗಿ, "ಹಾಗಾದ ಪಕ್ಷದಲ್ಲಿ ಆ ದೇವನ ರೀತಿಯಲ್ಲಿ (ಆ ಜಿನಪ್ರತಿಮೆಯನ್ನು ಹೋಲುವ ಹಾಗೆ ತಾನೊಂದು ದೇವನನ್ನು, ಎಂದರೆ ಜಿನಪ್ರತಿಮೆಯನ್ನು) ಮಾಡಿಸುತ್ತೇನೆ" ಎಂದು (ಸಂಕಲ್ಪಿಸಿ), ಹೀಗೆ ಈ ದೇವನನ್ನು (ಶ್ರವಣಬೆಳಗೊಳದ ಗೊಮ್ಮಟೇಶ್ವರ ಶಿಲ್ಪವನ್ನು) ನಿರ್ಮಾಣ ಮಾಡಿಸಿದನು. ಶಾಸ್ತ್ರಜ್ಞಾನವೂ (ಜೈನಾಗಮಗಳ ತಿಳಿವಳಿಕೆಯೂ), ಸಮ್ಯಗ್ದರ್ಶನವೂ (ಜೈನ ಧರ್ಮದಲ್ಲಿ ದೃಢವಾದ ಶ್ರದ್ಧೆಯೂ), ಅತಿಶಯತೆಯೂ (ವೈಭವವೂ), ಒಳ್ಳೆಯ ಆಚರಣೆಯೂ (ಸಚ್ಚಾರಿತ್ರವೂ), ದಾನವೂ (ತ್ಯಾಗ ಬುದ್ಧಿಯೂ), ಧೈರ್ಯವೂ (ಕಾರ್ಯಪ್ರವರ್ತನೆಯಲ್ಲಿ ಮುನ್ನುಗ್ಗುವಿಕೆಯೂ), ತನ್ನಲ್ಲಿಯೇ ಸೇರಿರುವ ಗಂಗವಂಶದ ಚಂದ್ರ ರಾಚಮಲ್ಲನು ಜಗತ್ಪ್ರಸಿದ್ಧನು. ಆ ದೊರೆಯ ಎರಡನೆಯ ವೈಭವಶಾಲಿಯಾದ (ವೈಭವದಲ್ಲಿ ಆ ದೊರೆಗೆ ಎರಡನೆಯವನಾದ) ಚಾವುಂಡರಾಯನು, ಮನುವಿಗೆ ಸಮಾನನಾದವನು. (ತಾನು) ಗೊಮ್ಮಟನಲ್ಲವೇ? (ಅವನು) ಹೀಗೆ ಈ ದೇವನನ್ನು (ಶ್ರವಣಬೆಳಗೊಳದ ಗೊಮ್ಮಟ ಶಿಲ್ಪವನ್ನು) ಪ್ರಯತ್ನಪಟ್ಟು ನಿರ್ಮಿಸಿದನು."

ದೊಡ್ಡಬೆಟ್ಟದ (ವಿಂಧ್ಯಗಿರಿ) ಮೇಲ್ಭಾಗದಲ್ಲಿರುವ ಅಂಗಳದ ದಕ್ಷಿಣ ಅಂಚಿನಲ್ಲಿ ಪದ್ಮಪೀಠದ ಮೇಲೆ ಉತ್ತರಕ್ಕೆ ಮುಖಮಾಡಿ ನಿಂತಿರುವ ಬಾಹುಬಲಿ ಶಿಲ್ಪವು ಬಿಳಿ ಕಣಶಿಲೆಯಲ್ಲಿ (ಬೆಣಚುಗಲ್ಲು) ಕಂಡರಿಸಲ್ಪಟ್ಟಿದೆ. ಈ ಶಿಲ್ಪದ ರೂವಾರಿ ಯಾರೆಂಬುದು ತಿಳಿಯದು. ಅರಿಷ್ಟನೇಮಿ ಎಂಬುವವನು ಇದರ ಶಿಲ್ಪಿಯೆಂದು ಸ್ಥಳೀಯ ಐತಿಹ್ಯವಿದೆ. ಆದರೆ ಅದನ್ನು ಪುಷ್ಟೀಕರಿಸುವ ಪ್ರಮಾಣ ಇನ್ನೂ ದೊರತಿಲ್ಲ. ಗಾತ್ರದಲ್ಲಿ ದೊಡ್ಡದು, ಕಲ್ಪನೆಯಲ್ಲಿ ದಿಟ್ಟವು, ರಚನೆಯಲ್ಲಿ ಏಕಶಿಲಾತ್ಮಕವು ಆಗಿರುವ ಬಾಹುಬಲಿಯ ಪ್ರಶಾಂತ ಮುಖಕಾಂತಿಯನ್ನು ಪಡೆದಂಥ ವಿಗ್ರಹಗಳು ದೊರೆಯುವುದು ವಿರಳ. ಬಾಹುಗಳಲ್ಲಿ ಅಧಿಕ ಬಲವನ್ನು ಪಡೆದಿರುವ ಈ ಬಲಿಷ್ಠ ಪುರುಷನು ದೈವೀ ತೇಜಸ್ಸನ್ನು ಪಡೆದು ಕಂಗೊಳಿಸುವ ಗುಂಗುರುಕೂದಲು, ನೀಳನಾಸಿಕ, ಅರ್ಧ ನಿಮೀಲಿತ ನೇತ್ರಗಳು, ಮಾಟವಾದ ತುಟಿ ಹಾಗೂ ಕಪಾಲ ಈ ಶಿಲ್ಪದ ಅತ್ಯುತ್ಕೃಷ್ಟ ಅಂಗಗಳು. ಪಾದಗಳ ಮೇಲೆ ಸಮಭಾರ ಹಾಕಿ ನಿಂತು, ತನ್ನ ಬೃಹತ್ ಬಾಹುಗಳನ್ನು ಇಳಿಬಿಟ್ಟು, ವಿಶಾಲ

ಭುಜಗಳುಳ್ಳ ಈ ದೈವೀಪುರುಷನ ಮಾಪನ ಮಾಡಬಯಸಿದ ಮಾನವ ಶಕ್ತಿಯನ್ನು ಆಹ್ವಾನಿಸಲೆಂಬಂತೆ, ಇಲ್ಲಿಯವರೆಗೆ ಅದನ್ನು ಅಳತೆ ಮಾಡಲೆತ್ನಿಸಿದವರಿಗೆಲ್ಲ ಬಾಹುಬಲಿಯ ಬೃಹತ್ ಶಿಲ್ಪ ಬೇರೆಬೇರೆಯಾಗಿ ಕಂಡಿದೆ. ಬುಕನಾನ್ ಇದು ಏಪ್ಪತ್ತು ಅಡಿ ಮೂರು ಅಂಗುಲ ಎತ್ತರವಿದೆ ಎಂದರೆ, ಸರ್ ಆರ್ಥರ್ ವೆಲ್‌ಸ್ಲಿ (ಡ್ಯೂಕ್ ಆಫ್ ವೆಲ್ಲಿಂಗ್ಟನ್) ಅರವತ್ತು ಅಡಿ ಮೂರು ಅಂಗುಲ ಎತ್ತರವಿದೆ ಎಂದಿದ್ದಾನೆ. ಬೌರಿಂಗ್ (೧೮೬೫ರಲ್ಲಿ ಮೈಸೂರಿನ ಕಮಿಷನರ್) ಇದು ಐವತ್ತೇಳು ಅಡಿ ಇದೆ ಎಂದು ತಿಳಿದರೆ, ವರ್ಕ್‌ಮನ್ (ಥ್ರೂ ಟೌನ್ಸ್ ಅಂಡ್ ಜಂಗಲ್ಸ್ ಕೃತಿಯ ಲೇಖಕ) ಈ ಶಿಲ್ಪವು ಐವತ್ತೆಂಟು ಅಡಿ ಎತ್ತರವಿದೆ ಎಂದು ನಿರ್ಧರಿಸಿದ್ದಾನೆ. ೧೮೭೧ರಲ್ಲಿ ಲೋಕೋಪಯೋಗಿ ಇಲಾಖೆ ಈ ಶಿಲ್ಪವನ್ನು ಅಳೆದು, ಇದು ಐವತ್ತಾರು ಅಡಿ ಎತ್ತರ ಇದೆಯೆಂದು ಈ ಕೆಳಗಿನಂತೆ ವರದಿ ಮಾಡಿದೆ.

| | | |
|---|---|---|
| ಅಂಗಾಲಿನಿಂದ ಕಿವಿಯ ಕೆಳ ಅಂಚಿನವರೆಗೆ | : | ೫೦ ಅಡಿ |
| ಕಿವಿಯಿಂದ ನೆತ್ತಿ | : | ೬ ಅಡಿ |
| ಪಾದದ ಉದ್ದ | : | ೯ ಅಡಿ |
| ಅಂಗುಷ್ಟ | : | ೨ ಅಡಿ |
| ಪೃಷ್ಠದಿಂದ ಕಿವಿ | : | ೨೪ ಅಡಿ |
| ಸೊಂಟದ ಕೆಳಗಿನ ಅಗಲ | : | ೧೩ ಅಡಿ |
| ಟೊಂಕದಿಂದ ಕಿವಿ | : | ೧೭ ಅಡಿ |
| ಭುಜದಿಂದ ಭುಜ | : | ೨೬ ಅಡಿ |
| ತೋರ್ಬೆರಳು | : | ೩ ಅಡಿ ೬ ಅಂಗುಲ |
| ಮಧ್ಯದ ಬೆರಳು | : | ೫ ಅಡಿ ೩ ಅಂಗುಲ |

೧೮೨೪ರಲ್ಲಿ ಕವಿಚಕ್ರವರ್ತಿ ಶಾಂತರಾಜ ಪಂಡಿತನು (ಸರಸಜನ ಚಿಂತಾಮಣಿ ಕಾವ್ಯದ ಕರ್ತೃ) ಇದರ ಉದ್ದಗಲ ಕುರಿತು ಹದಿನಾರು ಪದ್ಯಗಳನ್ನು ರಚಿಸಿದನು. ಮೈಸೂರು ದೊರೆ ಮುಮ್ಮಡಿ ಕೃಷ್ಣರಾಜ ಒಡೆಯರು ಕ್ರಿ.ಶ. ೧೮೨೪ರಲ್ಲಿ ಮಹಾಮಸ್ತಕಾಭಿಷೇಕ ಮಾಡುವುದಕ್ಕೆ ಮುನ್ನ ಮಾಡಿದ ಆಜ್ಞೆಯ ಮೇರೆಗೆ ತಾನು ಈ ಶಿಲ್ಪವನ್ನು ಅಳೆದುದಾಗಿ ಕೊನೆಯ ಪದ್ಯದಲ್ಲಿ ಹೇಳಿ, ಇದರ ಒಟ್ಟು ಎತ್ತರ ೫೪ ಅಡಿ ೩ ಅಂಗುಲ ಎಂದಿರುವನು. ಶ್ರದ್ಧಾಳುಗಳಾದ ಜೈನಬಾಂಧವರಿಗೋಸ್ಕರ ಮತ್ತು ಇತರೆ ಧರ್ಮೀಯರಿಗೆ ಅಚ್ಚರಿಯುಂಟು ಮಾಡುವುದಕ್ಕೋಸ್ಕರ ಈ ವಿಗ್ರಹದ ಎತ್ತರವನ್ನು ವರದಿ ಮಾಡಲಾಯಿತು.

| | | |
|---|---|---|
| ಅಡಿಯಿಂದ ಮುಡಿಯವರೆಗೆ | : | ೩೬ ೧/೮ ಮೊಳ |
| ಪಾದದಿಂದ ಹೊಕ್ಕಳ | : | ೨೦ ಮೊಳ |
| ಹೊಕ್ಕಳದಿಂದ ತಲೆ | : | ೧೬ ೧/೨ ಮೊಳ |
| ಗದ್ದದಿಂದ ನೆತ್ತಿ | : | ೬ ಮೊಳ |

| | | |
|---|---|---|
| ಭುಜದಿಂದ ಭುಜ | : | ೧೬ ಮೊಳ |
| ಟೊಂಕದ ಸುತ್ತಳತೆ | : | ೨೦ ಮೊಳ |
| ಕಿವಿಯಿಂದ ಕಿವಿ | : | ೮ ಮೊಳ |
| ಹೆಬ್ಬೆರಳಿನ ಉದ್ದ | : | ೨ ೧/೪ ಮೊಳ |
| ಅಂಗುಷ್ಟ | : | ೪ ೧/೧೦ ಮೊಳ |
| ಪಾದ | : | ೪ ೧/೧೦ ಮೊಳ |

ಆರ್. ನರಸಿಂಹಾಚಾರ್ ಅವರು (೧೯೨೩ರಲ್ಲಿ ಶ್ರವಣಬೆಳಗೊಳದ ಶಾಸನಗಳನ್ನು ಸಂಪಾದಿಸಿರುವವರು) ಇದು ಐವತ್ತೇಳು ಅಡಿ ಎತ್ತರ ಇರುವುದೆಂದು ಭಾವಿಸಿದ್ದಾರೆ. ಮೈಸೂರು ಪುರಾತತ್ವ ಇಲಾಖೆ ಇದು ಐವತ್ತೆಂಟು ಅಡಿ ಎತ್ತರ ಇದೆಯೆಂದು ೧೯೫೭ರಲ್ಲಿ ಈ ಕೆಳಗಿನಂತೆ ವರದಿ ಮಾಡಿದೆ.

| | | |
|---|---|---|
| ಎತ್ತರ | : | ೫೮ ಅಡಿ |
| ಪಾದದಿಂದ ಕಿವಿ | : | ೫೧ ಅಡಿ |
| ಕಿವಿಯ ಕೆಳ ಅಂಚಿನಿಂದ ನೆತ್ತಿ | : | ೬ ಅಡಿ ೬ ಅಂಗುಲ |
| ಪಾದದ ಉದ್ದ | : | ೮ ಅಡಿ |
| ಟೊಂಕದ ಅಗಲ | : | ೧೦ ಅಡಿ |
| ಭುಜದಿಂದ ಭುಜ | : | ೨೩ ಅಡಿ ೭೧/೨ ಅಂಗುಲ |
| ಅಂಗುಷ್ಟ | : | ೨ ಅಡಿ ೯ ಅಂಗುಲ |
| ಮಧ್ಯದ ಕೈಬೆರಳು | : | ೫ ಅಡಿ |
| ಹೆಬ್ಬೂಟ್ಟು | : | ೪ ಅಡಿ ೮ ಅಂಗುಲ |

ಕರ್ನಾಟಕ ವಿಶ್ವವಿದ್ಯಾಲಯದ ಭಾರತೀಯ ಕಲಾ ಇತಿಹಾಸ ಸಂಸ್ಥೆ ೧೯೮೦ರ ನವೆಂಬರದಲ್ಲಿ ಥಿಯೋಡಲೈಟ್ ಉಪಕರಣದ ಸಹಾಯದಿಂದ ಈ ಶಿಲ್ಪವನ್ನು ಕರಾರುವಾಕ್ಕಾಗಿ ಅಳೆದು, ಇದು ಐವತ್ತೆಂಟು ಅಡಿ ಎಂಟು ಅಂಗುಲ ಎತ್ತರ ಇದೆಯೆಂದು ತೀರ್ಮಾನಕ್ಕೆ ಬಂದಿದೆ.

| | | |
|---|---|---|
| ಎತ್ತರ | : | ೫೮ ಅಡಿ ೮ ಅಂಗುಲ |
| ಪಾದ | : | ೨ ಅಡಿ ೮ ಅಂಗುಲ |
| ಪಾದದಿಂದ ಮೊಣಕಾಲು | : | ೧೫ ಅಡಿ ೨ ಅಂಗುಲ |
| ಪಾದದಿಂದ ಟೊಂಕ | : | ೩೧ ಅಡಿ ೪ ಅಂಗುಲ |
| ಪಾದದಿಂದ ಹೊಕ್ಕಳ | : | ೩೪ ಅಡಿ ೧ ಅಂಗುಲ |
| ಪಾದದಿಂದ ಕತ್ತಿನ ರೇಖೆ | : | ೪೫ ಅಡಿ ೧೦ ಅಂಗುಲ |
| ಪಾದದಿಂದ ಕತ್ತು | : | ೪೭ ಅಡಿ ೮ ಅಂಗುಲ |
| ಮೊಳಕಾಲಿನಿಂದ ಟೊಂಕ | : | ೧೬ ಅಡಿ ೨ ಅಂಗುಲ |
| ಟೊಂಕದಿಂದ ಹೊಕ್ಕಳ | : | ೨ ಅಡಿ ೯ ಅಂಗುಲ |

| | | |
|---|---|---|
| ಹೊಕ್ಕಳದಿಂದ ಕತ್ತಿನ ರೇಖೆ | : | ೧೦ ಅಡಿ ೧೧ ಅಂಗುಲ |
| ಕತ್ತಿನ ರೇಖೆಯಿಂದ ಕತ್ತಿನ ಎತ್ತರ | : | ೨ ಅಡಿ ೮ ಅಂಗುಲ |
| ಕತ್ತಿನ ಮೇಲ್ಭಾಗದಿಂದ ನೆತ್ತಿ | : | ೧೧ ಅಡಿ |
| ಬಾಹುವಿನ ಉದ್ದ | : | ೩೦ ಅಡಿ |
| ಶಿಶ್ನದ ಉದ್ದ | : | ೪ ಅಡಿ |
| ಕಿವಿಯ ಉದ್ದ | : | ೫ ಅಡಿ ೧೦ ಅಂಗುಲ |
| ನಾಸಿಕದ ಉದ್ದ | : | ೩ ಅಡಿ ೯ ಅಂಗುಲ |
| ಹಸ್ತದ ಉದ್ದ–ಮಧ್ಯದ ಬೆರಳು | : | ೮ ಅಡಿ |
| ತೋರ್ಬೆರಳು | : | ೭ ಅಡಿ |
| ಹೆಬ್ಬೊಟ್ಟು | : | ೫ ಅಡಿ |
| ಅಗಲ–ಕಿವಿಯಿಂದ ಕಿವಿಗೆ | : | ೮ ಅಡಿ ೧೦ ಅಂಗುಲ |
| ಟೊಂಕ | : | ೯ ಅಡಿ ೧ ಅಂಗುಲ |
| ಭುಜ | : | ೨೩ ಅಡಿ ೯ ಅಂಗುಲ |
| ಎದೆ | : | ೧೨ ಅಡಿ ೮ ಅಂಗುಲ |
| ಕತ್ತು | : | ೬ ಅಡಿ ೪ ಅಂಗುಲ |

ಶ್ರವಣಬೆಳಗೊಳದ ಐವತ್ತೆಂಟು ಅಡಿ ಎಂಟು ಅಂಗುಲ ಎತ್ತರದ ಬಾಹುಬಲಿಯ ಭವ್ಯ ಶಿಲ್ಪವನ್ನು ಸರಿಗಟ್ಟುವ ಬೇರೊಂದು ಶಿಲ್ಪವು ಭಾರತದ ಯಾವ ಭಾಗದಲ್ಲಿಯೂ ಕಾಣಸಿಗದು. ಬಾಮಿಯಾನ್‌ನಲ್ಲಿರುವ ಬುದ್ಧನ ವಿಗ್ರಹಗಳೇನೊ ಇದಕ್ಕಿಂತ ಎರಡು ಮೂರು ಪಟ್ಟು (ಒಂದು ೧೭೦ ಅಡಿ, ಮತ್ತೊಂದು ೧೩೫ ಅಡಿ ಎತ್ತರ) ಎತ್ತರವಾಗಿರುವವಾದರೂ, ಅವನ್ನು ಕಗ್ಗಲ್ಲಿನಲ್ಲಿ ಕೆತ್ತಲಾಗಿಲ್ಲ. ಬಾಹುಬಲಿ ಶಿಲ್ಪಕ್ಕೆ ಅತ್ಯಂತ ಸಮೀಪವಾದುದು ಈಜಿಪ್ಟಿನ ಇಮ್ಮಡಿ ರಾಮೆಸೆಸ್ ವಿಗ್ರಹ. ಆದರೆ ಅದು ಬಾಹುಬಲಿಯಂತೆ ಸ್ವತಂತ್ರವಾಗಿ ನಿಂತಿಲ್ಲ ಹಾಗೂ ದೇವತೆಯ ಮೂರ್ತಿ ಅಲ್ಲ. ಅದೇ ದೇಶದ ಮೆಮ್ನಾನ್ ಅದ್ಭುತಗಳು ಬಾಹುಬಲಿಗಿಂತ ಹತ್ತು ಅಡಿ ಎತ್ತರವಿದ್ದು, ಸಾವಿರಾರು ವರ್ಷ ಪುರಾತನವಾಗಿವೆ. ಆದರೆ ಅವನ್ನು ಏಕಶಿಲೆಯಲ್ಲಿ ಕೆತ್ತಲಾಗಿಲ್ಲ. ಷಾಫ್ರಾನ್‌ನ ಸ್ಫಿಂಗ್ಸ್ ಸುಮಾರು ಅರವತ್ತಾರು ಅಡಿ ಎತ್ತರವಿದೆ. ಈ ಅರ್ಧ ಪಶುವಿನ ಶಿಲ್ಪವನ್ನೂ ಏಕಶಿಲೆಯಲ್ಲಿ ಕೆತ್ತಲಾಗಿಲ್ಲ. ಈ ಎಲ್ಲ ಕಾರಣಗಳಿಂದ ಶ್ರವಣಬೆಳಗೊಳದ ಬಾಹುಬಲಿಯ ಶಿಲ್ಪವು ಪ್ರಪಂಚದಲ್ಲೇ ವೈಶಿಷ್ಟ್ಯಪೂರ್ಣ ಶಿಲ್ಪವೆನಿಸಿದೆ. ಐತಿಹಾಸಿಕ ಯುಗದ ಶಿಲ್ಪಗಳಲ್ಲಿ ಅಭೂತಪೂರ್ವ ಕೃತಿ ಎನಿಸಿದೆ. ನ್ಯೂಯಾರ್ಕಿನ ೩೦೫ ಅಡಿ ಎತ್ತರದ 'ಸ್ವಾತಂತ್ರ್ಯ ದೇವತೆ', ಬ್ಲಾಕ್‌ಹಿಲ್‌ನ ತುದಿಯನ್ನಲಂಕರಿಸಿರುವ ಅಮೇರಿಕದ ಅಧ್ಯಕ್ಷರ ಅರವತ್ತು ಅಡಿ ಎತ್ತರದ ವಿಗ್ರಹಗಳು ಬೇರೊಂದು ಯುಗದ, ಬೇರೊಂದು ಗುರಿ–ತಂತ್ರ ಹೊಂದಿದ ಕೃತಿಗಳು. ಇತಿಹಾಸ ಯುಗದಲ್ಲಿ ಪ್ರಪಂಚದ ಯಾವ ಶಿಲ್ಪಿಯೂ ಬಾಹುಬಲಿಯಂಥ ಭವ್ಯ ಶಿಲ್ಪವನ್ನು ಕಗ್ಗಲ್ಲಿನ ಏಕಶಿಲೆಯಲ್ಲಿ ಕೆತ್ತುವ ಧೈರ್ಯವನ್ನಾಗಲಿ ತಾಳ್ಮೆಯನ್ನಾಗಲಿ ತೋರುವ ಸಾಹಸ ಮಾಡಲಿಲ್ಲ. ಅಲ್ಲದೆ ತನ್ನ ಪ್ರಯತ್ನದಲ್ಲಿ ಈ ಮಟ್ಟದ ಧಾರ್ಮಿಕ

ಸೊಬಗನ್ನು ಸೆರೆಹಿಡಿಯುವ ಸಿದ್ಧಿಯನ್ನು ಸಾಧಿಸಿಕೊಳ್ಳಲಿಲ್ಲವೆಂದರೆ ಅತಿಶಯೋಕ್ತಿ ಏನೂ ಅಲ್ಲ. ಪಂಡಿತ ಜವಾಹರಲಾಲ ನೆಹರು ಅವರು ೧೯೫೧ರಲ್ಲಿ ಶ್ರವಣಬೆಳಗೊಳಕ್ಕೆ ಬೆಟ್ಟಿ ನೀಡಿದ್ದ ಸಂದರ್ಭದಲ್ಲಿ ಬಾಹುಬಲಿಯ ದರ್ಶವನ್ನು ಪಡೆದು ಇಲ್ಲಿಯ ಸಂದರ್ಶಕರ ಪುಸ್ತಕದಲ್ಲಿ "ನಾನು ಇಲ್ಲಿಗೆ ಬಂದು ಮಂತ್ರಮುಗ್ಧನಾದೆನು" ಎಂದು ಬರೆದಿದ್ದಾರೆ.

ಬಾಹುಬಲಿಯ ಪಾದದಡಿಯಲ್ಲಿರುವ ಹುತ್ತದಲ್ಲಿ ಸರ್ಪಗಳು ಹರಿದಾಡುತ್ತಿವೆ. ಮಾಧವಿ ಲತೆಗಳು ಈತನ ಕಾಲುಗಳನ್ನು ಸುತ್ತಿಕೊಂಡು ಹಬ್ಬಿ ತೋಳುಗಳಲ್ಲಿ ಬೆಳೆದು ಭುಜಗಳಲ್ಲಿ ಕೊನೆಗೊಂಡಿವೆ. ಕೂದಲುಗಳು ಗುಂಗುರು ಗುಂಗುರಾಗಿವೆ. ವಿಶಾಲವಾದ ಭುಜಗಳು, ಆಜಾನುಬಾಹುಗಳು, ಉದ್ದವಾದ ಕಿವಿಗಳು, ತುಂಬಿದ ಅಧರಗಳು, ಬೊಗಸೆಗಣ್ಣುಗಳು, ಮಂದಸ್ಮಿತ–ಈ ಶಿಲ್ಪದ ವಿಶಿಷ್ಟ ಲಕ್ಷಣಗಳಾಗಿವೆ. ಈ ಶಿಲ್ಪವನ್ನು ಕಂಡರಿಸಿರುವ ಶಿಲ್ಪಿಗೆ ಜಿನಸೇನಾಚಾರ್ಯರ 'ಪೂರ್ವಪುರಾಣ'ದ (ಕ್ರಿ.ಶ. ೮೩೭) ಸಂಪೂರ್ಣ ಪರಿಚಯವಿದ್ದಂತೆ ತ್ತೋರುತ್ತದೆ. ಎಂತಲೇ ಆತನು ಈ ಶಿಲ್ಪದಲ್ಲಿ ಆ ಲಕ್ಷಣ ಗಳನ್ನೂ ಸೊಗಸಾಗಿ ಚಿತ್ರಿಸಿದ್ದಾನೆ. ಹಾಗೆಯೇ ಈ ಲಕ್ಷಣಗಳು ಪಂಪನ 'ಆದಿಪುರಾಣ' ದಲ್ಲಿನ (ಕ್ರಿ.ಶ. ೯೪೧–೪೨)–

ಜೈನದೀಕ್ಷೆಯಂ ಕೈಕೊಂಡು ಗುರುವಿನನುಮತದಿಂ ದ್ವಾದಶಾಂಗ
ಚತುರ್ದಶಪೂರ್ವಂಗಳಂ ಕಲ್ತು ತದನುಮತದೊಳ್ ಬಟಿಯಮೇಕ
ವಿಹಾರಿಯಾಗಿ ಸಂವತ್ಸರಾವಧಿವರಂ ಪ್ರತಿಮಾಯೋಗದೊಳ್ ನಲೆ
ಅಡಿವಿಡಿದಿಟ್ಟ ಪುತ್ತುಗಳ ನೆತ್ತಿಗಳಿಂ ನಿಮಿರ್ದಿರ್ದ ಬಳ್ಳಿಗ
ಳ್ವಿಡಿದು ವಿಷೋರಗಪ್ರತತಿ ನೋಟ್ಪೊಡಗುರ್ವಿಸೆ ಸುಯ್ವ ಸುಯ್ಗಳಿಂ
ಕಿಡಿ ಪೊಱಪೊಣ್ಮೆ ಬಾಹುಬಲಿಯೋಗಿಯ ಘೋರತಪೋಮಹಾಗ್ನಿಯಿಂ
ಸುಡೆ ಸುಟಿದುಣ್ಮುತಿರ್ಪ ಕಿಡಿಗಳ್ಗಣೆಯಾದುವು ತತ್ಪ್ರದೇಶದೊಳ್ ॥

ವಿಜಯಶರಾಸನಗುಣಘಾ
ತಜಾತಕಾಳಿಕೆಯನೆತ್ತಮಗ್ಗಳಿಸಿದುದಾ
ಭುಜಬಲಿಯ ಭುಜದ್ವಯದೊಳ್
ಭುಜಂಗನಿಶ್ವಾಸಧೂಮವೇಣೀನಿಕರಂ ॥

ಬಳೆದ ಜಡೆ ನಿಮಿರ್ದ ಬಳ್ಳಿಗ
ಳೊಳೆ ಪೆಣೆದು ವಿಷೋರಗಾನಳಾರ್ಚಿಗಳಿಂದಂ
ಮಿಳಿರ್ದುವು ಮುನಿಪಧ್ಯಾನಾ
ನಳನಿರ್ಯದ್ಧೂಮವೇಣಿಕಾನಿಕರದವೊಲ್ ॥

ಪರಮಮುನಿತನುವನಡರ್ವುದು
ಸುರದ್ರುಮಂಗೆತ್ತು ಯುವತಿರೂಪದಿನೆಂದಾ
ದರದಿಂ ಬಿಡಿಸಿದರನಘನ
ನಿರದಡರ್ವ ಲತಾಪ್ರತಾನಮಂ ಖೇಚರಿಯರ್ ॥

"ಬಾಹುಬಲಿ ದಿಗಂಬರನಾಗಿ ಗುರುವಿನ ಅನುಮತದಿಂದ ದ್ವಾದಶಾಂಗ ಚತುರ್ದಶ ಪೂರ್ವಗಳನ್ನು ಕಲಿತನು. ಆಮೇಲೆ ಇವನು ಏಕವಿಹಾರಿಯಾಗಿ ಒಂದು ವರ್ಷ ಕಾಲ ಪ್ರತಿಮಾಯೋಗದಲ್ಲಿ ನಿಂತು ತಪವೆಸಗಿದನು. ಆ ಸಂದರ್ಭದಲ್ಲಿ ಇವನ ಪಾದಗಳಲ್ಲಿ ಹುತ್ತ ಬೆಳೆಯಿತು. ಹುತ್ತದ ಮೇಲೆ ಬಳ್ಳಿಗಳು ಬೆಳೆದು ಹಬ್ಬಿದವು. ಈ ಪೊದರಿನಲ್ಲಿ ವಿಷಸರ್ಪಗಳು ಹೆಡೆಯೆತ್ತಿ ಬಿಸಿಯುಸಿರನ್ನು ಬಿಡುತ್ತ ಕಿಡಿಗಾರಿದವು. ಈ ದೃಶ್ಯ ರುದ್ರರಮಣೀಯವಾಗಿದ್ದಿತು. ಬಾಹುಬಲಿಯ ತಪೋಜ್ವಾಲೆಯಾಗಿ ಇವು ಕಂಗೊಳಿಸಿದವು. ಇವನ ಬಾಹುಮೂಲವು ಮೊದಲೇ ಬಿಲ್ಲಿನ ಹೆದೆಯು ಉಜ್ಜಿ ಕಪ್ಪಾಗಿದ್ದಿತು. ಹಾವುಗಳು ಇವನ ಭುಜಗಳನ್ನು ಬಳಸಿ ತಮ್ಮ ಉಸಿರಾಟದಿಂದ ಮೊದಲೇ ಇದ್ದ ಕಪ್ಪನ್ನು ಕಡುಗಪ್ಪು ಮಾಡಿದವು. ಬೆಳೆದ ಇವನ ಜಡೆಯು ಬಳ್ಳಿಗಳೊಡನೆ ತೆಕ್ಕೆಹಾಕಿಕೊಂಡಿತು. ವಿಷಸರ್ಪಗಳ ಉಸಿರಾಟಕ್ಕೆ ಈ ಜಡೆ ಅಲುಗಾಡುತ್ತಿದ್ದಿತು. ಬಾಹುಬಲಿಯ ಧ್ಯಾನಾಗ್ನಿಯಿಂದ ಹೊಗೆಯು ಕಾರುತ್ತಿರುವಂತೆ ಭಾಸವಾಯಿತು. ಖೇಚರಿಯರು ಬಂದು ಈತನ ಮೈಗೆ ಗಡರಿದ ಬಳ್ಳಿಯ ತೊಡರನ್ನು ಬಿಡಿಸಿದರು" ಎಂಬ ವಿವರಣೆಗಳನ್ನು ನೆನಪಿಸುತ್ತವೆ.

ಶ್ರವಣಬೆಳಗೊಳದ ಬಾಹುಬಲಿ ಶಿಲ್ಪದ ಔನ್ನತ, ಸೌಂದರ್ಯ ಮತ್ತು ಅತಿಶಯಗಳನ್ನು ಬೊಪ್ಪಣ್ಣ ಪಂಡಿತನು–

ಅತಿತುಂಗಾಕೃತಿಯಾದೊಡಾಗದದಱೊಳ್ ಸೌಂದರ್ಯ್ಯಮೌನ್ನತ್ಯಮುಂ
ನುತಸೌನ್ದರ್ಯ್ಯಮುಮಾಗೆ ಮತ್ತತಿಶಯಂ ತಾನಾಗದೌಂನತ್ಯಮುಂ
ನುತಸೌಂದರ್ಯ್ಯಮುಮೂರ್ಜಿತಾತಿಶಯಮುಂ ತಂನಲ್ಲಿ ನಿನ್ದಿರ್ದ್ದವೇಂ
ಕ್ಷಿತಿಸಂಪೂಜ್ಯಮೊ ಗೊಂಮಟೇಶ್ವರ ಜಿನಶ್ರೀರೂಪಮಾತ್ಮೋಪಮಂ ॥

"ತುಂಬ ಎತ್ತರವಾಗಿರುವ ಮೂರ್ತಿಯಾದರೆ ಅದರಲ್ಲಿ ಚೆಲುವು ಇರುವುದಿಲ್ಲ, ಇನ್ನು ಎತ್ತರವೂ ಒಳ್ಳೆಯ ಚೆಲುವೂ ಇರುವುದಾದರೆ (ಅದರಲ್ಲಿ ಒಂದು) ಅತಿಶಯತೆ (ಮಹಿಮೆ, ಘನತೆ, ದಿವ್ಯತೆ, ವರ್ಚಸ್ಸು) ಇರುವುದಿಲ್ಲ. ಎತ್ತರವೂ ಒಳ್ಳೆಯ ಚೆಲುವೂ ಹೆಚ್ಚಿನ ಅತಿಶಯತೆಯೂ ತನ್ನಲ್ಲಿ (ಶ್ರವಣಬೆಳಗೊಳದ ಗೊಮ್ಮಟೇಶ್ವರನ ಶಿಲ್ಪದಲ್ಲಿ) ನೆಲೆಸಿವೆ. ತನಗೆ ತಾನೇ ಸಾಟಿಯಾದ (ತನ್ನನ್ನು ಬೇರೆ ಮೂರ್ತಿಯೊಂದಿಗೆ ಹೋಲಿಸಬಹುದಾದರೆ, ತನ್ನ ಮೂರ್ತಿಯೊಂದಿಗೇ ಹೋಲಿಸಬೇಕಾಗುತ್ತದೆ) ಗೊಮ್ಮಟೇಶ್ವರ ಜಿನನ ಶ್ರೀರೂಪ (ದಿವ್ಯವಾದ ರೂಪವು) ಎಂತಹ ಲೋಕಪೂಜ್ಯವಾದುದೋ!?" ಎಂದೆಲ್ಲ ವರ್ಣಿಸಿದ್ದಾನೆ. ಕ್ರಿ.ಶ. ಸುಮಾರು ೧೨ನೆಯ ಶತಮಾನದ ಶಾಸನದಲ್ಲಿ–

ಸ್ವಸ್ತಿ ಸಮಸ್ತ ದೈತ್ಯದಿವಿಜಾಧಿಪ ಕಿನ್ನರ ಪನ್ನಗಾನಮ
ನ್ಮಸ್ತಕರತ್ನನಿರ್ಗತಗಭಸ್ತಿಶತಾನ್ವಿತಪಾದ (ಪಂಕಜ)
ಪ್ರಾಸ್ತಸಮಸ್ತ ಮಸ್ತಕ ತಮಃಪಟಳಂ ಜಿನಧರ್ಮ್ಮಶಾಸನಂ
ವಿಸ್ತರಮಾಗೆ ನಿಲ್ಕೆ ಧರೆವಾರುಧಿ ಸೂರ್ಯ್ಯ ಶಶಾಂಕರುಳ್ಳಿನಂ ॥

"ಶುಭಮಸ್ತು ಸಮಸ್ತ ದೈತ್ಯರು, ದೇವತೆಗಳು (ದೇವತೆಗಳಿಗೊಡೆಯರಾದ ಇಂದ್ರರು), ಕಿನ್ನರರು, ನಾಗರು ನಮಿಸಿದಾಗ ಅವರ ಕಿರೀಟಗಳಲ್ಲಿಯ ಮಣಿರತ್ನಗಳ ನೂರಾರು ಕಿರಣಗಳಿಂದ ಆವೃತವಾದ ಪಾದ ಪಂಕಜಗಳನ್ನು ಹೊಂದಿದವನು (ಗೊಮ್ಮಟೇಶ್ವರ ಶಿಲ್ಪ) ಬಾಗಿದವರೆಲ್ಲರ ಮಸ್ತಕದಲ್ಲಿ ಕವಿದ ಕತ್ತಲೆಯೆಲ್ಲವನ್ನೂ ತೊಡೆದು ಹಾಕುವವನು, ಮತ್ತೆ ಜಿನಧರ್ಮವೇ ಮೂರ್ತಿಮತ್ತಾಗಿ ರೂಪ ತಳೆದಿರುವವನು ಧರೆ, ವಾರ್ಧಿ (ಸಮುದ್ರ) ಸೂರ್ಯ ಹಾಗೂ ಚಂದ್ರರು ಅನಂತಕಾಲ ನಿಲ್ಲಲಿ" ಎಂದು ನಿರೂಪಣೆಯಿದೆ. ಕ್ರಿ.ಶ. ೧೪೧೨ರ ಶಾಸನದ ಪ್ರಾರ್ಥನಾ ಪದ್ಯದಲ್ಲಿ–

ತಾರಾಸ್ಫಾರಾಲಕೌಘೇ ಸುರಕೃತಸುಮನೋವೃಷ್ಟಿ ಪುಷ್ಪಾಶಯಾಲಿಸ್ತೋಮಾಃ
ಕ್ರಾಮಂತಿ ಡ್ಯಹ ಜಧರಪಟಲೀಡಂಭತೋ ಯಸ್ಯ ಮೂರ್ಧ್ನಿ ಸೋಯ
ಶ್ರೀ ಗುಂಮಟೇಶಸ್ತ್ರಿಭುವನಸರಸೀರಂಜನೇ ರಾಜಹಂಸೋ ಭವ್ಯ......
ಬಭಾನುರ್ಬ್ಬೆಳುಗುಳನಗರೀ ಸಾಧು ಜೇಜೀಯತೀರ್ದಂ ॥

"ತ್ರಿಲೋಕವೆಂಬ ಸರೋವರದಲ್ಲಿ ರಾಜಹಂಸವಾಗಿ, ಭವ್ಯಜನವೆಂಬ ಕಮಲ ವನವನ್ನು ಅರಳಿಸುವ ಸೂರ್ಯನಾಗಿ, ಬೆಳುಗುಳದಲ್ಲಿ ವಿರಾಜಿಸುತ್ತಿರುವ ಗೊಮ್ಮಟನ ತಲೆಯಲ್ಲಿ ಗುಂಗುರು ಕೂದಲು ತುಂಬಿ ತುಳುಕಿದೆ. ಮೇಲಿಂದ ದೇವತೆಗಳು ಸುರಿವ ಪುಷ್ಪವೃಷ್ಟಿಗೆ ದುಂಬಿವಿಂಡು ಬಾತು ಬಾಯಿಬಿಡುತ್ತಿವೆ. ಈ ಪುಷ್ಪವೃಷ್ಟಿ ಬೆಳ್ಮೋಡವಾಗಿ ತೇಲುತ್ತಿದೆ. ಈ ಗೊಮ್ಮಟನಿಗೆ ಜಯವಾಗಲಿ" ಎಂದು ಬಣ್ಣಿಸಲಾಗಿದೆ. ಈ ಶಿಲ್ಪದ ಚೆಲುವನ್ನು ಭಾರತೀಯ ಕಲೆಯ ಮೇರು ವಿಮರ್ಶಕ ಫರ್ಗ್ಯುಸನ್ ಅವರು "ಇದಕ್ಕಿಂತ ಭವ್ಯವಾದ ಅಥವಾ ಅದ್ಭುತವಾದ ಮೂರ್ತಿಯನ್ನು ಈಜಿಪ್ಟಿನ ಹೊರತಾಗಿ ಇನ್ನೆಲ್ಲೂ ಕಾಣಲಾಗದು. ಆದರೆ ಅಲ್ಲಿಯೂ ಕೂಡಾ ಇರುವ ಮೂರ್ತಿಗಳಲ್ಲಿ ಇದಕ್ಕಿಂತ ಎತ್ತರವಾದುದು ಕಂಡು ಬರುವುದಿಲ್ಲ" ಎಂದು ಕೊಂಡಾಡಿದ್ದಾರೆ.

ಹಂಪ ನಾಗರಾಜಯ್ಯ ಅವರು ಈ ಶಿಲ್ಪದ ಪ್ರತಿಮಾ ಲಕ್ಷಣಗಳು ಮತ್ತು ಹಿರಿಮೆಯನ್ನು ಕುರಿತು ಬರೆಯುತ್ತ, "ಶ್ರವಣಬೆಳಗೊಳದ ಬಾಹುಬಲಿಯ ವಿಗ್ರಹವನ್ನು ಚಾವುಂಡರಾಯನು ಮಾಡಿಸಿದ ಮೇಲೆ ನಿರ್ಮಾಣಗೊಂಡ ಎಲ್ಲ ಬಾಹುಬಲಿ ಮೂರ್ತಿಗಳ ಮೇಲೂ ಅದರ ಪ್ರಭಾವವನ್ನು ನಿಚ್ಚಳವಾಗಿ ಕಾಣುತ್ತೇವೆ....... ಬಾಹುಬಲಿ ಮೂರ್ತಿಯ ಮುಖದಲ್ಲಿ ಗಲ್ಲ ಕೆನ್ನೆ ತುಟಿಗಳು ಮೂಗು ಹುಬ್ಬಿನ ಸಾಲು ವಿಶಾಲವಾದ ಕಣ್ಣು ಅಗಲವಾದ ಎರಡು ಕಿವಿಗಳು ತಲೆಯ ಮೇಲೆ ಗುಂಗುರು ಕೂದಲು – ಇವಿಷ್ಟೂ ನೋಡುವವರ ಕಣ್ಣಿಗೆ ಹಬ್ಬವನ್ನುಂಟುಮಾಡುತ್ತವೆ. ಒಮ್ಮೆ ನೋಡಿದರೆ ಇನ್ನೊಮ್ಮೆ ನೋಡಬೇಕೆನಿಸುವ, ಇನ್ನೊಮ್ಮೆ ನೋಡಿದರೆ ಮತ್ತೊಮ್ಮೆ ನೋಡಬೇಕೆನಿಸುವ, ಮತ್ತೊಮ್ಮೆ ನೋಡಿದರೆ ಮಗದೊಮ್ಮೆ ನೋಡಬೇಕೆನಿಸುವ, ಹಾಗೆ ಎಷ್ಟು ಸಲ ನೋಡಿದರೂ ತೃಪ್ತಿಕೊಡುವ ಮುಖಮೈಗಳ ಮಾಟ ಈ ವಿಗ್ರಹ ಜಗತ್ತಿನ ವಿಗ್ರಹ ಪ್ರಪಂಚದಲ್ಲಿ ಅನನ್ಯ ಎಂಬ ಔನ್ನತ್ಯಕ್ಕೆ ಏರಿಸಿದೆ. ಮುಖದಲ್ಲಿ ತುಂಬಿ ತುಳುಕುವ ಮುಗುಳುನಗೆ ಆಬಾಲವೃದ್ಧರಾದಿಯಾಗಿ ಎಲ್ಲರನ್ನೂ ಚಿತ್ತಾಕರ್ಷಕವಾಗುವಂತೆ ತನ್ನತ್ತ

ಸೆಳೆಯುತ್ತದೆ. ಆ ಮುಖದ ಮಂದಸ್ಮಿತಕ್ಕೆ ಮರುಳಾಗದ ಮಾನವರಿಲ್ಲ. ಚಳಿ ಮಳೆ ಗಾಳಿ ಬಿಸಿಲು – ಹೀಗೆ ಪ್ರಕೃತಿಯ ಎಲ್ಲ ಆಟಗಳಿಗೂ ಮೈವೊಡ್ಡಿ ಕದಲದೆ ಸ್ಥಿರವಾಗಿ ನಿಂತಿರುವ ಈ ಬಾಹುಬಲಿ ತ್ಯಾಗದ ಸಂಯಮದ ಅಮರ ಸಂದೇಶವನ್ನು ಲೋಕಕ್ಕೆ ಬಿತ್ತರಿಸುವಂತೆ ನಿಂತಿದೆ. ಬೆತ್ತಲೆಯಾಗಿದ್ದರೂ ನೋಡಿದವರಿಗೆ ಸದಾಪ್ರಿಯನಾಗಿ ಆತ್ಮೀಯನಾಗಿ ತೋರುತ್ತಾನೆ. ನಗ್ನತೆಯ ವೈಭವವನ್ನು ಇಲ್ಲಿ ಚೆನ್ನಾಗಿ ಕಾಣಬಹುದು. ಈ ಮೂರ್ತಿಯು ದಿಗಂಬರತ್ವ ನಮ್ಮ ನೆಮ್ಮದಿಯನ್ನು ಕಲಕುವುದಿಲ್ಲ, ಕಲುಷಿತಗೊಳಿಸುವುದಿಲ್ಲ. ಅದರ ಬದಲು ಕದಡಿದ ಕಳಂಕಿತವಾದ ಮನಗಳನ್ನು ತಿಳಿಯಾಗಿಸಿ ಆನಂದವನ್ನು ಬಿತ್ತುವ ಚೈತನ್ಯದ ಸೆಲೆಯಾಗಿ ಈ ಮೂರ್ತಿ ಮನಸೆಳೆಯುತ್ತದೆ. ಈ ಎಲ್ಲ ಕಾರಣಗಳಿಂದ ಬಾಹುಬಲಿಯ ಈ ಮೂರ್ತಿಗೆ ಸಾಟಿ ಈ ಮೂರ್ತಿಯೇ ಹೊರತು ಈ ಲೋಕದಲ್ಲಿ ಮತ್ತಾವುದೂ ಇಲ್ಲ. ಸಾಗರ ಸಾಗರೋಪಮವಾಗಿರುವಂತೆ, ಗಗನ ಗಗನೋಪಮವಾಗಿರುವಂತೆ, ಬಾಹುಬಲಿ ಬಾಹುಬಲಿಗೆ ಮಾತ್ರ ಸಾಟಿಯಾಗುತ್ತಾನೆ" ಎಂದೆಲ್ಲ ಬಣ್ಣಿಸಿದ್ದಾರೆ.[೨೩]

**೪. ಬಾಹುಬಲಿಗೆ ಮಹಾಮಸ್ತಕಾಭಿಷೇಕಗಳು**

'ಮಹಾಮಸ್ತಕಾಭಿಷೇಕ' ಎಂಬ ಸಂಸ್ಕೃತ ಪದಕ್ಕೆ 'ತಲೆಯ ಮೇಲೆ ಮಾಡಿಸುವ ಪವಿತ್ರ ಸ್ನಾನ' ಎಂಬರ್ಥವಿದೆ. ಶಿಲ್ಪಕ್ಕೆ ಪಾವಿತ್ರತೆಯನ್ನೂ, ವಿಶೇಷ ಕಳೆಯನ್ನೂ ತಂದು ಕೊಡುವ ದೃಷ್ಟಿಯಿಂದ ಹಾಲು, ಮೊಸರು, ಕಬ್ಬಿನಹಾಲು, ಶ್ರೀಗಂಧ ಮೊದಲಾದ ವಸ್ತುಗಳಿಂದ ಈ ಮಹಾಮಸ್ತಕಾಭಿಷೇಕವನ್ನು ನೆರವೇರಿಸಲಾಗುತ್ತದೆ. ವಿಶ್ವಶಾಂತಿಯ ಪ್ರತೀಕವಾಗಿ ಜರುಗುವ ಮಹಾಮಸ್ತಕಾಭಿಷೇಕವು ಶ್ರೀಮತಿ ಇಂದಿರಾಗಾಂಧಿ ಅವರು ೧೯೮೧ರ ಫೆಬ್ರುವರಿ ೨೨ರಂದು ನಡೆದ ಮಹಾಮಸ್ತಕಾಭಿಷೇಕದಲ್ಲಿ ಭಾಗವಹಿಸಿ ಹೇಳಿದ ಹಾಗೆ 'ಶಾಂತಿ, ಸೌಹಾರ್ದ, ಶಿಸ್ತುಗಳ ಸಂಕೇತವಾಗಿದೆ'. ಅಲ್ಲದೆ ಜೈನ ಸಿದ್ಧಾಂತದ ಮೌಲ್ಯಗಳಾದ ಅಹಿಂಸೆ, ಸತ್ಯ, ಅಚೌರ್ಯ, ಬ್ರಹ್ಮಚರ್ಯ, ಅಪರಿಗ್ರಹಗಳ ಆರಾಧನೆ ಮತ್ತು ಪ್ರಪಂಚದ ಭೋಗಗಳ ತ್ಯಾಜ್ಯದ ಕುರುಹೂ ಆಗಿದೆ.[೨೪] ಕ್ರಿ.ಶ. ೯೮೧ರಿಂದ ಪ್ರತಿ ಹನ್ನೆರಡು ವರ್ಷಗಳಿಗೊಮ್ಮೆ ಮಹಾಮಸ್ತಕಾಭಿಷೇಕವು ನಡೆಯುತ್ತ ಬಂದಿದೆ. ಆದರೆ ಕೆಲವು ಮಹಾಮಸ್ತಕಾಭಿಷೇಕಗಳ ಕುರಿತು ಸ್ಪಷ್ಟವಾದ ದಾಖಲೆಗಳು ಲಭ್ಯವಿಲ್ಲ.

ಪ್ರಸ್ತುತ ಲಭ್ಯವಿರುವ ಜಾತಕ ವಿವರದ ಪ್ರಕಾರ ಚಾವುಂಡರಾಯನು ಈ ಶಿಲ್ಪವನ್ನು ಕ್ರಿ.ಶ. ೯೮೧ರ ಮಾರ್ಚ್ ೧೩ ರವಿವಾರದಂದು ಪ್ರತಿಷ್ಠಾಪಿಸಿ ಪ್ರಥಮ 'ಮಹಾಮಸ್ತಕಾಭಿಷೇಕ'ವನ್ನು ನೆರವೇರಿಸಿದನು. ಆ ಮಹಾಮಸ್ತಕಾಭಿಷೇಕವು ಕ್ರಿ.ಶ. ೯೮೧ರ ಮಾರ್ಚ್ ೧೩ರಂದು ಬೆಳಗಿನ ಜಾವ ೩:೧೨ ನಿಮಿಷಕ್ಕೆ ಪ್ರಾರಂಭವಾಗಿ ೫:೦೬ ನಿಮಿಷಕ್ಕೆ ಸೂರ್ಯೋದಯ ಆಗುವುದರೊಂದಿಗೆ ಮುಕ್ತಾಯವಾಯಿತು. ಆ ಮಹಾಮಸ್ತಕಾಭಿಷೇಕದ ಕುರಿತು ಐತಿಹ್ಯವೊಂದು ಈ ಮುಂದಿನಂತಿದೆ. "ಮಸ್ತಕಾಭಿಷೇಕಕ್ಕಾಗಿ ನಾಡಿನ ಮೂಲೆಮೂಲೆಗಳಿಂದ ವಸ್ತುಗಳು ರಾಶಿಯಾಗಿ ಬಂದುಬಿದ್ದವು. ಆಬಾಲವೃದ್ಧರಿಂದ ಅಂಧಕರ ಬಗೆಗಿನ ಜನಸಮೂಹ, ಸೂಜಿ

ಇರಿಸುವೊಡೆ ಎಡೆಯಿಲ್ಲ ಎನ್ನುವಷ್ಟು ಬಂದು ಸೇರಿತು. ಸಂಭ್ರಮದಿಂದ ಇಂದ್ರರು ಕಳಶಗಳಲ್ಲಿಯ ಪವಿತ್ರವಾದ ದ್ರವವನ್ನು ಮಸ್ತಕದ ಮೇಲೆ ಎರೆಯಲು ಅದು ಬಾಹುಬಲಿಯಿಂದ ಕೆಳಗಿಳಿಯಲೇ ಇಲ್ಲ. ಇದರಿಂದ ಚಾವುಂಡರಾಯನು ಚಿಂತಾಕ್ರಾಂತನಾದನು. ಆಗ ಕೂಷ್ಮಾಂಡಿನಿಯಕ್ಷಿ ಒಬ್ಬ ಮುದುಕಿಯ ವೇಷ ಧರಿಸಿ ಬಂದು, ತನ್ನ ಕೈಯಲ್ಲಿಯ ಗುಳ್ಳಕಾಯಿಯ ಹಾಲನ್ನು ಎರೆಯಲು ಹೇಳಿದಳು. ಅದನ್ನು ಕೇಳಿ ಚಾವುಂಡರಾಯನು ನಸುನಕ್ಕು, ಆ ಹಾಲನ್ನು ಎರೆಯಲು–

ಶಿರದಿಂದಿಳಿತಪ್ಪ ಜಲ ಹಿಮ
ಗಿರಿಯಿಂ ಪರಿತಪ್ಪ ಬಾಂಬೊಳೆಯೆನಿಸಿ
ಮೆರೆಯಿತ್ತದು ಮುಖಕ್ಕೆ ತುಂ
ತುರ ಚೆಲ್ಲುತ್ತ ಹರಿದುದು ಗಿರಿಮುಚ್ಚಿ ॥

ಅದರಿಂದ ಗೊಮ್ಮಟನು ಅಪಾದಮಸ್ತಕದವರೆಗೆ ತೊಯ್ದುಹೊಯ್ದನು, ಮಾತ್ರವಲ್ಲ, ಅಲ್ಲಿಂದ ಹರಿದುಬಂದ ಹಾಲು, ಬೆಟ್ಟದ ಕೆಳಗಿನ ಕೊಳದಲ್ಲಿ ಮಡುಗಟ್ಟಿ ನಿಂತಿತು. ಹೀಗೆ ಆ ಅಭಿಷೇಕವನ್ನು ಪೂರ್ತಿಗೊಳಿಸಿದ ಗುಳ್ಳಕಾಯಜ್ಜಿಯ ಮೂರ್ತಿಯನ್ನು ಚಾವುಂಡರಾಯನು ಗೊಮ್ಮಟಸ್ವಾಮಿಯ ಎದುರಿಗೆ, ಸುತ್ತಾಲಯದ ಹೊರವಲಯದಲ್ಲಿ ನಿಲ್ಲಿಸಿದನು. ಅಜ್ಜಿಯ ಕೈಯಲ್ಲಿಯ ಬಿಳಿಯ ಕಾಯಿಯಿಂದ ಆ ಗ್ರಾಮಕ್ಕೆ ಬೆಳ್ಗೊಳವೆಂಬ ಹೆಸರಾಯಿತು." ಇದೊಂದು ಚಾವುಂಡರಾಯನ ಅಹಂಕಾರ ನಿರಸವನ್ನು ಹೇಳಲು ಕಟ್ಟಿದ ಕಥೆಯೆಂದು ಹೇಳಲಾಗುತ್ತದೆ. ಆದರೆ ಶ್ರವಣಬೆಳಗೊಳದ ಚಾರುಕೀರ್ತಿ ಭಟ್ಟಾರಕ ಮಹಾಸ್ವಾಮೀಜಿ ಅವರು "ಇತ್ತೀಚಿಗೆ ನಾವು ಕಂಬದಹಳ್ಳಿಗೆ ಹೋದಾಗ ಅಲ್ಲಿಯ ಜನ 'ಮಂಡೆ' ಪೂಜೆ ಯಾವಾಗ ಸ್ವಾಮಿ ಎಂದು ಕೇಳುತ್ತಿದ್ದರು. ಮಂಡೆ ಪೂಜೆ ಎಂದರೆ ಮಸ್ತಕಾಭಿಷೇಕ. ಇಲ್ಲಿಗೆ ಬಂದ ಮುನಿಗಳ ಜೊತೆಗೆ ಕಂಬದಹಳ್ಳಿಗೆ ಹೋಗಿ ಅಲ್ಲಿಂದ ಕಾಲುದಾರಿಯ ಮೂಲಕ ದಡಗಕ್ಕೆ ಹೋಗುವಾಗ ದಾರಿಮಧ್ಯದಲ್ಲಿ ಒಂದು ಹಳ್ಳಿ 'ಗುಳ್ಳೆಕಾಯಿ ಅಜ್ಜಿಯ ಹಳ್ಳಿ' ಸಿಕ್ಕಿತು. ಅಲ್ಲಿ ಹೆಚ್ಚಾಗಿ ಜನ ಚಾಪೆಯನ್ನು ನೇಯುತ್ತಾರೆ. ಅಲ್ಲಿಯೂ ಸಹ ಜನ ಬಾಹುಬಲಿಸ್ವಾಮಿಯ ಮಂಡೆ ಪೂಜೆ ಯಾವಾಗ ಎಂದು ಕೇಳುತ್ತಿದ್ದರು. ಅವರ ಆ ಊರಿನಿಂದ ಬಾಹುಬಲಿಸ್ವಾಮಿ ಮಾತ್ರ ಕಾಣುತ್ತದೆ. ಅವರು ಅಲ್ಲಿಂದಲೇ 'ಅಭಿಷೇಕವನ್ನು, ರಾತ್ರಿಯಲ್ಲಿ ಸ್ವಾಮಿಯ ಮೇಲೆ ಬಿದ್ದ ಬೆಳಕನ್ನು ನೋಡಿದೆವು, ನಮಗೆ ಇಲ್ಲಿಗೆ ಬಂದು ನೋಡುವ ಭಾಗ್ಯ ಇರಲಿಲ್ಲ ಸ್ವಾಮಿ' ಎಂದು ಹೇಳುತ್ತಿದ್ದರು" ಎಂದು ಗುಳ್ಳೆಕಾಯಿ ಅಜ್ಜಿಯ ಹಳ್ಳಿಯನ್ನು ಗುರುತಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಮೇಲಿನ ಗುಳ್ಳೆಕಾಯಿಯ ಅಜ್ಜಿಯ ಘಟನೆ ಕಟ್ಟು ಕಥೆಯಲ್ಲ ಎಂಬುದು ಮನದಟ್ಟಾಗುತ್ತದೆ.

ಶ್ರವಣಬೆಳಗೊಳದ ಕ್ರಿಶ. ೧೫೦೦ರಲ್ಲಿ ಶಾಸನವು ಚಾರುಕೀರ್ತಿ ಪಂಡಿತಾಚಾರ್ಯರ ನೇತೃತ್ವದಲ್ಲಿ ಏಳು ಮಹಾಮಸ್ತಕಾಭಿಷೇಕ ಜರುಗಿದ ಘಟನೆಯನ್ನು–

ಶಿಷ್ಯೋ ದುಷ್ಪಾಘಪಿಷ್ಟೀಕರಣನಿಪುಣಸೂತ್ರಸ್ಯ ತಸ್ಯೋಪ
ದೇಷ್ಟುಃ ಶಿಷ್ಯಃ ಪೀಯೂಷನಿಷ್ಯಂದನಪಟುವಚನಃ ಪಂಡಿತಃ
ಖಂಡಿತಾಘಃ ಸೂರಿಃ ಸೂರೋ ವಿನೇಯಾಂಬುರುಹ
ವಿಕಸನೇ ಸರ್ವ್ವದಿಗ್ವ್ಯಾಪಿಧಾಮಾ ಶ್ರೀಮಾನಸ್ಥಾತ್ಕೃತಾಸ್ಥೋ
ಬೆಳುಗುಳಬಗರೇ ತತ್ರ ಧರ್ಮ್ಮಾಭಿವೃದ್ಧ್ಯೈ ॥

ಯಸ್ಮಿಂಶ್ಚಾಮುಂಡರಾಜೋ ಭುಜಬಲಿನಮಿನಂ ಗುಂಮಟಂ
ಕರ್ಮ್ಮಠಾಜ್ಞಂ ಭಕ್ತ್ಯಾ ಶಕ್ತ್ಯಾ ಚ ಮುಕ್ತ್ಯೈ ಜಿತಸುರನಗರೇ
ಸ್ಥಾಪಯದ್ಭದ್ರ ಮದ್ರೌತದ್ವತ್ಕಾಲತ್ರಯೋತ್ಥೋಜ್ವಲತನು
ಜಿನಬಿಂಬಾನಿ ಮಾನ್ಯಾನಿಚಾನ್ಯಃ ಕೈಲಾಸೇ ಶೀಲಶಾಲೀ
ತ್ರಿಭುವನವಿಲಸರ್ತ್ಕೀರ್ತ್ತಿಚಕ್ರೀವ ಚಕ್ರೇ ॥

ಸ್ಥಾನೇ ತತ್ಸ್ಥಾನಮಂತ್ರೋಜ್ವಲತರಮತುಲಂ ಪಂಡಿತೋ
ಲಂಕರೋತು ಶ್ರೀಮಾನೇಷೋರ್ಕ್ಕಕೀರ್ತ್ತಿರ್ನ್ನೃಪ ಇವ
ವಿಲಸತ್ಸಾಲಸೋಪಾನಕಾದ್ಯೈಃ ಚಿತ್ರಂ ಶೀರ್ಷೇಭಿಷಿಚ್ಯ
ತ್ರಿಭುವನತಿಲಕಂ ತಂ ಪುನಸ್ಸಪ್ತವಾರಾನ್ ಪಂಕೋನ್ಮುಕ್ತಂ
ವಿಧಾಯಾಖಿಲಜಗದುರು ಪುಣ್ಯೈಸ್ತಥಾಲಂಚಕಾರ ॥

ಕಿಂ ವಾ ಕ್ಷೀರಾಭಿಷೇಕಾದುತ ನಿಜಯಶಸೋ ನಿರ್ಮಲಾಚ್ಛಂ
ಕರಾದ್ರೀನ್ ಗೋತ್ರಾದ್ರೀನ್ ಸ್ಫಾಟಿಕೀಂ ಚ ಕ್ಷಿತಿಮಮರಗಜಾನ್
ದಿಗ್ಗಜಾನೇಷ ಧೀರಃ ಕ್ಷೀರೋದಾನ್ ಸಪ್ತಸಿಂಧೂನುದರಿಜಲಧರಾನ್
ಶಾರಾದಾನ್ನಾಗಲೋಕಂ ಶೇಷಾಕೀರ್ನ್ನಂ ವಿದೀರ್ನ್ನಾಮೃತ
ಕಲಶಮಪಿ ಸ್ಸರ್ವ್ವಿತೇನೇನವಿದ್ಮಃ ॥

ಮೇರೌ ಜನ್ಮಾಭಿಷೇಕಂ ಸುರಪತಿರಿವ ತತ್ತಥೈವಾತ್ರ
ಶೈಲೇ ದೇವಸ್ಯಾದರ್ಶಯನ್ನೋಪರಮಖಿಲ ಜನಸ್ಯೈಷ
ಸೂರಿರ್ವ್ವಿದಾಯ ಸನ್ಮಾರ್ಗ್ಗಂಚಾಧುನ್ಯೈನಂ ಪಿಹಿತಮ
ಪಿ ಚರಂ ವಾಮದೃಗ್ವ್ಯಾಕ್ರಮೋ ಭಿನ್ನಿಃಶೇಷಂ ತಾನಿ
ಪೂರ್ವ್ವಂ ಪುರುರಿವ ಪುನರತ್ರಾಕಳಂಕೋಪನೀಯ ॥

"ಪಾಪವನ್ನು ನಿರ್ಮೂಲ ಮಾಡುವುದರಲ್ಲಿ ನಿಪುಣರಾದ, ನಿರರ್ಗಳವಾದ ವಾಕ್ ಸರಣಿಯಲ್ಲಿ ಅಮೃತ ಪ್ರವಾಹವನ್ನು ಹರಿಸುವ ಭಕ್ತರೆಂಬ ಕಮಲವನವನ್ನು ಅರಳಿಸುವ ಸೂರ್ಯನಂತಿರುವ ಸುತ್ತಲೂ ವ್ಯಾಪಿಸಿದ ವೈಭವವುಳ್ಳ ಪ್ರಖ್ಯಾತ ಸೂರಿ ಪಂಡಿತರು ಚಾರುಕೀರ್ತಿಗಳ ಶಿಷ್ಯರು. ಧರ್ಮೋದ್ಧಾರಕ್ಕಾಗಿ ಇವರು ಮನಃಪೂರ್ವಕವಾಗಿ ಬೆಳುಗುಳ ನಗರದಲ್ಲಿ ನೆಲೆಸಿದರು. ಅಮರಾವತಿಯನ್ನು ಮೀರಿಸಿದ ಈ ನಗರದಲ್ಲಿ ಚಾವುಂಡರಾಯನು ಭಕ್ತಿಯಿಂದಲೂ ಪ್ರಯತ್ನಪೂರ್ವಕವಾಗಿಯೂ ಮೋಕ್ಷಾರ್ಥಿಯಾಗಿ ಬೆಟ್ಟದ ಮೇಲೆ ಬಾಹುಬಲಿ ಗೊಮ್ಮಟನನ್ನು ಪ್ರತಿಷ್ಠೆ ಮಾಡಿಸಿದನು. ಹಿಂದೆ ಭರತ

ಚಕ್ರವರ್ತಿ ಕೈಲಾಸ ಪರ್ವತದಲ್ಲಿ ಬಾಹುಬಲಿ ಮತ್ತು ತೀರ್ಥಂಕರರ ಶಿಲ್ಪಗಳನ್ನು ಪ್ರತಿಷ್ಠೆ ಮಾಡಿಸಿದನು. ಈ ಕೈಲಾಸ ಪರ್ವತಕ್ಕೆ ಅರ್ಕಕೀರ್ತಿಯು ಮಾರ್ಗವನ್ನು ಮಾಡಿಸಿದಂತೆ, ಪಂಡಿತಾಚಾರ್ಯರು ಈ ಅನುಪಮ ಕ್ಷೇತ್ರಕ್ಕೆ ಸುತ್ತಾಲಯವನ್ನು ಕಟ್ಟಿಸಿ ಸೋಪಾನವನ್ನು ಮಾಡಿಸಿದರು. ತ್ರಿಭುವನತಿಲಕವಾದ ಗೊಮ್ಮಟನಿಗೆ ಪಂಡಿತಾಚಾರ್ಯರು ಏಳು ಬಾರಿ ಮಸ್ತಕಾಭಿಷೇಕ ಮಾಡಿಸಿ ಲೋಕದ ಪಾಪವನ್ನೆಲ್ಲ ತೊಳೆದರು. ಇವರ ಕೀರ್ತಿ ಎಲ್ಲೆಲ್ಲು ಹರಡಿ ಕುಲಗಿರಿಗಳೆಲ್ಲ ಕೈಲಾಸಗಳಾಗಿ, ಭೂಮಿಯೆಲ್ಲ ಸ್ಫಟಿಕವಾಗಿ, ದಿಗ್ಗಜಗಳೆಲ್ಲ ಐರಾವತವಾಗಿ, ಸಪ್ತಸಾಗರಗಳೆಲ್ಲ ಕ್ಷೀರ ಸಾಗರಗಳಾಗಿ, ಮೇಘರಾಶಿಯೆಲ್ಲ ಅಮೃತರ ಮೇಘವಾಗಿ, ನಾಗಾಲೋಕವೆಲ್ಲ ಆದಿಶೇಷಮಯವಾಗಿ, ಸ್ವರ್ಗವೆಲ್ಲ ಅಮೃತದ ಹೊಳೆಯಾಗಿ ಹೋದವು. ಇವರೆಸಗಿದ ಕ್ಷೀರಾಭಿಷೇಕದಿಂದ ಹೀಗಾಯಿತೋ ಅಥವಾ ಇವರ ಕೀರ್ತಿ ಪ್ರವಾಹದಿಂದ ಹೀಗಾಯಿತೋ ನಮಗೆ ತಿಳಿಯದು. ಮೇರುಗಿರಿಯಲ್ಲಿ ದೇವೇಂದ್ರನು ತೀರ್ಥಂಕರನಿಗೆ ಜನ್ಮಾಭಿಷೇಕ ಮಾಡಿದ್ದನು. ಈ ಪಂಡಿತಾಚಾರ್ಯರು ಈ ಪರ್ವತದ ಮೇಲೆ ಗೊಮ್ಮಟಾಭಿಷೇಕ ಮಾಡಿ ನಮಗೆಲ್ಲ ತೋರಿಸಿದರು. ಪುರದೇವನು ಮೋಕ್ಷಮಾರ್ಗವನ್ನು ತೋರಿಸಿದಂತೆ ನಿಷ್ಕಲಂಕರಾದ ಪಂಡಿತಾಚಾರ್ಯರು ಮಿಥ್ಯಾಧರ್ಮಗಳ ಅವಾಂತರವನ್ನು ಹೋಗಲಾಡ್ಸಿ ಮೋಕ್ಷಮಾರ್ಗವನ್ನು ಎಲ್ಲರಿಗೂ ತೋರಿಸಿದರು" ಎಂದೆಲ್ಲ ಸೊಗಸಾಗಿ ಬಣ್ಣಿಸಿದೆ.

ಶ್ರವಣಬೆಳಗೊಳದ ಕ್ರಿ.ಶ. ಸುಮಾರು ೧೫ನೆಯ ಶತಮಾನದ ಶಾಸನದಲ್ಲಿ–

ಪಂಡಿತದೇವರು ಮಾಡಿತ್ತು ಮಾಹಾಭಿಷೇಕದೊಳಗೆ
ಹಾಲು ಮೊಸರೊಗೆ ೨ ಪೂಜಾರಿಗೆ ೧ ಭಾಗಿ
ಕೆಲಸಿಗಳಿಗೆ ಕಲುಕುಟಿಗರಿಗೆ ಭಾಗಿ ೨ ಭಂಡಿಕಾಱಂಗೆ
೧ ತಪ್ಪಿದವರ ಕೈಸಾಸ್ತಿಚರು ಹರಿಯಾಣ ೧ ॥

ಪಂಡಿತದೇವರು ಮಾಡಿದ ಮಹಾಮಸ್ತಕಾಭಿಷೇಕದಲ್ಲಿ ಬಳಸಲಾದ ವಸ್ತುಗಳು ಮತ್ತು ಆ ವಸ್ತುಗಳನ್ನು ಯಾರ್ಯಾರಿಗೆ ಎಷ್ಟು ಹಂಚಿಕೆಯಾಗಬೇಕೆಂಬ ವಿವರವಿದೆ. ಗೇರುಸೊಪ್ಪೆ–ಹಾಡುವಳ್ಳಿಯ ಸಾಳುವ ಮನೆತನದ ಕೃಷ್ಣದೇವರಸ ಒಡೆಯರ ಪಟ್ಟದರಸಿ ಚೆನ್ನಭೈರಾದೇವಿ ನಗರಿ, ಹೈವೆ, ತುಳು, ಕೊಂಕಣ ಪ್ರದೇಶಗಳನ್ನು ಆಳುತ್ತಿದ್ದ ಸಂದರ್ಭದಲ್ಲಿ–

ಶ್ರೀಮನ್ಮಹಾಮಂಡಳೇಶ್ವರರು ಯಿಮ್ಮಡಿ ಚನ್ನಭೈರಾದೇವಿ
ಯಮ್ಮನವರು ನಗರಿ ಹೈವ ತುಳು ಕೊಂಕಣ ಮುಂತಾದ
ರಾಜ್ಯವನು ಪ್ರತಿಪಾಲಿಸುತ್ತಂ ಯಿದ್ದಂದಿನ ಶಾಲಿವಾಹನ
ಶಕವರ್ಷ । ೧೫೪೦ನೆಯ ಸರ್ವಜಿತು ಸಂವತ್ಸರದ ಶ್ರಾವಣ ಶುದ್ಧ
೧೫ ಚಂದ್ರವಾರದಲ್ಲು ನಗರಿ ರಾಜ್ಯದ ಶ್ರೀಮನ್ಮಹಾಪ್ರಧಾನಂ ॥

ಸಭೂಷಣಂ ಜಯತಿ ವೀರಜಿನಪಾದಪಂಕಜಭಂಗ ಶ್ರೀ ಗುಮ್ಮಣಾಕ್ಯವಣಿ
ಗಾರ್ಯ್ಯಸನಾಗ ಶ್ರೀಮನೋಜಕುವಲಯವತಿ ಕೃತ ಚಂದಿರಾನಂದದಾಯಿ
ಕೀರ್ತ್ತಿಜ್ಯೋತ್ನಾ ಪ್ರವಾಹಃ ಕಲಕಮಲಹರ ಸದ್ಗುಣಸ್ಫಾರಕಾರ ಸದಮೃತ್ತೇಃ ॥

ಶ್ರೀಮನ್ಮಹಾಮಂಡಲೇಶ್ವರರು ಪಿರಿಯ ಮಲ್ಲರಾಯ ವಡೆಯರು
ಬೆಳುಗುಳದ ಗುಮ್ಮಟನಾಥಸ್ವಾಮಿಯರ ಮಸ್ತಕಾಭಿಷೇಕ ಮಾಡಿಸಿದ
ಶ್ರೀದೇವಭೂಪಾಲಗೆ ಪ್ರೇಮ ಪ್ರಧಾನರಾದ ಸಂಪದಿಗಳ..................

"ಮಹಾಮಂಡಳೇಶ್ವರಿ ಇಮ್ಮಡಿ ಚೆನ್ನಭೈರಾದೇವಿಯ ಸಕಲ ಸಾಮ್ರಾಜ್ಯದ ಅಭ್ಯುದಯಕ್ಕೆ ಕಾರಣವಾಗಿ ಸಿರಿಯ ಮಲ್ಲಣ್ಣ ಒಡೆಯರು ಕ್ರಿ.ಶ. ೧೫೮೭ರಲ್ಲಿ ಬೆಳುಗುಳದ ಗುಮ್ಮಟನಾಥಸ್ವಾಮಿಗೆ ಮಹಾಮಸ್ತಕಾಭಿಷೇಕವನ್ನು ಮಾಡಿಸಿದರು" ಎಂದು ಸಮಕಾಲೀನ ಶಾಸನದಲ್ಲಿ ದಾಖಲಾಗಿದೆ.[೨೯]

ಕುಂದಕುಂದಾಚಾರ್ಯ ಪರಂಪರೆಯ ಪಂಡಿತಾಚಾರ್ಯರ ಶಿಷ್ಯ ಶಾಂತವರ್ಣಿ ಗೇರುಸೊಪ್ಪೆಯ ದೇವರಾಯ ಒಡೆಯನು ಗೊಮ್ಮಟನಿಗೆ ಮಸ್ತಕಾಭಿಷೇಕ ಮಾಡಿದ್ದನ್ನು ತಿಳಿದು ತಾನೂ ಮಸ್ತಕಾಭಿಷೇಕ ಮಾಡಲು ನಿರ್ಧರಿಸಿ–

ವರ ಶಕವರುಷ ಸಾವಿರದೈನೂಱ್ನಾಲ್ವತ್ತ
ಪರಿಧಾವಿ ಸಂವತ್ಸರದ
ನೆಱೆ ಚೈತ್ರಮಾಸ ಪೌರ್ಣಮಿಯಿಂದುವಾರದಿ
ಅರುಹ ಗುಮ್ಮಟ ಜಿನೇಶ್ವರಗೆ ॥

ಗುರು ಶಾಂತವರ್ಣೀಶ ಮಸ್ತಕ ಪೂಜೆಯ
ನಿರದೆ ಮಾಡಿಸಿದ ದೇಶದೊಳು
ಸ್ಥಿರಕೀರ್ತಿವಡೆದನು ಚಂದ್ರಸೂರ್ಯರು ಭೂಮಿ
ಇರುವನ್ನಕ ಸಂತಸದಿ ॥

"ಶಕವರ್ಷ ೧೫೪೦ರ ಪರಿಧಾವಿ ಸಂವತ್ಸರದ ಚೈತ್ರ ಮಾಸದ ಪೌರ್ಣಮಿ ಚಂದ್ರವಾರದಂದು (ಕ್ರಿ.ಶ. ೧೬೧೮) ಮಸ್ತಕಾಭಿಷೇಕ ನೆರವೇರಿಸಿ, ದೇಶದಲ್ಲಿ ಚಂದ್ರ, ಸೂರ್ಯರು ಇರುವವರೆಗೆ ಸ್ಥಿರಕೀರ್ತಿಯನ್ನು ಪಡೆದರು" ಎಂದು ಶ್ರವಣಬೆಳಗೊಳದ ಪಂಚಬಾಣ ಕವಿ 'ಭುಜಬಲಿ ಚರಿತೆ' (ಕ್ರಿ.ಶ. ೧೬೧೪) ಎಂಬ ಸಾಂಗತ್ಯ ಕಾವ್ಯದಲ್ಲಿ ದಾಖಲಿಸಿದ್ದಾನೆ.[೩೦] ಕ್ರಿ.ಶ. ೧೬೧೫ ಮತ್ತು ೧೬೧೭ರಲ್ಲಿ ರಾಜ ಒಡೆಯರು ಮತ್ತು ಅವರ ಮಂತ್ರಿ ಶಾಂತಾರ್ಯನ ಸಹಕಾರದೊಂದಿಗೆ ಶ್ರೀಮಠದ ಶಾಂತವರ್ಣಿ ಭಟ್ಟಾರಕರೂ, ಕ್ರಿ.ಶ. ೧೬೫೯ರಲ್ಲಿ ಮೈಸೂರಿನ ದೊಡ್ಡ ದೇವರಾಜ ಒಡೆಯರೂ, ಕ್ರಿ.ಶ. ೧೬೭೮ರಲ್ಲಿ ಚಿಕ್ಕದೇವರಾಜ ಒಡೆಯರೂ ಒಂದೊಂದು ಮಸ್ತಕಾಭಿಷೇಕ ನೆರವೇರಿಸಿದರು. ಅನಂತಕವಿ 'ಗೊಮ್ಮಟೇಶ್ವರ ಚರಿತೆ'ಯಲ್ಲಿ ಮೈಸೂರಿನ ಚಿಕ್ಕದೇವರಾಜ ಒಡೆಯರ ಮಂತ್ರಿಯಾದ ಜೈನ ಬ್ರಾಹ್ಮಣ ಮನೆತನದ ವಿಶಾಲಾಕ್ಷಪಂಡಿತನು ನಳ ಸಂವತ್ಸರದ ಫಾಲ್ಗುಣ ಶುಕ್ಲ ಪಕ್ಷದ ಏಕಾದಶಿಯಂದು (ಕ್ರಿ.ಶ. ೧೬೭೮) ಮಾಡಿಸಿದ ಮಸ್ತಕಾಭಿಷೇಕವನ್ನು ಹಾಗೂ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲಾವಧಿಯಲ್ಲಿ ಶಾಂತಯ್ಯನು ಶಾಲಿವಾಹನ ಶಕವರ್ಷ ೧೭೦೧ರ ದುರ್ಮುಖಿ ಸಂವತ್ಸರದ ಫಾಲ್ಗುಣ

(ಶುಕ್ಲ?) ಪಂಚಮಿಯಿಂದ ದಶಮಿಯವರೆಗೆ (ಕ್ರಿ.ಶ. ೧೭೬೭) ನೆರವೇರಿಸಿದ ಕನಕಾಭಿಷೇಕ ಮತ್ತು ಮಸ್ತಕಾಭಿಷೇಕವನ್ನು ಮನಮೋಹಕವಾಗಿ ಬಣ್ಣಿಸಿದ್ದಾನೆ. ಕವಿಚಕ್ರವರ್ತಿ ಶಾಂತರಾಜ ಪಂಡಿತನು 'ಸರಸಜನ ಚಿಂತಾಮಣಿ'ಯಲ್ಲಿ ಮೈಸೂರಿನ ೩ನೆಯ ಕೃಷ್ಣರಾಜ ಒಡೆಯರು ಕ್ರಿ.ಶ. ೧೮೨೫ರಲ್ಲಿ ಮಸ್ತಕಾಭಿಷೇಕ ನೆರವೇರಿಸಿದರು ಎಂದು ಹೇಳಿದ್ದಾನೆ.[೩೧]

ಶ್ರವಣಬೆಳಗೊಳದ ಕ್ರಿ.ಶ. ೧೮೨೭ರ ಶಾಸನದಲ್ಲಿ–
ಸ್ವಸ್ತಿ ಶ್ರೀವಿಜಯಾಭ್ಯುದಯ ಶಾಲಿವಾಹನ ಶಖವರುಷ
೧೭೪೮ನೆ ಸಂದ ವರ್ತ್ತಮಾನಕ್ಕೆ ಸಲುವ ವ್ಯಯನಾಮ
ಸಂವತ್ಸರದ ಫಾಲ್ಗುಣ ಬ ೫ ಭಾನುವಾರದಲ್ಲು ಕಾಸ್ಯಪ
ಗೋತ್ರೇ ಅಹನಿಯ ಸೂತ್ರೇ ವೃಷಭ ಪ್ರವರೇ ಪ್ರಥಮಾನು
ಯೋಗಶಾಖಾಯಾಂ ಶ್ರೀ ಚಾವುಂಡರಾಜವಂಶಸ್ಥರಾದ
ಬಿಳಿಕೆರೆ ಅನಂತರಾಜ್ಯೆ ಅರಸಿನವರ ಪ್ರಪೌತ್ರ ತೋಟ
ದ್ದೇವರಾಜ್ಯೆ ಅರಸಿನವರ ಪೌತ್ರ ಸತ್ಯಮಂಗಲದ ಚಲುವ್ಯೆ
ಅರಸಿನವರ ಪುತ್ರ ಶ್ರೀಮನ್ ಮಹಿಸೂರಪುರವರಾಧೀಶ
ಶ್ರೀ ಕ್ರಿಷ್ಣರಾಜ ವಡೆಯರವರ ಸಮ್ಮುಖದಲ್ಲಿ ಭಾರಿಗಾಟು
ಕಂದಾಚಾರ ಸವಾರ ಕಚೇರಿ ಯಿಲಾಖೆ ಭಕ್ಷಿ ದೇವರಾಜ್ಯೆ
ಅರಸಿನವರು ಶ್ರೀ ಗೋಮಟೇಶ್ವರ ಸ್ವಾಮಿಯವರ ಮಸ್ತಕಾಭಿಷೇಕ
ಪೂಜೋತ್ಸವದ್ದಿವಸ ಸ್ವರ್ಗ್ಗಸ್ಥರಾದ್ದಕ್ಕೆ ಶ್ರೀಮಠದಿಂದ ವರ್ಷಂಪ್ರತಿ
ವರುಷದಲ್ಲು ಶ್ರೀ ಗೋಮಟೇಶ್ವರ ಸ್ವಾಮಿಯವರಿಗೆ ಪಾದಪೂಜೆ
ಮುಂತಾದ ಸೇವಾರ್ತ್ಥ ನಡೆಯುವ ಹಾಗೆ ಯಿವರ ಪುತ್ರರಾದ
ಪುಟ್ಟದೇವರಾಜ್ಯೆ ಅರಸಿನವರು ೧೦೦ ನೂರು ವರಹ ಹಾಕಿರುವ
ಪುದುವಟ್ಟಿನ ಸೇವೆಗೆ ಭದ್ರಂ ಭೂಯಾದ್ವರ್ದ್ಧತಾಂ ಜಿನಶಾಸನಂ ॥ ಶ್ರೀ ॥

"ಕ್ರಿ.ಶ. ೧೮೨೭ರ ಮಾರ್ಚ್ ೧೮ರಂದು ಅಹನಿಯ ಸೂತ್ರದ ವೃಷಭ ಪ್ರವರದ ಪ್ರಥಮಾನುಯೋಗ ಶಾಖೆಯ ಶ್ರೀ ಚಾವುಂಡರಾಜನ ವಂಶಸ್ಥರಾದ ಬಿಳಿಕೆರೆ ಅನಂತರಾಜಯ್ಯ ಅವರ ಮೊಮ್ಮಕ್ಕಳೂ, ಸತ್ಯಮಂಗಲದ ಚಲುವಯ್ಯ ಅವರ ಪುತ್ರರೂ, ಮಹಿಸೂರಪುರವರಾಧೀಶರೂ ಆದ ಶ್ರೀ ಕೃಷ್ಣರಾಜ ಒಡೆಯರವರ ಸಮ್ಮುಖದಲ್ಲಿ ಬಾರಿಗಾಟು ಕಂದಾಚಾರ ಸವಾರ ಕಛೇರಿ ಇಲಾಖೆ ಭಕ್ಷಿ ದೇವರಾಜಯ್ಯ ಅವರು ಶ್ರೀ ಗೊಮ್ಮಟೇಶ್ವರ ಸ್ವಾಮಿಯವರ ಮಸ್ತಕಾಭಿಷೇಕ ಪೂಜೋತ್ಸವದ ದಿವಸ ಸ್ವರ್ಗಸ್ಥರಾದರು. ಶ್ರೀಮಠದಿಂದ ಪ್ರತಿ ವರ್ಷ ಗೊಮ್ಮಟೇಶ್ವರ ಸ್ವಾಮಿಯವರಿಗೆ ಪಾದಪೂಜೆ ಮುಂತಾದ ಸೇವಾರ್ಥ ನಡೆಸಲು ದೇವರಾಜಯ್ಯ ಅವರ ಮಕ್ಕಳಾದ ಪುಟ್ಟದೇವರಾಜಯ್ಯ ಅವರು ನೂರು ವರಹ ಪುದುವಟ್ಟನ್ನು ಹಾಕಿರುವರು" ಎಂದು ನಿರೂಪಣೆಯಿದೆ.[೩೨] ಇದರಿಂದ ಕ್ರಿ.ಶ. ೧೮೨೭ರಲ್ಲಿ ಬಾಹುಬಲಿಗೆ ಮಹಾಮಸ್ತಕಾಭಿಷೇಕ ನಡೆದಿರುವುದು ಸ್ಪಷ್ಟವಾಗುತ್ತದೆ.

ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರು ತಮ್ಮ ರಾಜ್ಯದಲ್ಲಿ ಬ್ರಿಟೀಷರು 'ರೆಸಿಡೆಂಟ್' ಆಡಳಿತವನ್ನು ವಿಧಿಸಿದ್ದರೂ, ತಮ್ಮ ಪೂರ್ವಜರ ಸಂಪ್ರದಾಯದಂತೆ ಕ್ರಿ.ಶ. ೧೮೫೭ರಲ್ಲಿ ನಡೆದ ಮಹಾಮಸ್ತಕಾಭಿಷೇಕಕ್ಕೆ ೨ ಕಂಠಿಗಳು, ೧ ಜೊತೆ ಜರಿ ಶಾಲುಗಳು, ೧ ಜರಿಪಟ್ಟೆ ಮಡಿ (ಚಿನ್ನದ ಅಂಚಿನದು), ೧ ಜೊತೆ ಚಿನ್ನದ ಕಿರಿಯ ಧೋತಿ, ೫ ಜೊತೆ ಕಾಶ್ಮೀರಿ ಶಾಲುಗಳು, ೫ ಜೊತೆ ವಮನೂರ್ ಧೋತಿಗಳು, ೫ ಜೊತೆ ಪಟ್ಟೆ ಮಡಿ, ೫೦ ಜೊತೆ ಮೇಲುಕೋಟೆ ಧೋತಿ, ೧೬೮ ತಾಮ್ರದ ಕಲಶಗಳು ಮೊದಲಾದ ಕಿಲ್ಲತ್ತುಗಳನ್ನು ಕಳಿಸಿದರು. ೧೦ನೆಯ ಚಾಮರಾಜ ಒಡೆಯರು ಕ್ರಿ.ಶ. ೧೮೭೧ರ ಜೂನ್ ತಿಂಗಳಿನಲ್ಲಿ ಮತ್ತು ೧೮೮೭ರ ಮಾರ್ಚ್ ೧೪ರಂದು ಮಹಾ ಮಸ್ತಕಾಭಿಷೇಕಗಳನ್ನು ನಡೆಸಿದರು. ಮೈಸೂರು ಕಮೀಶನರ್ ಕ್ಯಾಪ್ಟನ್ ಎಸ್.ಎಫ್. ಮೆಕೆಂಜಿ ೧೮೭೧ರಲ್ಲಿ ನಡೆದ ಮಹಾಮಸ್ತಕಾಭಿಷೇಕದ ವ್ಯಾಪಕ ವರ್ಣನೆಯನ್ನು ಬರೆದಿದ್ದಾನೆ. ಅವನು ಬಾಹುಬಲಿಯ ಶಿಲ್ಪದ ಅಳತೆಯನ್ನೂ ಮಾಡಿಸಿದನು.

ಹಾರ್ವೆಸ್ಟ್ ಫೀಲ್ಡನು ಕೊಲ್ಲಾಪುರದ ಜೈನ ಮಠದ ಲಕ್ಷ್ಮೀಸೇನ ಭಟ್ಟಾರಕರ ನೇತೃತ್ವದಲ್ಲಿ ಕ್ರಿ.ಶ. ೧೮೮೭ರಲ್ಲಿ ನಡೆದ ಮಸ್ತಕಾಭಿಷೇಕವನ್ನು ಈ ಮುಂದಿನಂತೆ ದಾಖಲಿಸಿದ್ದಾನೆ. "೧೮೮೭ರ ಮಾರ್ಚ್ ೧೪, ಗೊಮ್ಮಟೇಶ್ವರನ ಮಸ್ತಕಾಭಿಷೇಕದ ದಿನವಾಗಿತ್ತು. ೨೦ ಸಾವಿರಕ್ಕಿಂತ ಹೆಚ್ಚು ಜನ ಅಲ್ಲಿ ಸೇರಿತ್ತು. ಬಂಗಾಳಿಗಳು, ಗುಜರಾತಿಗಳು, ತಮಿಳರು ಮೊದಲಾದ ಭಾರತದ ಎಲ್ಲ ಪ್ರಾಂತಗಳಿಂದಲೂ ಜನ ಬಂದಿದ್ದರು. ಕೆಲವರಂತೂ ಒಂದು ತಿಂಗಳು ಮೊದಲೆ ಬಂದಿದ್ದರು.......... ಮಾರ್ಚ್ ೧೪ನೆಯ ದಿನ ನಸುಕಿನಲ್ಲಿಯೇ ಬೆಟ್ಟವನ್ನು ಹತ್ತಲಾರಂಭಿಸಿದ್ದರು. ಅವರಿಗೆ ಪ್ರಶಸ್ತವಾದ ಸ್ಥಳವನ್ನು ಹುಡುಕಿ ಕೂಡಬೇಕಾಗಿತ್ತು. ಸುಮಾರು ೧೦ ಗಂಟೆಗೆ ಎಲ್ಲ ಸ್ಥಳವೂ ತುಂಬಿ ಹೋಯಿತು. ಸ್ವಾಮಿಯ ಎದುರು ೪೦ ಚಚ್ಚೌಕ ಅಡಿ ಸ್ಥಳದಲ್ಲಿ ಭತ್ತ ಹರಡಿ, ಶಾಸ್ತ್ರೋಕ್ತ ಪೂಜೆ ಮಾಡಿ, ೧,೦೦೦ ಕಲಶಗಳನ್ನಿಟ್ಟಿದ್ದರು. ಮೂರ್ತಿಯ ಹಿಂಭಾಗ ಮತ್ತು ಎರಡೂ ಪಕ್ಕಗಳಲ್ಲಿ ಬೊಂಬಿನ ಅಟ್ಟಣಿಗೆಯನ್ನು ಕಟ್ಟಿ ಪುರೋಹಿತರು ನೂರಾರು ಮಂದಿ ಅವುಗಳ ಮೇಲೆ ನಿಂತಿದ್ದರು. ಕೊಲ್ಲಾಪುರದ ಭಟ್ಟಾರಕರು ಕೈಬೀಸಿ ಆಜ್ಞೆ ಮಾಡಲು ಅವರೆಲ್ಲ ಸ್ವಾಮಿಯ ತಲೆಯ ಮೇಲೆ ತಮ್ಮ ಕೈಯಲ್ಲಿದ್ದ ಕೊಡಗಳನ್ನು ಸುರಿಯ ಲಾರಂಭಿಸಿದರು. ಎರಡು ಗಂಟೆಯ ಸುಮಾರಿಗೆ ಅನೇಕ ಶುಭ ವಾದ್ಯಗಳು ನುಡಿಯು ತ್ತಿದ್ದಂತೆ ಆ ಸಾವಿರ ಕಳಶಗಳನ್ನು ಎತ್ತಿ ಅಭಿಷೇಕ ಮಾಡಲಾಯಿತು. ಜನ ಜಯಜಯಕಾರ ಮಾಡುತ್ತಿದ್ದರು. ನೀರು, ಕೊಬ್ಬರಿ, ಕುಸುರು, ಬಾಳೆಹಣ್ಣು, ಬೆಲ್ಲ, ತುಪ್ಪ, ಸಕ್ಕರೆ, ಹಾಲು, ಮೊಸರು, ಗಂಧ ಮೊದಲಾದ ೧೫ ವಸ್ತುಗಳ ಅಭಿಷೇಕ ನಡೆದ ಮೇಲೆ ಬಂಗಾರ, ಬೆಳ್ಳಿಯ ಹೂಗಳನ್ನು ನವವಿಧ ರತ್ನಗಳೊಂದಿಗೆ ಸೇರಿಸಿ ಸ್ವಾಮಿಯ ತಲೆಯ ಮೇಲೆ ಹಾಕಿದ್ದಲ್ಲದೆ ೫೦೦ ರೂಪಾಯಿಯ ಬೆಳ್ಳಿಯ ನಾಣ್ಯಗಳನ್ನು ಸುರುವಿ ದರು". ಆರ್. ನರಸಿಂಹಾಚಾರ್ಯ ಅವರು ೧೯೦೯ರಲ್ಲಿ ಒಂದು ಮಸ್ತಕಾಭಿಷೇಕ ನಡೆದುದು ತಮಗೆ ಗೊತ್ತಿದೆ ಎಂದು ಹೇಳಿದ್ದಾರೆ.

ಶ್ರವಣಬೆಳಗೊಳದ ಚಾರುಕೀರ್ತಿ ಪಂಡಿತಾಚಾರ್ಯರ ನೇತೃತ್ವದಲ್ಲಿ ೧೯೧೦ರ ಮಾರ್ಚ್ ೩೦ರಂದು ಮಹಾಮಸ್ತಕಾಭಿಷೇಕ ನಡೆದಿದೆ. ಆ ಸಂದರ್ಭದಲ್ಲಿ ಮೈಸೂರಿನ ನಾಲ್ವಡಿ ಕೃಷ್ಣರಾಜ ಒಡೆಯರು ಹಿಂದಿನಿಂದ ಬಂದ ಸಂಪ್ರದಾಯದ ಪ್ರಕಾರ ಕ್ರಿ.ಶ. ೧೯೧೦ರಲ್ಲಿ ನಡೆದ್ದ ಮಹಾಮಸ್ತಕಾಭಿಷೇಕ ಮಹೋತ್ಸವಕ್ಕೆ ಅರಮನೆಯ ಕಾಣಿಕೆಗಳನ್ನು ಕೊಡಮಾಡಿದರು. ಅಂದು ಭಾರತವರ್ಷೀಯ ದಿಗಂಬರ ಜೈನ ತೀರ್ಥಕ್ಷೇತ್ರ ಕಮಿಟಿಯ ಮೂಲಕ ಮಹೋತ್ಸವದ ಏರ್ಪಾಟು ನಡೆಯಿತು. ಬಾಹುಬಲಿಯ ಸನ್ನಿಧಿಯನ್ನು ತಲುಪಲು ಬೆಟ್ಟಕ್ಕೆ ಪ್ರಥಮ ಬಾರಿಗೆ ಮೆಟ್ಟಿಲುಗಳನ್ನು ಮಾಡಿಸಲಾಯಿತು. ಇದಕ್ಕೂ ಮುಂಚೆ ಭಕ್ತರು ಬಂಡೆಯನ್ನು ಹತ್ತಿಯೇ ಬಾಹುಬಲಿಯ ಸನ್ನಿಧಿಯನ್ನು ತಲುಪಬೇಕಾಗಿದ್ದಿತು. ಈ ಮಹಾಮಸ್ತಕಾಭಿಷೇಕದ ವರದಿಯನ್ನು ಜೇಮ್ಸ್ ವೇಡ್ವರ್ಡ್ ಎಂಬ ಮದ್ರಾಸಿನ (ಚೆನ್ನೈ) ವರದಿಗಾರನು ಪಾರಿವಾಳದ ಮೂಲಕ ಶ್ರವಣಬೆಳಗೊಳದಿಂದ ನಾಲ್ಕು ನೂರು ಮೈಲು ದೂರದ ಮದ್ರಾಸಿಗೆ ಕಳುಹಿಸಿ, ಆ ದಿನವೇ ಸಂಜೆ ಪತ್ರಿಕೆಯಲ್ಲಿ ಇದು ಪ್ರಕಟವಾಗುವಂತೆ ಮಾಡಿರುವುದು ವಿಶೇಷವಾಗಿತ್ತು. ಅಂದಿನ ಚಾರುಕೀರ್ತಿ ಪಂಡಿತಾಚಾರ್ಯರು ಮೈಸೂರು ಅರಮನೆಯ 'ಜೈನ ಕುಲಭೂಷಣ' ಎಂ.ಎಲ್. ವರ್ಧಮಾನಯ್ಯ (ಮೋತಿಖಾನೆ ಲಕ್ಷ್ಮೀಪತಯ್ಯ ವರ್ಧಮಾನಯ್ಯ) ಅವರ ಮುಖಂಡತ್ವದಲ್ಲಿ ೧೯೨೫ರ ಮಾರ್ಚ್ ೧೫ರಂದು ಮಹಾಮಸ್ತಕಾಭಿಷೇಕವನ್ನು ನಡೆಸಿದ್ದಾರೆ. ಅಂದು ನೇಮಿಸಾಗರ ಭಟ್ಟಾರಕರ ವಿನಂತಿ ಮೇರೆಗೆ ಆಚಾರ್ಯಶ್ರೀ ಶಾಂತಿಸಾಗರ ಮುನಿಗಳು (೧೮೭೨-೧೯೫೫) ದಕ್ಷಿಣದಲ್ಲಿ ವಿಹಾರ ಕೈಗೊಂಡು ಮಹೋತ್ಸವದ ಹಿರಿಮೆಯನ್ನು ಹೆಚ್ಚಿಸಿದರು. ಪೂಜಾದಿ ಧಾರ್ಮಿಕ ಕಾರ್ಯಗಳ ನಿರ್ವಹಣೆಯಲ್ಲಿ ಮೈಸೂರು ಒಡೆಯರ 'ಆಸ್ಥಾನ ವಿದ್ವಾಂಸ'ರಾಗಿದ್ದ ಪಂಡಿತರತ್ನ ಎರ್ತೂರು ಶಾಂತಿರಾಜ ಶಾಸ್ತ್ರಿಗಳು (೧೮೮೮-೧೯೫೨) ಮತ್ತು ಮೈಸೂರಿನ ಕೋಟೆ ಬಸದಿಯ ಬಿ. ಚಂದಪ್ಪ ಅವರು ಪ್ರಮುಖರಾಗಿದ್ದರೆಂದು ತಿಳಿಯುತ್ತದೆ.

ನಾಲ್ವಡಿ ಕೃಷ್ಣರಾಜ ಒಡೆಯರು ಮತ್ತು ರಾಜಕುಮಾರ ಜಯಚಾಮರಾಜೇಂದ್ರ ಒಡೆಯರ ನೇತೃತ್ವದಲ್ಲಿ ೧೯೪೦ರ ಫೆಬ್ರುವರಿ ೨೬ರಂದು ಮಹಾಮಸ್ತಕಾಭಿಷೇಕ ನಡೆದಿದೆ. ಅರಸರು ಮಹಾಮಸ್ತಕಾಭಿಷೇಕಕ್ಕೆ ಪರಿವಾರ ಸಮೇತ ಆಗಮಿಸಿ, ಇಲ್ಲಿ ಟೆಂಟ್ ಹಾಕಿಸಿಕೊಂಡು ಮೂರು ದಿನಗಳವರೆಗೆ ನೆಲೆಸಿದ್ದರು. ಈ ಸಂದರ್ಭದಲ್ಲಿ ಸೇಠ್ ಹುಕುಮಚಂದ್ರ ಅವರ ಅಧ್ಯಕ್ಷತೆಯಲ್ಲಿ ಅಖಿಲ ಭಾರತ ಜೈನ ಮಹಾಸಭೆಯ ಅಧಿವೇಶನವನ್ನು ಕೈಗೊಳ್ಳಲಾಗಿತ್ತು. ಈ ಮಹಾಮಸ್ತಕಾಭಿಷೇಕದ ವ್ಯವಸ್ಥೆಯಲ್ಲೂ ಮೈಸೂರು ಅರಮನೆಯ 'ಜೈನ ಕುಲಭೂಷಣ' ಎಂ.ಎಲ್. ವರ್ಧಮಾನಯ್ಯ ಅವರೇ ನೇತಾರರಾಗಿದ್ದರೆಂದು ವರದಿಯಾಗಿದೆ. ಅಂದು ಬೆಟ್ಟದವರೆಗೂ ವಿದ್ಯುತ್ ಸರಬರಾಜು ನಡೆಯಿತು. ಜಯಚಾಮರಾಜ ಒಡೆಯರು ಕಮಿಟಿಯನ್ನು ರಚಿಸಿ, ೧೯೫೩ರ ಮಾರ್ಚ್ ೫ರಂದು ಮಹಾಮಸ್ತಕಾಭಿಷೇಕದ ಏರ್ಪಾಟು ಮಾಡಿಸಿದರು. ಅಂದು ಕಬ್ಬಿಣದ ಪೈಪ್‌ಗಳಿಂದ ಸುಸಜ್ಜಿತವಾದ ಅಭಿಷೇಕದ ಅಟ್ಟಳಿಗೆಯನ್ನು ನಿರ್ಮಿಸಲಾಗಿತ್ತು. ಇದರಲ್ಲಿ ಅಂದಿನ ಕೇಂದ್ರ ಆಹಾರ ಖಾತೆಯ ಮಂತ್ರಿಯಾಗಿದ್ದ ಎ.ಪಿ. ಜೈನ ಅವರು

ಭಾಗವಹಿಸಿದ್ದರು. ೧೯೬೭ರ ಮಾರ್ಚ್ ೩೦ರಂದು ಶ್ರವಣಬೆಳಗೊಳ ದಿಗಂಬರ ಜೈನ ಮುಜರಾಯಿ ಕಮೀಟಿ, ಮೈಸೂರು ಸರಕಾರ ಮತ್ತು ಭಾರತವರ್ಷೀಯ ದಿಗಂಬರ ಜೈನ ತೀರ್ಥಕ್ಷೇತ್ರ ಕಮೀಟಿಯ ಸಹಕಾರದಿಂದ ಮಹಾಮಸ್ತಕಾಭಿಷೇಕ ನಡೆಯಿತು. ಸಾಹು ಶಾಂತಿಪ್ರಸಾದರು ವಿಶೇಷ ಸಹಕಾರವಿತ್ತರು. ಶ್ರೀಮಠದ ಚಾರುಕೀರ್ತಿ ಭಟ್ಟಾರಕರು ಮತ್ತು ಮೈಸೂರು ರಾಜ್ಯದ ಅಂದಿನ ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪ ಹಾಗೂ ಉಪಕುಲಪತಿ ಕಾಲೂಲಾಲ್ ಮಾಲಿ ಅವರ ಸಾನ್ನಿಧ್ಯವಿತ್ತು. ಈ ಮಹೋತ್ಸವ ವನ್ನು ನೋಡಲು ದೇಶ-ವಿದೇಶಗಳ ಕಲಾವಿದರು, ಪ್ರವಾಸಿಗರು ಆಗಮಿಸಿದ್ದರು. ದೂರದರ್ಶನ ಮಾಧ್ಯಮದ ಮೂಲಕ ಈ ಪೂಜೆಯ ಮಹಾದೃಶ್ಯವನ್ನು ಪ್ರಪಂಚದ ಎಲ್ಲ ಭಾಗಗಳಿಗೂ ತೋರಿಸಲಾಯಿತು. ಹೆಲಿಕ್ಯಾಪ್ಟರ್ ಮೂಲಕ ಪುಷ್ಪವೃಷ್ಟಿ ಮಾಡಲಾಯಿತು. ಈ ಪೂಜೆಯನ್ನು ನೋಡಲು ಸುಮಾರು ಹತ್ತು ಲಕ್ಷ ಜನ ಸೇರಿದ್ದರು. ಅಂದು ಅಖಿಲ ಭಾರತ ಜೈನ ಸಿದ್ಧಾಂತ ಮತ್ತು ಆ.ನೇ. ಉಪಾಧ್ಯೆ ಅವರ ಅಧ್ಯಕ್ಷತೆಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನಗಳನ್ನು ವೈಭವದಿಂದ ನಡೆಸಲಾಗಿತ್ತು. ಬಾಹುಬಲಿಯ ಸನ್ನಿಧಿಯನ್ನು ತಲುಪಲು ಬೆಟ್ಟದ ಪಶ್ಚಿಮ ಬದಿಯಲ್ಲಿ ೨ನೆಯ ಮೆಟ್ಟಿಲುಗಳನ್ನು ನಿರ್ಮಿಸಲಾಯಿತು. ಆಕಾಶವಾಣಿ ಮಹಾಮಸ್ತಕಾಭಿಷೇಕದ ವೀಕ್ಷಕ ವಿವರಣೆಯನ್ನು ಬೆಟ್ಟದ ಮೇಲೆ ಧ್ವನಿ ಮುದ್ರಿಸಿಕೊಂಡು ಬೆಂಗಳೂರು ಕೇಂದ್ರದಿಂದ ಪ್ರಸಾರ ಮಾಡಿತು.

ರಾಷ್ಟ್ರಸಂತ ಆಚಾರ್ಯಶ್ರೀ ವಿದ್ಯಾನಂದ ಮಹಾರಾಜರ ಸಮರ್ಥ ಮಾರ್ಗದರ್ಶನ ಮತ್ತು ಇಂದಿನ ಪೀಠಾಧಿಪತಿಗಳಾದ ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕ ಮಹಾಸ್ವಾಮೀಜಿ ಅವರ ನೇತೃತ್ವದಲ್ಲಿ ೧೯೮೧ರ ಮಾರ್ಚ್ ೨೨ರಂದು ನಡೆದ ಅಂತರರಾಷ್ಟ್ರೀಯ ಮಟ್ಟದ ಮಹಾಮಸ್ತಕಾಭಿಷೇಕವು ಅಪೂರ್ವವಾಗಿದೆ. ಅಂದಿನ ಪ್ರಧಾನಮಂತ್ರಿ ಇಂದಿರಾಗಾಂಧಿ ಅವರ ಅಧ್ಯಕ್ಷತೆಯಲ್ಲಿ ರಾಷ್ಟ್ರೀಯ ಸಮಿತಿಯನ್ನು ರಚಿಸಲಾಗಿತ್ತು. ಅಂದು ಚಾವುಂಡರಾಯನು ಬಾಹುಬಲಿಯ ಶಿಲ್ಪವನ್ನು ಪ್ರತಿಷ್ಠಾಪಿಸಿ ಸಾವಿರ ವರ್ಷವಾದುದರ ಶುಭಸಮಾರಂಭ ಮತ್ತು ಮಹಾಮಸ್ತಕಾಭಿಷೇಕ ಎರಡನ್ನೂ ಸೇರಿಸಿ ಅತ್ಯಂತ ವಿಜೃಂಭಣೆಯಿಂದ ಆಚರಿಸಲಾಯಿತು. ಪೂಜೋತ್ಸವಕ್ಕಾಗಿ ಇರುವ ಮೊದಲ ಹತ್ತು ಕಲಶಗಳಲ್ಲಿ ಒಂಭತ್ತನ್ನು ಲಕ್ಷಕ್ಕೊಂದರಂತೆ ಖರೀದಿಸಿದ್ದರೆ, ಜನಸಾಮಾನ್ಯರ ಭಕ್ತಿಯ ಪ್ರತೀಕವಾದ ೧೦ನೆಯ 'ಗೋಮಟೇಶ್ವರ ಜನಮಂಗಳ ಮಹಾಕಲಶ'ವನ್ನು ಇಂದಿರಾಗಾಂಧಿ ಅವರು ೧೯೮೧ರ ಸಪ್ಟೆಂಬರ್ ೨೯ರಂದು ಪೂಜೆ ಸಲ್ಲಿಸಿ ಬೀಳ್ಕೊಟ್ಟಿದ್ದರು. ಅದು ರಾಷ್ಟ್ರದ ಹದಿಮೂರು ರಾಜ್ಯಗಳು, ಎರಡು ನೂರು ಪ್ರಮುಖ ನಗರಗಳಲ್ಲಿ ಸಂಚರಿಸಿ ಕೋಟ್ಯಂತರ ಜನರ ಭಕ್ತಿಯ ಕಾಣಿಕೆಯಾದ ಇಪ್ಪತ್ತೂರು ಲಕ್ಷ ರೂಪಾಯಿಯನ್ನು ಹೊತ್ತು ಫೆಬ್ರುವರಿ ೧೯ರಂದು ಶ್ರವಣಬೆಳಗೊಳವನ್ನು ತಲುಪಿತು. ಮಹಾಮಜ್ಜನಕ್ಕೆ ಒಂದು ದಿನ ಮೊದಲೇ ಇಂದಿರಾಗಾಂಧಿ ಅವರು ಬಾಹುಬಲಿಗೆ ಪುಷ್ಪವೃಷ್ಟಿ ಅರ್ಪಿಸಿ, ತಮ್ಮ ಭಕ್ತಿಭಾವಪೂರಿತ ನಮನ ಸಲ್ಲಿಸಿದರು. ಫೆಬ್ರುವರಿ ೨೨ರಂದು ನೆರವೇರಿದ ಅಭಿಷೇಕದಲ್ಲಿ ಅಂದಿನ ಮುಖ್ಯಮಂತ್ರಿ ಆರ್. ಗುಂಡೂರಾವ ಅವರು ಪಾಲ್ಗೊಂಡಿದ್ದರು. ಸಾಹು ಶ್ರೇಯಾಂಸ ಪ್ರಸಾದ ಅವರ ಅಧ್ಯಕ್ಷತೆಯಲ್ಲಿ ದಿಗಂಬರ

ಜೈನ ಸಮಾಜದ ರಾಷ್ಟ್ರೀಯ ಸಮಿತಿ ರಚಿತವಾಯಿತು. ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕ ಮಹಾಸ್ವಾಮೀಜಿ ಅವರಿಗೆ 'ಕರ್ಮಯೋಗಿ' ಎಂಬ ಬಿರುದನ್ನಿತ್ತು ಗೌರವಿಸಲಾಯಿತು. ಈ ಮಹೋತ್ಸವದ ಅಂಗವಾಗಿ ಶ್ರವಣಬೆಳಗೊಳದಲ್ಲಿ ಬಸ್ ನಿಲ್ದಾಣ, ಆಸ್ಪತ್ರೆ ಕಟ್ಟಡ, ರಸ್ತೆ ನಿರ್ಮಾಣ, ನೀರು ಸರಬರಾಜು ಮೊದಲಾದ ಜನೋಪಯೋಗಿ ಕಾರ್ಯಗಳನ್ನು ಕೈಗೊಳ್ಳಲಾಯಿತು. ಬಾಹುಬಲಿಯ ಸನ್ನಿಧಿಯನ್ನು ತಲುಪಲು ೧೯೧೦ರಲ್ಲಿ ನಿರ್ಮಿಸಲಾಗಿದ್ದ ೧ನೆಯ ಮೆಟ್ಟಿಲುಗಳಿಗೆ ಹೊಂದಿಕೊಂಡಂತೆ ೩ನೆಯ ಮೆಟ್ಟಿಲುಗಳನ್ನು ನಿರ್ಮಿಸಲಾಯಿತು. ಆಕಾಶವಾಣಿ ಮಹಾಮಸ್ತಕಾಭಿಷೇಕದ ವೀಕ್ಷಕ ವಿವರಣೆಯನ್ನು ಕನ್ನಡ, ಹಿಂದಿ, ಇಂಗ್ಲೀಷನಲ್ಲಿ ನೇರ ಪ್ರಸಾರ ಮಾಡಿತು.

ಆಚಾರ್ಯಶ್ರೀ ವರ್ಧಮಾನಸಾಗರ ಮಹಾರಾಜರ ಸಾನ್ನಿಧ್ಯ, ಧರ್ಮಸ್ಥಳದ ಧರ್ಮಾಧಿಕಾರಿ ವೀರೇಂದ್ರ ಹೆಗ್ಗಡೆ ಅವರ ಮಾರ್ಗದರ್ಶನ ಮತ್ತು ಇಂದಿನ ಪೀಠಾಧಿಪತಿಗಳಾದ ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕ ಮಹಾಸ್ವಾಮೀಜಿ ಅವರ ನೇತೃತ್ವದಲ್ಲಿ ೧೯೯೩ರ ಡಿಸೆಂಬರ್ ೧೯ರಂದು ಮಹಾಮಸ್ತಕಾಭಿಷೇಕ ಅದ್ದೂರಿಯಾಗಿ ನಡೆದಿದೆ. ಅಂದಿನ ರಾಷ್ಟ್ರಪತಿಗಳಾದ ಶಂಕರದಯಾಳ ಶರ್ಮಾ ಅವರು ಮಹೋತ್ಸವದ ಉದ್ಘಾಟನೆಯನ್ನು ಮಾಡಿದರು. ಡಿಸೆಂಬರ್ ೧೮ರಂದು ಅಂದಿನ ಪ್ರಧಾನಮಂತ್ರಿ ಪಿ.ವಿ. ನರಸಿಂಹರಾವ ಅವರು ಪುಷ್ಪವೃಷ್ಟಿ ಸಲ್ಲಿಸಿದರು. ಫೆಬ್ರುವರಿ ೧೯ರಂದು ನೆರವೇರಿದ ಅಭಿಷೇಕದಲ್ಲಿ ಅಂದಿನ ಮುಖ್ಯಮಂತ್ರಿ ವೀರಪ್ಪ ಮೊಯಿಲಿ ಅವರು ಪಾಲ್ಗೊಂಡಿದ್ದರು. ದೂರದರ್ಶನವು ತನ್ನ ರಾಷ್ಟ್ರೀಯ ಕಾರ್ಯಕ್ರಮ ಜಾಲದಲ್ಲಿ ನಾಲ್ಕು ಗಂಟೆಗಳ ಕಾಲ ಈ ಮಹಾಮಸ್ತಕಾಭಿಷೇಕದ ನೇರ ಪ್ರಸಾರ ಮಾಡಿತು. ಇದರಲ್ಲಿ ಪ್ರತ್ಯಕ್ಷ ವಿವರಣೆಯನ್ನು ನೀರಜ್ ಜೈನ ನೀಡಿದರು. ಆಕಾಶವಾಣಿಯೂ ವಿಸ್ತಾರವಾಗಿ ಕಾರ್ಯಕ್ರಮ ಪ್ರಸಾರ ಮಾಡಿತು. ದೇಶದಾದ್ಯಂತ ಸಮಾಚಾರ ಪತ್ರಿಕೆಗಳು ಈ ಮಹೋತ್ಸವದ ಹಿರಿಮೆಯನ್ನು ಎತ್ತಿ ಸಾರಿದವು. ಈ ಮಹೋತ್ಸವದ ಅಂಗವಾಗಿ ಶ್ರವಣಬೆಳಗೊಳದಲ್ಲಿ ಯಾತ್ರಿಕರಿಗಾಗಿ ಸುಸಜ್ಜಿತವಾದ ಅತಿಥಿ ಗೃಹಗಳು, ವಿಶಾಲವಾದ ಯಾತ್ರಿ ನಿವಾಸಗಳು, ಕೆಲವು ಧರ್ಮಛತ್ರಗಳು, ಆಸ್ಪತ್ರೆ ಮತ್ತು ಬಸ್ ನಿಲ್ದಾಣದ ವಿಸ್ತರಣೆ, ಶಾಶ್ವತವಾದ ನೀರು ಸರಬರಾಜು ವ್ಯವಸ್ಥೆ, ತೋಟ–ಉದ್ಯಾನವನಗಳ ಮೂಲಕ ನಗರದ ಸೌಂದರೀಕರಣ ಮೊದಲಾದ ಜನೋಪಯೋಗಿ ಕಾರ್ಯಗಳನ್ನು ಕೈಗೊಳ್ಳಲಾಯಿತು. ಆಕಾಶವಾಣಿ ಮಹಾಮಸ್ತಕಾಭಿಷೇಕದ ವೀಕ್ಷಕ ವಿವರಣೆಯನ್ನು ಮತ್ತು ಜೈನ ಧರ್ಮ, ಸಾಹಿತ್ಯ, ಸಂಸ್ಕೃತಿ, ಕಲೆಯನ್ನು ಕನ್ನಡ, ಹಿಂದಿ, ಸಂಸ್ಕೃತ, ಇಂಗ್ಲೀಷನಲ್ಲಿ ಪ್ರಸಾರ ಮಾಡಿತು.

ರಾಷ್ಟ್ರಸಂತ ಆಚಾರ್ಯಶ್ರೀ ವಿದ್ಯಾನಂದ ಮಹಾರಾಜರ ಮಾರ್ಗದರ್ಶನ, ಆಚಾರ್ಯಶ್ರೀ ವರ್ಧಮಾನಸಾಗರ ಮಹಾರಾಜರ ಪಾವನ ಸಾನ್ನಿಧ್ಯ ಮತ್ತು ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕ ಮಹಾಸ್ವಾಮೀಜಿ ಅವರ ನೇತೃತ್ವದಲ್ಲಿ ೨೦೦೬ರ ಫೆಬ್ರುವರಿ ೮ರಂದು ಮಹಾಮಸ್ತಕಾಭಿಷೇಕ ನಡೆದಿದೆ. ಈ ಮಹೋತ್ಸವದ ಸವಿನೆನಪಿಗಾಗಿ ಶ್ರೀಕ್ಷೇತ್ರದ ಅಭಿವೃದ್ಧಿ, ಉತ್ತಮ ಶಿಕ್ಷಣ ಸೌಲಭ್ಯ, ಸಮಾಜ ಕಲ್ಯಾಣ, ಗ್ರಾಮನೈರ್ಮಲ್ಯ, ಬಸದಿಗಳ

ಜೀರ್ಣೋದ್ಧಾರ, ಕೃತಿ–ಕಾವ್ಯಗಳ ಪ್ರಕಟನೆ, ಉಚಿತ ಆರೋಗ್ಯ ಚಿಕಿತ್ಸೆ, ಉಚಿತ ಫಲ–ಪುಷ್ಪ ಸಸಿಗಳ ವಿತರಣೆ, ಉಚಿತ ಕೃತಕ ಕಾಲು ಜೋಡಣಾ ಶಿಬಿರ, ಉಚಿತ ಕರಕುಶಲ ವಸ್ತುಗಳ ತರಬೇತಿ ಶಿಬಿರ, ಬಾಹುಬಲಿ ಮಕ್ಕಳ ಆಸ್ಪತ್ರೆ, ಬೆಳಗಾವಿ ಮತ್ತು ಬಾಗಲಕೋಟೆ ಜಿಲ್ಲೆಗಳ ನೆರೆಹಾವಳಿ ಗ್ರಾಮಗಳಿಗೆ ವೈದ್ಯಕೀಯ ನೆರವು ಮೊದಲಾದ ಯೋಜನೆಗಳನ್ನು ಕೈಗೊಳ್ಳಲಾಗಿತ್ತು. ಹಾಗೆಯೇ ಅಂದು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಶ್ರವಣಬೆಳಗೊಳವನ್ನು ಸಂಪರ್ಕಿಸುವ ವಿವಿಧ ರಸ್ತೆಗಳ ಅಭಿವೃದ್ಧಿ, ಹೇಮಾವತಿ ನದಿಯಿಂದ ಶಾಶ್ವತ ಕುಡಿಯುವ ನೀರಿನ ಸರಬರಾಜು, ಅತಿ ಗಣ್ಯರ ಅತಿಥಿ ಗೃಹದಲ್ಲಿ ಹೆಚ್ಚುವರಿ ಕೊಠಡಿಗಳ ನಿರ್ಮಾಣ, ಹಾಸನ–ಬೆಂಗಳೂರು ರೈಲು ಮಾರ್ಗ ನಿರ್ಮಾಣ ಮೊದಲಾದ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿವೆ. ಆಕಾಶವಾಣಿ ಮಹಾಮಸ್ತಕಾಭಿಷೇಕದ ವೀಕ್ಷಕ ವಿವರಣೆಯನ್ನು ಕನ್ನಡ, ಹಿಂದಿ, ಸಂಸ್ಕೃತ, ಇಂಗ್ಲೀಷನಲ್ಲಿ ಪ್ರಸಾರ ಮಾಡಿತು.

ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕ ಮಹಾಸ್ವಾಮೀಜಿ ಅವರು ೨೦೧೫ರ ಮೇ ೨೫ರಂದು ಶ್ರವಣಬೆಳಗೊಳ ದಿಗಂಬರ ಜೈನಮಠ ಸಂಸ್ಥೆಗಳ ಆಡಳಿತ ಮಂಡಳಿ ಟ್ರಸ್ಟಿನ ಸಭೆಯಲ್ಲಿ ೨೦೧೮ರ ಫೆಬ್ರುವರಿ ೭ರಿಂದ ೨೮ರವರೆಗೆ ಮಹಾಮಸ್ತಕಾಭಿಷೇಕವನ್ನು ನೆರವೇರಿಸಲು ನಿರ್ಧರಿಸಿದ್ದಾರೆ. "ಪಾದಯಾತ್ರೆಯ ಮೂಲಕ ಆಗಮಿಸಬೇಕಿರುವ ತ್ಯಾಗಿವೃಂದಕ್ಕೂ, ದೇಶ–ವಿದೇಶಗಳಿಂದ ಬರುವ ಅಪಾರ ಜನಸಮುದಾಯಕ್ಕೂ ಸಮಯ ಹೊಂದಾಣಿಕೆ ಮಾಡಿಕೊಳ್ಳಲು ಸಾಧ್ಯವಾಗಲೆಂಬ ಕಾರಣಕ್ಕಾಗಿ ಈಗಲೇ ಮಹಾ ಮಸ್ತಕಾಭಿಷೇಕ ದಿನಾಂಕವನ್ನು ಘೋಷಿಸಲಾಗುತ್ತಿದೆ" ಎಂದು ಹೇಳಿರುವ ಸ್ವಾಮೀಜಿ ಅವರು "ಮಹೋತ್ಸವಕ್ಕೆ ರಾಷ್ಟ್ರಪತಿ, ಉಪರಾಷ್ಟ್ರಪತಿ, ಪ್ರಧಾನಮಂತ್ರಿ, ಮುಖ್ಯಮಂತ್ರಿಗಳು ಸೇರಿದಂತೆ ಅನೇಕ ಗಣ್ಯರನ್ನು ಆಹ್ವಾನಿಸಲಾಗುವುದು" ಎಂದಿದ್ದಾರೆ. ಮಹಾಮಸ್ತಕಾಭಿಷೇಕ ಮಹೋತ್ಸವದ ರಾಷ್ಟ್ರೀಯ ಸಮಿತಿಯ ಅಧ್ಯಕ್ಷರಾಗಿ ಸರಿತಾ ಜೈನ, ಕಾರ್ಯಾಧ್ಯಕ್ಷರಾಗಿ ಎಸ್. ಜಿತೇಂದ್ರಕುಮಾರ, ಧನಂಜಯಕುಮಾರ, ಡಿ. ಸುರೇಂದ್ರಕುಮಾರ, ಅಭಯಚಂದ್ರ ಜೈನ, ಡಿ. ಸುಧಾಕರ, ಇಲ್ಕಲ್ ವಿಜಯಕುಮಾರ, ಸರಯೂ ದೋಶಿ, ಪ್ರಧಾನ ಕಾರ್ಯದರ್ಶಿಗಳಾಗಿ ಸತೀಶ ಜೈನ, ಕಾರ್ಯದರ್ಶಿಗಳಾಗಿ ಜೈಕುಮಾರ ಜೈನ, ವಿನೋದ ದೊಡ್ಡಣ್ಣವರ, ಮಹಾವೀರ ಗಂಗಾವಾಲ, ಸುರೇಶ ಪಾಟೀಲ, ಪ್ರಮೋದ ಜೈನ ಅವರನ್ನು ಆಯ್ಕೆ ಮಾಡಲಾಗಿದೆ. ಇದರ ಜೊತೆಗೆ ವಿವಿಧ ಸಮಿತಿಗಳು ಮತ್ತು ಉಪಸಮಿತಿಗಳು ಕಾರ್ಯನಿರ್ವಹಿಸುತ್ತಿವೆ.

ಕರ್ನಾಟಕ ಸರ್ಕಾರವು ಮಹಾಮಸ್ತಕಾಭಿಷೇಕ ಸುವ್ಯವಸ್ಥೆಗೆ ೧೭೫ ಕೋಟಿ ರೂಪಾಯಿಗಳನ್ನು ಅನುದಾನ ಮಂಜೂರು ಮಾಡಿದೆ. ಎ. ಮಂಜು ಅವರ ಅಧ್ಯಕ್ಷತೆಯಲ್ಲಿ ೩೨ ಜೈನ ಸಮಾಜ ಬಾಂಧವರು, ೪೬ ಸರ್ಕಾರಿ ಅಧಿಕಾರಿಗಳು, ೫ ಶಾಸಕರನ್ನೊಳಗೊಂಡಂತೆ ೮೩ ಜನ ಸದಸ್ಯರನ್ನೊಳಗೊಂಡ ಶ್ರವಣಬೆಳಗೊಳ ಮಹಾಮಸ್ತಕಾಭಿಷೇಕ ಮಹೋತ್ಸವ ಸಮಿತಿಯನ್ನು ರಚಿಸಿದೆ. ಮಹಾಮಸ್ತಕಾಭಿಷೇಕವು ೨೦೧೮ರ ಫೆಬ್ರುವರಿ ೭ರಂದು ಉದ್ಘಾಟನೆಯಾಗಲಿದೆ. ಫೆಬ್ರುವರಿ ೮ರಿಂದ ೧೬ರವರೆಗೆ ಪಂಚಕಲ್ಯಾಣ ಮಹೋತ್ಸವ ಜರುಗಲಿದೆ. ಫೆಬ್ರುವರಿ ೧೭ರಂದು ೧೦೮ ಕಲಶಗಳಿಂದ ಪ್ರಥಮ

ಅಭಿಷೇಕ ನಡೆಯಲಿದೆ. ಫೆಬ್ರುವರಿ ೧೮ರಿಂದ ೨೫ರವರೆಗೆ ೧೦೦೮ ಕಲಶಗಳಿಂದ ಮಹಾಮಸ್ತಕಾಭಿಷೇಕ ಜರುಗಲಿದೆ. ಈ ಮಹಾಮಸ್ತಕಾಭಿಷೇಕದ ಪ್ರಯುಕ್ತ ಹಲವು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಚಟುವಟಿಕೆಗಳು ಚಾಲನೆ ಪಡೆದಿವೆ. ಈ ಎಲ್ಲ ಚಟುವಟಿಕೆಗಳನ್ನು ಪಾರಸ್, ಜಿನವಾಣಿ ಟಿ.ವಿ. ಚಾನೆಲ್‌ಗಳು ಪ್ರಸಾರ ಮಾಡುತ್ತಿವೆ. ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ಬೆಂಗಳೂರು ವೃತ್ತದ ಮೂಲಕ ವಿಂಧ್ಯಗಿರಿ ಮತ್ತು ಚಂದ್ರಗಿರಿ ಬೆಟ್ಟಗಳ ಮೇಲ್ಭಾಗವನ್ನು ತಲುಪಲು ಮತ್ತೊಂದು ಮೆಟ್ಟಿಲುಗಳ ಸಾಲುಗಳನ್ನು ನಿರ್ಮಿಸಲಾಗುತ್ತಿದೆ. ಶ್ರೀಮಠದ ವತಿಯಿಂದ ೨೦೦ ಹಾಸಿಗೆಗಳ ೫೦ ಕೋಟಿ ರೂಪಾಯಿಗಳ ವೆಚ್ಚದ ಸಾರ್ವಜನಿಕ ಆಸ್ಪತ್ರೆಯನ್ನು ನಿರ್ಮಾಣ ಮಾಡಲಾಗುತ್ತಿದೆ. ವಿಂದ್ಯಗಿರಿ–ಚಂದ್ರಗಿರಿ ಬೆಟ್ಟಗಳ ಮಧ್ಯದಲ್ಲಿರುವ ಕಲ್ಯಾಣಿಯನ್ನು ಜೀರ್ಣೋದ್ಧಾರ ಮಾಡಲಾಗುತ್ತಿದೆ. ಮಹಾಮಸ್ತಕಾಭಿಷೇಕದ ಶುಭ ಸಂದರ್ಭದಲ್ಲಿ ದಂತ ತಪಾಸಣಾ ಶಿಬಿರ, ಕೃತಕ ದಂತ ಜೋಡಣೆ ಶಿಬಿರ, ವಯೋವೃದ್ಧರ ಸೇವಾ ಶಿಬಿರ, ರಕ್ತದಾನ ಶಿಬಿರ, ಕೃತಕ ಕಾಲು ಜೋಡಣೆ ಶಿಬಿರ, ಆರೋಗ್ಯ ಶಿಬಿರ ಮೊದಲಾದವುಗಳನ್ನು ಏರ್ಪಡಿಸಲಾಗುತ್ತಿದೆ. ಕ್ಷೇತ್ರದ ಪರಿಸರವನ್ನು ಸ್ವಚ್ಛವಾಗಿಡಲು ಶ್ರೀಮಠದ ಆಡಳಿತ ಮಂಡಳಿಯು ಗ್ರಾಮ ಪಂಚಾಯಿತಿಗೆ ೧೦ ಲಕ್ಷ ರೂಪಾಯಿಗಳ ಮೌಲ್ಯದ ೩ ಆಪೆ ಆಟೋಗಳನ್ನು ಕೊಡಲಾಗಿದೆ.

ಮಹಾಮಸ್ತಕಾಭಿಷೇಕ ಮಹೋತ್ಸವ ನಿಮಿತ್ತ ಹಮ್ಮಿಕೊಳ್ಳಲಾಗಿರುವ ಜನಕಲ್ಯಾಣ ಯೋಜನೆಗಳು, ಪಂಚಕಲ್ಯಾಣ ಪ್ರತಿಷ್ಠಾ ಮಹೋತ್ಸವ, ಮಹಾಮಸ್ತಕಾಭಿಷೇಕದ ಪ್ರಚಾರಕ್ಕಾಗಿ ಮತ್ತು ಬಾಹುಬಲಿಯ ಸಂದೇಶದ ಪ್ರಭಾವನೆಗಾಗಿ ಚಾರಿತ್ರಚಕ್ರವರ್ತಿ ಆಚಾರ್ಯಶ್ರೀ ಶಾಂತಿಸಾಗರ ಮಹಾರಾಜರ ಪಟ್ಟ ಪರಂಪರೆಯ ಪಂಚಮ ಪಟ್ಟಾಧೀಶರಾದ ಆಚಾರ್ಯಶ್ರೀ ವರ್ಧಮಾನಸಾಗರ ಮಹಾರಾಜರು ಮತ್ತು ವಿವಿಧ ಸಂಘಸ್ಥ ಮುನಿಗಳ ಪಾವನ ಸಾನ್ನಿಧ್ಯ ಹಾಗೂ ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕ ಮಹಾಸ್ವಾಮೀಜಿ ಅವರ ನೇತೃತ್ವ, ಮಾರ್ಗದರ್ಶನದಲ್ಲಿ ನಾಡಿನಾದ್ಯಂತ ವಿಹಾರ ಮಾಡಲಿರುವ ಬಾಹುಬಲಿ ರಥದ ವಿಹಾರವನ್ನು ೨೦೧೭ರ ಜೂನ್ ೧೭ರಂದು ಉದ್ಘಾಟಿಸಲಾಗಿದೆ. ಈ ರಥಯಾತ್ರೆ ಬೀದರ ಜಿಲ್ಲೆಯಿಂದ ಪ್ರಾರಂಭವಾಗಿ ಈಗಾಗಲೇ ಹಲವು ಜಿಲ್ಲೆಗಳಲ್ಲಿ ವಿಹಾರವನ್ನು ಪೂರ್ಣಗೊಳಿಸಿದೆ. ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕ ಮಹಾಸ್ವಾಮೀಜಿ ಅವರ ನೇತೃತ್ವದಲ್ಲಿ ಪ್ರಾದೇಶಿಕ, ರಾಷ್ಟ್ರೀಯ, ಅಂತರಾಷ್ಟ್ರೀಯ ಸಮ್ಮೇಳನಗಳನ್ನು ಆಯೋಜನೆ ಮಾಡಲಾಗುತ್ತಿದೆ. ಈಗಾಗಲೇ ಅಖಿಲ ಭಾರತೀಯ ಸಂಸ್ಕೃತ ವಿದ್ವತ್ ಸಮ್ಮೇಳನ (೨೦೧೭ರ ಜೂನ್ ೭–೯), ರಾಷ್ಟ್ರಮಟ್ಟದ ಜೈನ ಮಹಿಳಾ ಸಮ್ಮೇಳನ (೨೦೧೭ರ ಅಗಸ್ಟ್ ೧೧–೧೩), ಯುನೈಟೆಡ್ ಜೈನ ಲಾಯರ್ಸ್ ಅಸೋಸಿಯೇಷನ್ ಮತ್ತು ಕರ್ನಾಟಕ ಜೈನ ಅಡ್ವಕೇಟ್ಸ್ ಸಮಾವೇಶ ಯಶಸ್ವಿಯಾಗಿ ಜರುಗಿವೆ. ೨೦೧೭ರ ಡಿಸೆಂಬರ್ ತಿಂಗಳೊಳಗಾಗಿ ರಾಷ್ಟ್ರೀಯ ಜೈನ ಯುವ ಸಮ್ಮೇಳನ (೨೦೧೭ರ ಅಕ್ಟೋಬರ್ ೨೮–೨೯), ರಾಷ್ಟ್ರೀಯ ವಿದ್ವತ್ ಸಮ್ಮೇಳನ, ಅಖಿಲ

ಭಾರತ ಕನ್ನಡ ಜೈನ ಯುವ ಸಾಹಿತ್ಯ ಸಮ್ಮೇಳನ, ಅಂತರಾಷ್ಟ್ರೀಯ ಪ್ರಾಕೃತ ಸಮ್ಮೇಳನ, ರಾಷ್ಟ್ರೀಯ ಕನ್ನಡ ಜೈನ ಸಾಹಿತ್ಯ ಸಮ್ಮೇಳನವನ್ನು ನಡೆಸಲು ಸಿದ್ಧತೆಗಳು ನಡೆದಿವೆ.

### ೫. ಬಾಹುಬಲಿ ಶಿಲ್ಪದ ಪರಿಸರದಲ್ಲಿ ಧಾರ್ಮಿಕ ಚಟುವಟಿಕೆಗಳು

ಆಳರಸರಾದಿ ಅಧಿಕಾರಿಗಳು, ವರ್ತಕರು, ಶ್ರಾವಕರು ಕ್ರಿ.ಶ. ಸುಮಾರು ೧೧ನೆಯ ಶತಮಾನದಿಂದೀಚೆಗೆ ಬಾಹುಬಲಿ ಶಿಲ್ಪದ ರಕ್ಷಣೆಯನ್ನು ಮಾಡುತ್ತ ಬಂದಿದ್ದಾರೆ. ಹಾಗೆಯೇ ಕೆಲವರು ಈ ಪರಿಸರದಲ್ಲಿ ಬಸದಿಗಳ ನಿರ್ಮಾಣ, ಶಿಲ್ಪಗಳ ಪ್ರತಿಷ್ಠಾಪನೆ ಇತ್ಯಾದಿ ಧಾರ್ಮಿಕ ಚಟುವಟಿಕೆಗಳನ್ನು ಕೈಗೊಂಡಿದ್ದಾರೆ.[೪೧] ಹೊಯ್ಸಳರ ವಿಷ್ಣುವರ್ಧನನ ದಂಡನಾಯಕ ಗಂಗರಾಜನು ಕ್ರಿ.ಶ. ೧೧೧೮ರಲ್ಲಿ-

ಗಂಗವಾಡಿಯ ಬಸದಿಗಳೆನಿತೊಳವನಿತಂ
ತಾನೆಯ್ದೆ ಪೊಸಯಿಸಿದಂ
ಗಂಗವಾಡಿಯ ಗೊಮ್ಮಟದೇವರ್ಗ್ಗೆ
ಸುತ್ತಾಲಯಮನೆಯ್ದೆ ಮಾಡಿಸಿದಂ ॥

ಗಂಗವಾಡಿಯಲ್ಲಿ ಎಷ್ಟು ಬಸದಿಗಳಿವೆಯೋ ಅಷ್ಟನ್ನೂ ಜೀರ್ಣೋದ್ಧಾರ[೪೨] ಮಾಡಿದ್ದಲ್ಲದೆ, ಗಂಗವಾಡಿಯ ಗೊಮ್ಮಟದೇವರಿಗೆ ಸುತ್ತಾಲಯವನ್ನು ಮಾಡಿಸಿದ್ದಾನೆ. ಈತನು ಸುತ್ತಾಲಯವನ್ನು ಮಾಡಿಸಿದ ಮತ್ತು ಗೊಮ್ಮಟದೇವರಿಗೆ ದಾನವನ್ನು ಕೊಡಮಾಡಿದ ಸಂಗತಿಯನ್ನು ಕೆಲವು ಶಾಸನಗಳು ದಾಖಲಿಸಿವೆ.[೪೩] ಹೊಯ್ಸಳರ ವಿಷ್ಣುವರ್ಧನನ ದಂಡನಾಯಕ ಭರತಮಯ್ಯನು ಕ್ರಿ.ಶ. ೧೧೬೦ರಲ್ಲಿ ಗೊಮ್ಮಟದೇವರ ಅಂಗಳದ ಸುತ್ತಲೂ ಕಟಕಟೆಯನ್ನು ಕಟ್ಟಿಸಿದ್ದಾನೆ.[೪೪] ಕ್ರಿ.ಶ. ಸುಮಾರು ೧೨ನೆಯ ಶತಮಾನದಲ್ಲಿ ನಯಕೀರ್ತಿಸಿದ್ಧಾಂತ ಚಕ್ರವರ್ತಿಗಳ ಗುಡ್ಡ (ಶಿಷ್ಯ) ಬಸವಿಸೆಟ್ಟಿ ಸುತ್ತಾಲಯದ ಭಿತ್ತಿಯನ್ನು ಮತ್ತು ಈ ಸುತ್ತಾಲಯದಲ್ಲಿ ಚೌವ್ವೀಸ (ಇಪ್ಪತ್ನಾಲ್ಕು) ತೀರ್ಥಂಕರರ ಶಿಲ್ಪಗಳನ್ನು ಮಾಡಿಸಿದ್ದಾನೆ. ಈತನ ಮಕ್ಕಳಾದ ನಂಬಿದೇವಸೆಟ್ಟಿ, ಬೋಕಿಸೆಟ್ಟಿ, ಜಿನ್ನಿಸೆಟ್ಟಿ, ಬಾಹುಬಲಿಸೆಟ್ಟಿ ಕೂಡಿಕೊಂಡು ತಮ್ಮ ತಂದೆ ಮಾಡಿಸಿದ ಚೌವ್ವೀಸ ತೀರ್ಥಂಕರರ ಶಿಲ್ಪಗಳ ಮುಂಭಾಗದಲ್ಲಿ ಜಾಲಂಧ್ರಗಳನ್ನು ಮಾಡಿಸಿದ್ದಾರೆ.[೪೫] ಧರ್ಮೋದ್ಧಾರಕ್ಕಾಗಿ ಬೆಳುಗುಳ ನಗರದಲ್ಲಿ ನೆಲೆಸಿದ ಪಂಡಿತಾಚಾರ್ಯರು ಕ್ರಿ.ಶ. ೧೩೯೮ರಲ್ಲಿ ಗೊಮ್ಮಟದೇವರ ಸುತ್ತಲೂ ಸುತ್ತಾಲಯವನ್ನು ಮಾಡಿಸಿ, ಗೊಮ್ಮಟನಿಗೆ ಏಳು ಬಾರಿ ಮಸ್ತಕಾಭಿಷೇಕ ಮಾಡಿಸಿದ್ದಾರೆ.[೪೬] ಕ್ರಿ.ಶ. ೧೫೦೯ರಲ್ಲಿ ಮಹಾಮಂಡಳೇಶ್ವರ ಕೊಲೋತ್ತುಂಗ ಚಂಗಾಳ್ವ ಮಹೀಪಾಲನ ಪ್ರಧಾನ ಶಿರೋಮಣಿಯಾದ ಕೇಶವನಾಥನ ಮಗ ಬೊಮ್ಮಣ್ಣ ಮಂತ್ರಿಯ ಸಹೋದರ ಚೆನ್ನಬೊಮ್ಮರಸ ಮತ್ತು ನಂಜರಾಯ ಪಟ್ಟಣದ ಶ್ರಾವಕರು ಕೂಡಿಕೊಂಡು ಗೊಮ್ಮಟಸ್ವಾಮಿಯ ಬಳ್ಳಿವಾಡವನ್ನು ಜೀರ್ಣೋದ್ಧಾರ ಮಾಡಿಸಿದ್ದಾರೆ.[೪೭] ಕ್ರಿ.ಶ. ಸುಮಾರು ೧೬ನೆಯ ಶತಮಾನದಲ್ಲಿ ಬೇಗೂರಿನ ನರಸಪ್ಪಸೆಟ್ಟಿಯ ಮಗನಾದ ಬೈಯಣ್ಣನು[೪೮] ಗೊಮ್ಮಟಸ್ವಾಮಿಯ ದರ್ಶನ ಮಾಡಿ, ಕಟ್ಟೆ ಮತ್ತು ಅರವಟ್ಟಿಗೆಯನ್ನು ಕಟ್ಟಿಸಿದ್ದಾನೆ.

## ೬. ಬಾಹುಬಲಿಯ ಪೂಜೆ-ಪುನಸ್ಕಾರಗಳಿಗೆ ದಾನ-ದತ್ತಿಗಳು

ಆಳರಸರಾದಿ ಅಧಿಕಾರಿಗಳು, ವರ್ತಕರು, ಶ್ರಾವಕರು, ಜೈನಾಭಿಮಾನಿಗಳು ಬಾಹುಬಲಿಯ ಪೂಜೆ-ಪುನಸ್ಕಾರಕ್ಕೆ ಉದಾರವಾಗಿ ದಾನ-ದತ್ತಿಗಳನ್ನು ಕೊಡಮಾಡಿದ್ದಾರೆ. ಶ್ರವಣಬೆಳಗೊಳದ ಮಾಣಿಕ್ಯ ವ್ಯಾಪಾರಿಗಳೆಲ್ಲರೂ ಕೂಡಿಕೊಂಡು ಗೊಮ್ಮಟದೇವರ ಹೂವಿನ ಪಡಿಗೆಗಾಗಿ ಹವಳದ ವ್ಯಾಪಾರದಲ್ಲಿ ಒಂದಂಶವನ್ನು ಪ್ರತಿವರ್ಷವೂ ಸಲ್ಲಿಸಿದ್ದಾರೆ.[೨೯] ಇದೇ ರೀತಿ ಹಲವು ವ್ಯಾಪಾರಿಗಳು ಮತ್ತು ಶ್ರಾವಕರು ಗೊಮ್ಮಟದೇವರ ಪೂಜೆ-ಪುನಸ್ಕಾರಗಳಿಗೆ ದಾನ-ದತ್ತಿಗಳನ್ನು ಕೊಡಮಾಡಿದ್ದಾರೆ.[೩೦] ಹೊಯ್ಸಳರ ನರಸಿಂಹ ದೇವನ ದಂಡನಾಯಕ ಹುಳ್ಳಮಯ್ಯನು ಕ್ರಿ.ಶ. ಸುಮಾರು ೧೨ನೆಯ ಶತಮಾನದಲ್ಲಿ ಗೊಮ್ಮಟದೇವರ ಅಷ್ಟವಿಧಾರ್ಚನೆಗೆ ಸವಣೇರು ಗ್ರಾಮವನ್ನು ದತ್ತಿ ಕೊಟ್ಟಿದ್ದಾನೆ.[೩೧] ಕ್ರಿ.ಶ. ಸುಮಾರು ೧೨ನೆಯ ಶತಮಾನದಲ್ಲಿ ಮಹಾಪಸಾಯಿತ ವಿಜಯಣ್ಣನ ಅಳಿಯನಾದ ಚಿಕ್ಕಮದುಕಣ್ಣನು ಗೊಮ್ಮಟದೇವರ ನಿತ್ಯಾರ್ಚನೆಗೆ ಇಪ್ಪತ್ತೆರಡು ಬಾಸಿಗ ಹೂವುಗಳನ್ನು ದಾನ ಮಾಡಿದ್ದಾನೆ. ಹಾಗೆಯೇ ಮಹಾಮಂಡಳಾಚಾರ್ಯ ಚಂದ್ರಪ್ರಭದೇವರಿಂದ ಗಂಗಸಮುದ್ರದಲ್ಲಿ ಗದ್ದೆ ಮತ್ತು ಭೂಮಿಯನ್ನು ಖರೀದಿಸಿ ದತ್ತಿ ಕೊಟ್ಟಿದ್ದಾನೆ.[೩೨] ಕ್ರಿ.ಶ. ೧೧೯೮ರಲ್ಲಿ ಕಬಿಸೆಟ್ಟಿಯ ಸೋಮಯ್ಯನು ಗೊಮ್ಮಟದೇವರ ಅರ್ಚನೆಗೆ ಹೂವಿನ ಪಡಿಗೆಗಾಗಿ ಮಹಾಮಂಡಳಾಚಾರ್ಯ ಹಿರಿಯ ನಯಕೀರ್ತಿದೇವರ ಶಿಷ್ಯ ಚಂದ್ರಪ್ರಭ ದೇವರಿಂದ ಗದ್ದೆ ಮತ್ತು ಭೂಮಿಯನ್ನು ಖರೀದಿಸಿ ದಾನ ಮಾಡಿದ್ದಾನೆ.[೩೩] ಕ್ರಿ.ಶ. ೧೨೮೮ರಲ್ಲಿ ಬಿಟಿಯನಹಳ್ಳಿಯ ಮೆಣಸಿನ ಸೋಯಿಸೆಟ್ಟಿಯ ಮಗನಾದ ಮಾದಿಶೆಟ್ಟಿ ಗೊಮ್ಮಟದೇವನ ನಿತ್ಯಾಭಿಷೇಕಕ್ಕೆ ಒಂದು ಗದ್ಯಾಣ, ಎರಡು ಪಣ ಮತ್ತು ಒಂದು ಮಣ ಹಾಲನ್ನು ದಾನ ಮಾಡಿದ್ದಾನೆ.[೩೪] ವಿಜಯನಗರದ ಬುಕ್ಕರಾಯನ ದಂಡನಾಯಕ ಇರುಗುಪ್ಪನು ಗೊಮ್ಮಟದೇವನ ಪೂಜೆಗಾಗಿ ಬೆಳಗುಳ ಗ್ರಾಮವನ್ನು ದತ್ತಿ ಕೊಟ್ಟಿದ್ದಾನೆ.[೩೫] ಕ್ರಿ.ಶ. ೧೭೨೩ರಲ್ಲಿ ಮೈಸೂರಿನ ದೊಡ್ಡ ಕೃಷ್ಣರಾಜ ಒಡೆಯರು ಸೂರ್ಯ-ಚಂದ್ರರನ್ನು ನಾಚಿಸುವಂಥ ಗೊಮ್ಮಟದೇವ ಜಿನೇಂದ್ರನ ಮುಖವನ್ನು ನೋಡುತ್ತ ರೋಮಾಂಚನ ಗೊಂಡು ಆನಂದದಿಂದ ತುಂಬಿ ತುಳುಕುತ್ತ, ಗೊಮ್ಮಟಸ್ವಾಮಿಯ ಪೂಜೋತ್ಸವಗಳಿಗಾಗಿ ಅರಹನಹಳ್ಳಿ, ಹೊಸಹಳ್ಳಿ, ಜಿನನಾಥಪುರ, ಬಸ್ತಿಗ್ರಾಮ, ರಾಚನಹಳ್ಳಿ, ಉತ್ತನಹಳ್ಳಿ, ಜಿನ್ನನಹಳ್ಳಿ, ಕೊಪ್ಪಲು, ಕಸಬ ಬೆಳಗುಳ ಗ್ರಾಮಗಳನ್ನು ದತ್ತಿಯಾಗಿ ಕೊಟ್ಟಿದ್ದಾರೆ.[೩೬] ಹುಬ್ಬಳ್ಳಿಯ ಮಾತಪ್ಪ ಅವರು ಕ್ರಿ.ಶ. ಸುಮಾರು ೧೯ನೆಯ ಶತಮಾನದಲ್ಲಿ ತಮ್ಮ ತಂದೆ ಧರಣಪ್ಪ ಸೂಜಿ ಅವರ ಸ್ಮರಣಾರ್ಥ ಘಂಟೆಯನ್ನು ಮಾಡಿಸಿ ಕೊಟ್ಟಿದ್ದಾರೆ.[೩೭] ಈ ಘಂಟೆ ಈಗ ಬಾಹುಬಲಿಯ ಎದುರಿಗೆ ಬಾಗಿಲೊಳಗೆ ಎಡಗಡೆಯಲ್ಲಿದೆ.

ಆಳರಸರಾದಿ ಅಧಿಕಾರಿಗಳು ಗೊಮ್ಮಟೇಶ್ವರನ ಪೂಜೆ-ಪುನಸ್ಕಾರಗಳಿಗೆ ಕೊಡಮಾಡಿದ ದಾನ-ದತ್ತಿಗಳನ್ನು ಸ್ಥಾನಿಕರು (ಭಟ್ಟಾರಕರು) ಕಾಲಕ್ರಮೇಣ ಕಷ್ಟಕ್ಕೀಡಾಗಿ ಸ್ಥಳಿಯ ವ್ಯಾಪಾರಿಗಳು ಮತ್ತು ಶ್ರಾವಕರಿಗೆ ಅಡವಾಗಿಟ್ಟರು. ಆಗ ಮೈಸೂರಿನ ಚಾಮರಾಜ ಒಡೆಯರು ವಿಚಾರಣೆಯನ್ನಿಟ್ಟುಕೊಂಡು "ನೀವು ಸ್ಥಾನಿಕರಿಗೆ ಕೊಟ್ಟಂಥ ಸಾಲವನ್ನು ನಾವು ತೀರಿಸುವೆವು" ಎಂದು ತಿಳಿಸಿದರು. ಆಗ ವ್ಯಾಪಾರಿಗಳು "ನಮ್ಮ ತಂದೆ-

ತಾಯಿಗಳಿಗೆ ಶ್ರೇಯಸ್ಸಾಗಲಿ ಎಂದು ಧಾರಾಪೂರ್ವಕವಾಗಿ ಈ ಸೊಬಗನ್ನು ಸ್ಥಾನಿಕರಿಗೆ ದಾನ ಮಾಡುವೆವು" ಎಂದು ವಿಜ್ಞಾಪನೆ ಮಾಡಿಕೊಂಡರು. ದೊರೆಗಳು, ದೇವರು ಹಾಗೂ ಗುರುಗಳ ಸಮ್ಮುಖದಲ್ಲಿ ಧಾರಾಪೂರ್ವಕ ದಾನಮಾಡಿ "ಸ್ಥಾನಿಕರು ಸೂರ್ಯ–ಚಂದ್ರರಿರುವ ತನಕ ದೇವರ ಪೂಜೆ ಮಾಡಿಕೊಂಡು ಸುಖವಾಗಿರಲಿ" ಎಂದು ಕ್ರಿ.ಶ. ೧೬೩೪ರಲ್ಲಿ ಧರ್ಮಶಾಸನ ಹಾಕಿಸಿದರು. "ಇನ್ನು ಮುಂದೆ ಇದನ್ನು ಅಡವು ಇಡುವಂಥ ಸ್ಥಾನಿಕರು ಸ್ಥಾನಭ್ರಷ್ಟರಾಗುವರು. ಇದನ್ನು ಅಡವು ಹಾಕಿಸಿಕೊಳ್ಳುವವರಿಗೂ ಆಸ್ತಿಯ ಮೇಲೆ ಹಕ್ಕಿರುವುದಿಲ್ಲ. ಈ ನಾಡನ್ನು ಆಳುವಂಥ ದೊರೆಗಳು ಈ ಕ್ಷೇತ್ರದ ಆಸ್ತಿ ಪರ[೮] ಭಾರೆ ಮಾಡಲು ಅವಕಾಶ ಕೊಡಬಾರದು" ಎಂಬ ನಿಯಮವನ್ನು ಹಾಕಲಾಯಿತು.

## ೭. ಬಾಹುಬಲಿಯ ದರ್ಶನಕ್ಕೆ ಆಗಮಿಸಿದ ಆಳರಸರಾದಿ ಶ್ರಾವಕರು

ಶ್ರವಣಬೆಳಗೊಳಕ್ಕೆ ನಾನಾ ಭಾಗಗಳಿಂದ ಆಳರಸರಾದಿ ರಾಣಿಯರು, ವರ್ತಕರು, ಶ್ರಾವಕರು, ಜೈನಾಭಿಮಾನಿಗಳು ಆಗಮಿಸಿ ಬಾಹುಬಲಿಯ ದರ್ಶನಗೈದು ಪಾವನರಾಗಿದ್ದಾರೆ. ದಾನಚಿಂತಾಮಣಿ ಅತ್ತಿಮಬ್ಬೆ ಗೊಮ್ಮಟೇಶ್ವರನ ದರ್ಶನ ಪಡೆದ ಬಗೆಯನ್ನು ಮಹಾಕವಿ ರನ್ನನು ಲಕ್ಕುಂಡಿಯ ಕ್ರಿ.ಶ. ೧೦೦೭ರ ಶಾಸನದಲ್ಲಿ–

ಉನ್ನತ ಕುಕ್ಕುಟೇಶ್ವರ ಜಿನೇಶ್ವರನಂ ಜಿನಭಕ್ತೆ ಪೋಗಿ ಕಾಣ್ಬನ್ನೆಗ
ಮನ್ನಮಂ ತೊಱೆದು ಪರ್ವತಮಂ ಮುದದೇಱೆ ತಜ್ಜಿನಾ
ಸನ್ನದೊಳತ್ತಿಯಬ್ಬೆಗೆ ಪಥಶ್ರಮಮಾದೊಡಕಾಳವೃಷ್ಟಿಯಾ
ಯ್ತಿನ್ನವು ದೇವಭಕ್ತಿಗದು ಚೋದ್ಯಮೆ ಕೊಳ್ಳವೆ ಪುಟ್ಟಿವೃಷ್ಟಗಳ್ ॥

"ಉನ್ನತ ಕುಕ್ಕುಟೇಶ್ವರನನ್ನು (ಶ್ರವಣಬೆಳಗೊಳದ ಗೊಮ್ಮಟೇಶ್ವರ) ಹೋಗಿ ಕಾಣುವವರೆಗೂ ಅನ್ನ ತೊರೆದಳು. ನಿರಾಹಾರಿಯಾಗಿದ್ದು, ಪರ್ವತವನ್ನು (ಶ್ರವಣ ಬೆಳಗೊಳದ ವಿಂಧ್ಯಗಿರಿ/ದೊಡ್ಡಬೆಟ್ಟ) ಹತ್ತುವಾಗ ಆಕೆಗೆ ಅದುವರೆಗೂ ಹಾದಿಯಲ್ಲಾದ ಬಳಲಿಕೆಯನ್ನು ಹೋಗಲಾಡಿಸಲು ಅಕಾಲ ವೃಷ್ಟಿಯಾಯಿತು" ಎಂದೆಲ್ಲ ವರ್ಣಿಸಿದ್ದಾನೆ.[೯] ಕ್ರಿ.ಶ. ೧೨೭೯ರಲ್ಲಿ ಮಹಾಪಸಾಯತ ತಿರುಮಪ್ಪನ ಅಧಿಕಾರಿ ಸಂಭುದೇವಣ್ಣನ ಮಗನಾದ ಮಲ್ಲಣ್ಣನು ಗೊಮ್ಮಟದೇವನ ದರ್ಶನ ಮಾಡಿದ್ದಾನೆ.[೧೦] ಕ್ರಿ.ಶ. ೧೪೬೭ರಲ್ಲಿ ಕರಿಯ ಕಾಂತಣಸೆಟ್ಟಿಯ ಮಗನಾದ ಕರಿಯ ಬಿರುಮಣಸೆಟ್ಟಿಯ ಸಹೋದರ ಕರಿಯ ಗುಮ್ಮಟ ಸೆಟ್ಟಿ ಸಂಘವನ್ನು ಕೂಡಿಕೊಂಡು ಬಿಡದಿಯಿಂದ ಬೆಳಗೊಳಕ್ಕೆ ಬಂದು ಗೊಮ್ಮಟನಾಥನ ಪಾದದ ಮುಂದೆ ರತ್ನತ್ರಯದ ನೋಂಪಿಯ ಉದ್ಯಾಪನೆಯನ್ನು ಕೈಗೊಂಡು ತನ್ನ ಕೀರ್ತಿಯನ್ನೂ ಪುಣ್ಯವನ್ನೂ ಹೆಚ್ಚಿಸಿಕೊಂಡಿದ್ದಾನೆ.[೧೧] ಕ್ರಿ.ಶ. ೧೪೭೬ರಲ್ಲಿ ಕೊಪಣಪುರದ (ಇಂದಿನ ಕೊಪ್ಪಳ) ಗುಮ್ಮಟಸೆಟ್ಟಿ ಬಾಹುಬಲಿಯ ದರ್ಶನ ಮಾಡಿದ್ದಾನೆ.[೧೨] ಕ್ರಿ.ಶ. ೧೪೯೮ರಲ್ಲಿ ಗೋಮಟ ಬಾಹುಬಲಿ, ಪ್ರಜಾಸವಾಲ ಮತ್ತು ಕಂಡಿಕ ಮನೆತನದ ಬ್ರಹ್ಮಚಾರಿ ಇವರು ತಮ್ಮ ಸಹೋದರರು ಮತ್ತು ಮಕ್ಕಳೊಡನೆ ಯಾತ್ರೆ ಕೈಗೊಂಡು ಬಾಹುಬಲಿಸ್ವಾಮಿಯ ದರ್ಶನ ಪಡೆದಿದ್ದಾರೆ.[೧೩] ಕ್ರಿ.ಶ. ಸುಮಾರು ೧೬ನೆಯ ಶತಮಾನದಲ್ಲಿ ಗೇರುಸೊಪ್ಪೆಯ ಅಪನಾಯಕರ ಮಗನಾದ ಲಿಂಗಣ್ಣನು ಬಾಹುಬಲಿಸ್ವಾಮಿಗೆ ಸಾಷ್ಟಾಂಗ

ನಮಸ್ಕಾರ ಮಾಡಿದ್ದಾನೆ.[೬೪] ಇದೇ ರೀತಿ ಸೋಮನಾಥಪುರ ಮೊದಲಾದೆಡೆಯ ಹಲವರು ಗ್ಹೊಮ್ಮಟದೇವನ ದರ್ಶನ ಮಾಡಿದ ವಿವರಗಳು ಶಾಸನಗಳಲ್ಲಿ ದಾಖಲಾಗಿವೆ. ಕ್ರಿಶ. ೧೭೪೩ರಲ್ಲಿ ಶಾಂ ಹರಖಚಂದ ದಾಸಜೀ, ಶಾಂ ಕಪೂರಚಂದ ಮೋತೀಚಂದ ಶತೀದೀರಾ, ಸಂತೋಷರಾಯಜೀ, ಬಲಕಿಸನಜೀ, ಅಜೀದತಜೀ, ದೀನದಯಾಲನ ಮಗನಾದ ವನವಾರೀಲಾಲ, ಕ್ರಿಶ. ೧೭೪೪ರಲ್ಲಿ ಸಂತೋಷರಾಯ, ಬಾಲಕೀಸನಜಿ, ಕ್ರಿಶ. ೧೭೮೬ರಲ್ಲಿ ಅತದಾಸ ಅಗರವಾಲಾ ಮ್ಹೊದಲಾದ ಅನೇಕ ಮಾರವಾಡಿ ಯಾತ್ರಿಕರು ಬಾಹುಬಲಿಯ ದರ್ಶನ ಮಾಡಿದ್ದಾರೆ.

ಕ್ರಿಶ. ಸುಮಾರು ೧೬ನೆಯ ಶತಮಾನದಲ್ಲಿ ಇಂದಿನ ಗದಗ ತಾಲ್ಲೂಕಿನ ಮುಳಗುಂದ ಪ್ರದೇಶದ ಆಡಳಿತವನ್ನು ಜೈನ ದೇಸಗತಿ ಮನೆತನ ನೋಡಿಕೊಳ್ಳುತ್ತಿತ್ತು. ಆ ಮನೆತನದ ನಾಗಪ್ಪಯ್ಯನ ಧರ್ಮಪತ್ನಿ ಬನದಾಂಬಿಕೆ ಕ್ರಿಶ. ೧೬೮೦ರ ಫೆಬ್ರುವರಿ ೧೫ರಂದು ಶ್ರವಣಬೆಳಗೊಳಕ್ಕೆ ಆಗಮಿಸಿ ಗೊಮ್ಮಟೇಶ್ವರನ ದರ್ಶನ ಪಡೆದಿದ್ದಾಳೆ. ಈ ಸಂಗತಿ ಸ್ಥಳೀಯ ಶಾಸನದಲ್ಲಿ–

> ಶ್ರೀಮತು ಶಾಳಿವಾಹನ ಶಕವರುಷ ೧೬೦೨ ಸಿದ್ಧಾರ್ತ್ಥಿ
> ಸಂವತ್ಸರದ ಮಾಘ ಬಹುಳ ೧೦ಯಲ್ಲು ಮುನಿಗುಂದದ
> ಸೀಮೆಯ ದೇಶಕುಲಕರಣಿಯರ ಮಕಳು ವಾಂಕ
> ಹೊನ್ನಪ್ಪೈಯ್ಯನ ಅನುಜ ವೆಂಕಪ್ಪೈಯ್ಯನ ಪುತ್ರ ಸಿದ್ದಪ್ಪೈನ
> ಅನುಜ ನಾಗಪ್ಪೈಯ್ಯನ ಪುಣ್ಯಸ್ತ್ರೀಯರಾದ ಬನದಾಂಬಿಕೆಯರು
> ಬಂದು ದರುಶನವಾದರು ಭದ್ರಂ ಭೂಯಾತ್ ಶ್ರೀ ।
> ಶ್ರುತಸಾಗರವರ್ನ್ನಿಗಳ ಸಮೇತ ಯಿದೇ ತಿಥಿಯಲ್ಲಿ ಮಾಡಿಗೂರ
> ಜಿಡಗಪ್ಪ ನಾಗಪ್ಪನ ಪುತ್ರ ದಾನಪ್ಪಸೆಟ್ಟರ ಪುಣ್ಯಸ್ತ್ರೀ ನಾಗವ್ವನ
> ಮೈದುನ ಭಿಷ್ಟಪ್ಪನು ದರುಶನವಾದರು ॥

"ಕ್ರಿಶ. ೧೬೮೦ರ ಫೆಬ್ರುವರಿ ೧೫ರಂದು ಮುನಿಗುಂದ ಸೀಮೆಯ (ಇಂದಿನ ಮುಳಗುಂದ) ದೇಶಕುಲಕರ್ಣಿಯರ ಮಗನಾದ ವೆಂಕಹೊನ್ನಪ್ಪಯ್ಯನ ಮಗ ವೆಂಕಪ್ಪಯ್ಯನ ಮಗ ಸಿದ್ದಪ್ಪಯ್ಯನ ಮಗ ನಾಗಪ್ಪಯ್ಯನ ಧರ್ಮಪತ್ನಿ ಬನದಾಂಬಿಕೆ ಬಂದು ದರ್ಶನ ಪಡೆದರು. ಅದೇ ದಿನ ಮಾಡಿಗೂರದ ಜಿಡಗಪ್ಪ ನಾಗಪ್ಪನ ಮಗನಾದ ದಾನಪ್ಪಸೆಟ್ಟಿಯ ಧರ್ಮಪತ್ನಿ ನಾಗವ್ವಳ ಮೈದುನನಾದ ಭಿಷ್ಟಪ್ಪನು ಶ್ರುತ್ತಸಾಗರವರ್ಣಿಯ ಜೊತೆಯಲ್ಲಿ ಬಂದು ದರ್ಶನ ಪಡೆದರು" ಎಂದು ದಾಖಲಾಗಿದೆ. ಮುಳಗುಂದದ ದಕ್ಷಿಣಬದಿಗೆ ಹೊಂದಿಕೊಂಡಂತಿರುವ ಬೆಟ್ಟದ ಮೇಲಿರುವ ಚಂದ್ರಪ್ರಭನಾಥ ಬಸದಿ ಮತ್ತು ಆದಿನಾಥನ ತ್ರಿಕೂಟಾಚಲ ಬಸದಿಯನ್ನು ಕ್ರಿಶ. ಸುಮಾರು ೧೭ನೆಯ ಶತಮಾನದಲ್ಲಿ ಮುಸಲ್ಮಾನರು ನಾಶಪಡಿಸಿದ್ದರು. ಈ ವಿಚಾರವು ಸ್ಥಳೀಯ ಶಾಸನಗಳಲ್ಲಿ ದಾಖಲಾಗಿದೆ. ಚಂದ್ರಪ್ರಭನಾಥ ಬಸದಿಯ ಸ್ತಂಭದ ಮೇಲಿರುವ ಶಾಸನದಲ್ಲಿ–

ಶ್ರೀಮತ್ಪರಮಗಂಭೀರ ಸ್ಯಾದ್ವಾದ(ದಾ)ಮೋಘ ಲಾಂಛನಂ
ಜೀಯಾತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಂ ॥

ಸಿಡಿಲಶ್ರೀ ಜಿನಪಾರ್ಶ್ವನಾಥನ ಮಹಾಚೈತ್ಯಾಲಯಂ
ದುರ್ಮ್ಮಖರ್ಕ್ಕಡು ಮೂರ್ಕ್ಖರ್ತ್ತುರುಕರ್ಸ್ಸುಡಲ್ಕೆ
ತೊಲೆಗಳ್ಕಂಭಂಗಳುಂ ಭಿತ್ತಿಗಳ್ಕೆ[ಳ]ಯಲ್ಕಂಡು ಸುವಜ್ರ
ದಂತ್ಮಬಲುಪಂತುಂ ತಾಳ್ದಿರಲ್ಮಡಿದಂ ಪೊಡವೀಖ್ಯಾತ
ಸಹಸ್ರಕೀರ್ತ್ತಿಯತಿಪಂ ದೇಶೀಗಣಾಗ್ರೇಸರಂ ॥

ಹನಸೋಗಾನ್ವಯಜಾತ ಪುಸ್ತಕಮಹಾಗಚ್ಛೇಶ್ವರಂ
ಸತ್ಕುಸಾವೇನಿವಿದ್ವಜನ ಕಲ್ಪಭೂಜನಭೆಯಂ ದೇಶೀ
ಗಣಾಂಭೋಧಿವರ್ದ್ಧನಚಂದ್ರಂ ಯತಿಶೇಖರಂ
ಲಲಿತಕೀರ್ತ್ತ್ಯಾಚಾರ್ಯ್ಯಸಂನಂದನಂ ವಿನಯಾಂಬೋಧಿ
ಸಹಸಕೀರ್ತ್ತಿಯತಿಪಂ ಮಾರೀಚಪಂಚಾನನಣ ॥

ನಲವಿಂ ಶ್ರೀಜಿನಧರ್ಮ್ಮಮಂ ಭುವನದೊಳ್ಪಶೀತಿಯಂ
ಮಾಡಿ ನಿರ್ಮಳಚಾರಿತ್ರನಿವಾಸನಾಗಿ.....................

"ಸಿಡಿಲಶ್ರೀ ಜಿನಪಾರ್ಶ್ವನಾಥನ ಮಹಾಚೈತ್ಯಾಲಯವನ್ನು ದುರ್ಮೂರ್ಖರೂ, ಕಡುಮೂರ್ಖರೂ ಆದ ತುರುಕರು (ಮುಸಲ್ಮಾನರು) ಸುಟ್ಟಾಗ, ಅದರ ತೊಲೆಗಂಬಗಳು ಮತ್ತು ಗೋಡೆಗಳ ಕೆಳಭಾಗದಲ್ಲಿ ಸಿಕ್ಕು ಸಹಸ್ರಕೀರ್ತಿಮುನಿ ಮರಣವನ್ನಪಿದನು. ದೇಶಿಯಗಣದ ಹನಸೋಗೆಬಳಿಯ ಪುಸ್ತಕಗಚ್ಛ ಪರಂಪರೆಯ ಲಲಿತಕೀರ್ತಿ ಆಚಾರ್ಯನ ಶಿಷ್ಯ ಸಹಸ್ರಕೀರ್ತಿಮುನಿ ಜಿನಧರ್ಮವನ್ನು ಭುವನದಲ್ಲಿ ಪ್ರಭಾವನೆ ಮಾಡಿ ನಿರ್ಮಳಚಾರಿತ್ರನಾಗಿದ್ದನು" ಎಂದು ನಿರೂಪಣೆಯಿದೆ. ಆದಿನಾಥನ ತ್ರಿಕೂಟಾಚಲ ಬಸದಿಯನ್ನು ಬನದಾಂಬಿಕೆ ಜೀರ್ಣೋದ್ಧಾರ ಮಾಡಿಸಿದ್ದಾಳೆ. ಇದು ಈ ಬಸದಿಯ ನವರಂಗದಲ್ಲಿನ ಸ್ತಂಭದ ಮೇಲಿರುವ ಶಾಸನದಲ್ಲಿ–

ಶ್ರೀಮತ್ಪರಮಗಂಭೀರ ಸ್ಯಾದ್ವಾದ(ದಾ)ಮೋಘ ಲಾಂಛನಂ
ಜೀಯಾತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಂ ॥

ಶ್ರೀಮನ್ಮುಕ್ತಿಮುಖಾಬ್ಜವರ್ದ್ಧನರವಿ ।
ದುರ್ಮ್ಮಾರ್ಗಕುಮಿದಾರವಿ ।
ದೋಷಾಪ್ಪದಶಪಂಕಸೋಶಣರವಿ ।
ಪಾಪಾಂಧಕಾರೋರವಿ ॥

ಸದ್ಧರ್ಮ್ಮಾಂಬೆಣೆವಕ್ಕಿ ರಾಜಿಪರವಿ ।
ಸರ್ವ್ವಸ್ಯ ನೇತ್ರಾ ರವಿ ।

ಶತತಂ ಭವ್ಯರ ರಕ್ಷಿಸಲ್ಕೆ ಕೃಪೆಯಿಂ ।
ಶ್ರೀಯಾದಿನಾಥೋ ರವಿ ॥

ದುರುಳಮತಿ ತುರುಕರು ಬಂ
ದರುಹನ ಆಲಯವ ಹೊಕ್ಕು ಕೆಡಿಸಲ್ಮತ್ತಾ ।
ದೊರೆ ನಾಗಭೂಪನರಸಿಯು ।
ನಿರುತದಿ ನೆಗಳಿದಳು ಪಂಚಕಲ್ಯಾಣವನಂ ॥

ಶ್ರೀ ಶಾಲಿವಾಹನ ಸಕೆ ೧೫೫೭ ರಾಕ್ಷಾಸನಾಮ ಸಂವಛ್ಚರದ
ಭಾದ್ರಪದಮಾಷ(ಸ) ಬಹುಳ ಪಂಚಮಿ ಅರ್ಕ್ರವಾರದಲ್ಲು ॥

ಶ್ರೀಮತು ಮುಳುಗುಂದದ............ಕುಲಕರಣಿ ನಾಗಭೂಪನ
ಮನೋವಲ್ಲಭೆ ಬನದಾಂಭಿ(ಬಿ)ಕೆ ಸೀಲಗುಣ ಸಂಪಂನೆ ।
ಶ್ರೀ ಆದಿಪರಮೇಶ್ವರಂಗೆ...ಪ್ರತಿಷ್ಠೆಯಂ ಮಾಡಿಸಿ ಮುಗಿಯಲೊಡಂ ॥
ಕಂ........ಸಾಗರವರ್ನಿಯ ॥ ಶ್ರೀ ಸಮನೆಂದೆನಿಪ ಚೆಲ್ಲ
ಬನದಾಂಬಿಕೆಗಂ । ಶ್ರೀಸುಕವೆಡೆವಸು ನೋಂಪಿಯ
ಶ್ರೀಕರದಿಂದಿತ್ತಡಾಕಿ ನೋಂತ್ತಳ್ ಸುಖದಿಂ ॥

............ಸಾಗರವರ್ನ್ನಿಯು ।
ಧರೆಯಲು ಪುಷ್ಪಾಂಜಲಿಯ ನೋಂಪಿಯ ಮುದದಿಂ ।
ತರುಣಿ ಹರಿಣಸುಲೋಚನೆ ।
ಗುರುಕುಚ ಮರಿದುಂಬಿಗುರುಳ ನೋಂತಳ್ಸುಖದಿಂ
ಲಕ್ಷದೀಪರಥ ಉತ್ಸಹವ ಮಾಡಿಸಿದರು ॥

"ದುರುಳಮತಿಯರಾದ ತುರುಕರು (ಮುಸಲ್ಮಾನರು) ಬಂದು ಈ ಬಸದಿಯನ್ನು ಹೊಕ್ಕು ನಾಶಪಡಿಸಿದ್ದರು. ದೊರೆ (ಕುಲಕರಣಿ) ನಾಗಭೂಪನ ಧರ್ಮಪತ್ನಿ ಬನದಾಂಬಿಕೆ ಕ್ರಿ.ಶ. ೧೬೭೫ರಲ್ಲಿ ಈ ಬಸದಿಯನ್ನು ಜೀರ್ಣೋದ್ಧಾರ ಮಾಡಿಸಿ ಪಂಚಕಲ್ಯಾಣವನ್ನು ಮಾಡಿಸಿದಳು. ಈ ಬಸದಿಯಲ್ಲಿ ಆದಿನಾಥ ತೀರ್ಥಂಕರನ ಶಿಲ್ಪವನ್ನು ಪ್ರತಿಷ್ಠಾಪಿಸಿ, ಪುಷ್ಪಾಂಜಲಿ ನೋಂಪಿಯ ಉದ್ಯಾಪನ್ನೆ ಕೈಗೊಂಡಳು. ಲಕ್ಷದೀಪರಥ ಉತ್ಸವವನ್ನು ಮಾಡಿಸಿದಳು" ಎಂದು ದಾಖಲಾಗಿದೆ. ಈ ಮೂರೂ ಶಾಸನಗಳು ವಿಜಯನಗರದ ಕಾಲಾವಧಿಯಲ್ಲಿ ಮುಳಗುಂದ ಪ್ರದೇಶದ ಆಡಳಿತವನ್ನು ನೋಡಿಕೊಳ್ಳುತ್ತಿದ್ದ ಜೈನ ದೇಸಗತಿ ಮನೆತನದ ವಂಶಾವಳಿ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಅಧ್ಯಯನಕ್ಕೆ ಅಪರೂಪದ ದಾಖಲೆಗಳಾಗಿವೆ. ಆ ಮನೆತನದ ವಂಶಸ್ಥರು ಇಂದಿಗೂ ಮುಳಗುಂದದಲ್ಲಿ ನೆಲೆಸಿದ್ದಾರೆ. ಇವರನ್ನು 'ದೇಶಪಾಂಡೆ' ಎಂದು ಕರೆಯಲಾಗುತ್ತದೆ. ಅಂದಿನ ವಾಡೆ ಕಾಲಾಂತರದಲ್ಲಿ ಜೀರ್ಣೋದ್ಧಾರವಾಗುತ್ತ ಇಂದಿಗೂ ಉಳಿದು ಬಂದಿದೆ. ಇಂದಿನವರು ತಮ್ಮ ಪೂರ್ವಜರ ದಾನಧರ್ಮ ಚಟುವಟಿಕೆಗಳನ್ನು ಸಾಂಗವಾಗಿ ಮುಂದುವರೆಸಿಕೊಂಡು ಬಂದಿದ್ದಾರೆ.

## ೮. ಬಾಹುಬಲಿಯ ಸಹೋದರ ಭರತನ ಶಿಲ್ಪ

ಚಿಕ್ಕಬೆಟ್ಟದ ಮೇಲ್ಭಾಗದಲ್ಲಿ ಶಾಂತಿನಾಥ ಬಸದಿಯ ಹತ್ತಿರ ಒಂಭತ್ತು ಅಡಿ ಎತ್ತರದ ತೀರ್ಥಂಕರನ ಕಾಯೋತ್ಸರ್ಗ ಶಿಲ್ಪವಿದೆ. ಇದು ಮೊಣಕಾಲಿನವರೆಗೂ ಭೂಮಿಯಲ್ಲಿ ಹೂತಂತೆ ಕಾಣುತ್ತದೆ. ಈ ಶಿಲ್ಪವು ಬಾಹುಬಲಿಯ ಹಿರಿಯ ಸಹೋದರ ಭರತನದು ಎಂದು ಐತಿಹ್ಯವಿದೆ. "ಧರ್ಮಯುದ್ಧದಲ್ಲಿ ಬಾಹುಬಲಿಯೊಂದಿಗೆ ಕಾದಾಡಿದ ಭರತೇಶನು ಧರ್ಮದ ಮರ್ಯಾದೆಯನ್ನು ಮೀರಿದುದರಿಂದ ಆತನ ಎದುರು ಕುಬ್ಜನಂತೆ ಎದುರು ಬೆಟ್ಟದ ಮೇಲೆ ನಿಂತಿದ್ದಾನಂತೆ. ಬಾಹುಬಲಿಯ ಉದಾತತ್ತೆಗೆ ನಾಚಿ ಭೂಮಿ ಗಿಳಿದು ಹೋಗುತ್ತಿದ್ದಾನಂತೆ. ಪ್ರತಿ ಮಹಾಮಸ್ತಕಾಭಿಷೇಕವಾದಾಗಲೂ ಭರತೇಶನು ಒಂದು ಬತ್ತದ ಕಾಳಿನಷ್ಟು ಒಳಗೆ ಇಳಿಯುತ್ತಾನೆ. ಈ ಕಲಿಗಾಲ ಮುಗಿಯುವಷ್ಟರಲ್ಲಿ ಭರತೇಶನು ಸಂಪೂರ್ಣವಾಗಿ ಪಾತಾಳಕ್ಕೆ ಇಳಿದು ಬಿಡುತ್ತಾನೆ ಎಂದು ಜೈನ ಜಾನಪದರಲ್ಲಿ ಪ್ರತೀತಿಯಿದೆ".[೨೧]

## ೯. ಸಮಾರೋಪ

ಶ್ರವಣಬೆಳಗೊಳದ ಬಾಹುಬಲಿ ಶಿಲ್ಪವು ರೂಪ, ಪ್ರಮಾಣ, ಸಂಯೋಜನೆ ಇತ್ಯಾದಿ ದೃಷ್ಟಿಗಳಿಂದ ಪ್ರಪಂಚದಲ್ಲಿಯೇ ವಿಶಿಷ್ಟವಾದ ಸ್ಥಾನವನ್ನು ಪಡೆದಿದೆ. ಚಾವುಂಡ ರಾಯನು ಕ್ರಿ.ಶ. ೯೮೧ರಲ್ಲಿ ಈ ಶಿಲ್ಪವನ್ನು ಪ್ರತಿಷ್ಠಾಪಿಸಿ ಹನ್ನೆರಡು ವರ್ಷಗಳಿಗೊಮ್ಮೆ ಮಹಾಮಸ್ತಕಾಭಿಷೇಕವನ್ನು ಕೈಗೊಳ್ಳಲು ನಿರ್ದೇಶಿಸಿದಂತೆ, ಅಂದಿನಿಂದ ಪ್ರತಿ ಹನ್ನೆರಡು ವರ್ಷಗಳಿಗೊಮ್ಮೆ ಮಹಾಮಸ್ತಕಾಭಿಷೇಕ ಪೂಜೆಯನ್ನು ಒಂದು ವಿಶೇಷ ಮುಹೂರ್ತದಲ್ಲಿ ನೆರವೇರಿಸುವ ಸಂಪ್ರದಾಯ ಸಾಂಗವಾಗಿ ಮುಂದುವರೆದು ಬಂದಿದೆ. ೨೦೧೮ರ ಫೆಬ್ರುವರಿಯಲ್ಲಿ ನಡೆಯುವ ಮಹಾಮಸ್ತಕಾಭಿಷೇಕವು ಇದುವರೆಗೂ ನಡೆದಿರುವ ೮೮ನೆಯ ಮಹಾಮಸ್ತಕಾಭಿಷೇಕ ಆಗಲಿದ್ದು, ೨೧ನೆಯ ಶತಮಾನದ ದ್ವಿತೀಯ ಮಹಾಮಸ್ತಕಾಭಿಷೇಕವಾಗಿದೆ. ಶ್ರವಣಬೆಳಗೊಳದ ಬಾಹುಬಲಿ ಶಿಲ್ಪದ ಪ್ರಭಾವ ಮತ್ತು ಸ್ಫೂರ್ತಿ-ಪ್ರೇರಣೆಯಿಂದ ನಾಡಿನಾದ್ಯಂತ ಬಾಹುಬಲಿಯ ಅನೇಕ ದುಂಡು ಶಿಲ್ಪಗಳು ಪ್ರತಿಷ್ಠಾಪನೆಯಾಗುತ್ತ ಬಂದಿವೆ. ರಾಷ್ಟ್ರಸಂತ ಆಚಾರ್ಯಶ್ರೀ ವಿದ್ಯಾನಂದರು "ಬಾಹುಬಲಿಯ ತ್ಯಾಗ ಅಪ್ರಾಪ್ತಿಯ ಅಸಮರ್ಥತತೆಯ ಪರಿಣಾಮವಲ್ಲ, ಸಂಪ್ರಾಪ್ತಿಯ ತ್ಯಾಗವಾಗಿತ್ತು, ವಿರಾಗದ ಪರಿಣಾಮವಾಗಿತ್ತು. ಕರುಣೆ, ಕ್ಷಮೆ, ತಪಶ್ಚರ್ಯ ಮತ್ತು ಆಧ್ಯಾತ್ಮಿಕ ಪುರುಷಾರ್ಥದ ಜೀವಂತ ಮೂರ್ತಿಯಾದ ಬಾಹುಬಲಿ ತೆರೆದ ಪುಸ್ತಕ ವಾಗಿದ್ದಾನೆ" ಎಂದೆಲ್ಲ ಬಾಹುಬಲಿಯ ಹಿರಿಮೆ ಮತ್ತು ಸಂದೇಶವನ್ನು ಯಥೋಚಿತವಾಗಿ ಗುರುತಿಸಿದ್ದಾರೆ.[೨೨] ಟಿ.ವಿ. ವೆಂಕಟಾಚಲಶಾಸ್ತ್ರೀ ಅವರು ಬಾಹುಬಲಿಯ ಹಿರಿಮೆಯನ್ನು ಚರ್ಚಿಸುತ್ತ "ಭೋಗಾನುಭವದ ನಡುವೆಯಿದ್ದೂ ಭೋಗನಿರಸನ ಹೀಗೆ ಸಾಧ್ಯವಾಗುವು ದಾದರೆ, ಸಾಂಸಾರಿಕ ಜೀವನದಲ್ಲಿ ಅಣ್ಣ ತಮ್ಮಂದಿರ ವೈಷಮ್ಯವಿದ್ದೂ ಅದು ವಿಪರೀತಕ್ಕೆ ಹೋಗದೆ ಸ್ನೇಹ, ಸಹಾನುಭೂತಿ, ಪಶ್ಚಾತ್ತಾಪ ತ್ಯಾಗಗಳ ನೆಲೆಯಲ್ಲಿ ಅದನ್ನು ಶೋಧಿಸುವುದು ಸಾಧ್ಯವಾಗುವುದಾದರೆ, ಐಹಿಕಸುಖಕ್ಕೆ ಹಾಗೂ ಸ್ಥಾನಮಾನಗಳಿಗೆ

ನಡೆಸುವ ಕಲಹಗಳೂ ಕೋಲಾಹಲಗಳೂ ಹೀಗೆ ಆಮುಷ್ಮಿಕದ ಲಾಭಕ್ಕೆ ದಾರಿ ಮಾಡಿಕೊಡುವುದು ಸಾಧ್ಯವಾಗುವುದಾದರೆ, ಬಾಹುಬಲಿಯ ಬದುಕಿನ ಕಥೆಯಿಂದ ನಾವು ಕಲಿಯಬೇಕಾದ, ತಿಳಿಯಬೇಕಾದ ಎಲ್ಲವನ್ನೂ ಕಲಿತ ಹಾಗೆಯೇ, ತಿಳಿದ ಹಾಗೆಯೇ ಎಂದು ಧಾರಾಳವಾಗಿ ಹೇಳಬಹುದು. ಇದೇ ಗೊಮ್ಮಟಸಂದೇಶ!" ಎಂದು ಹೇಳಿರುವುದು ಪ್ರಸಕ್ತ ಸಂದರ್ಭದಲ್ಲಿ ಅವಶ್ಯವೆನಿಸುತ್ತದೆ.[೩೩]

ಶ್ರವಣಬೆಳಗೊಳದ ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕ ಮಹಾಸ್ವಾಮೀಜಿ ಅವರು "ಜಗತ್ತಿಗೆ ಬಾಹುಬಲಿಸ್ವಾಮಿಯ ಸಂದೇಶದ ಜ್ಞಾನ ಹಾಗೂ ಆಚರಣೆ ಬೇಕಾಗಿದೆ. ಇಂದು ಜಗತ್ತು ತಲ್ಲಣಗೊಳ್ಳುತ್ತಿದೆ. ವ್ಯಕ್ತಿಯಿಂದ ದೇಶದೇಶಗಳ ನಡುವೆ ವಿವಿಧ ಪ್ರಕಾರದ ಕಲಹ ಯುದ್ಧಗಳು ನಡೆದೇ ಇವೆ. ಶಾಂತಿಪ್ರೀಯನಿಗೆ ಜಗತ್ತು ಬೇಡವಾಗಿದೆ. ಪ್ರತಿಯೊಬ್ಬನಲ್ಲಿ ಕ್ರೋಧಾದಿಗಳು ವೈರತ್ವಗಳು ಮನೆ ಮಾಡಿಕೊಂಡಿವೆ. ಧರ್ಮ ಮರೆಯಾಗಿದೆ. ಸ್ವಾರ್ಥವಂಚನೆಗಳು ತನ್ನ ಅಟ್ಟಹಾಸದಲ್ಲಿ ಮೆರೆಯುತ್ತಲಿವೆ. ಅಹಂಕಾರವಂತೂ ಮಾನವನನ್ನೂ ಅಟ್ಟದ ಮೇಲೆ ಕೂಡಿಸಿಬಿಟ್ಟಿದೆ. ಅದಕ್ಕಾಗಿ ಅಶಾಂತಿಯ ಜಗತ್ತು ಇಂದಿನದಾಗಿದೆ. ಆದ್ದರಿಂದ ಬುದ್ಧಿ ಜೀವಿಗಳು, ರಾಜನೀತಿಜ್ಞರು, ಅಧಿಕಾರಿಗಳು ಎಲ್ಲರೂ ಈ ನಿಟ್ಟಿನಲ್ಲಿ ಚಿಂತಿಸಬೇಕಾಗಿದೆ. ಬಾಹುಬಲಿಸ್ವಾಮಿಯ್ಯ ಸಂದೇಶವನ್ನು ವಿಶ್ವಕ್ಕೆ ಸಾರಿ ಹೇಳಬೇಕಾಗಿದೆ" ಎಂದು ಹೇಳಿರುವ ಮಾತುಗಳನ್ನು[೩೪] ಇಂದು ಜಗತ್ತಿನ ಮಾನವಕುಲವೆಲ್ಲವೂ ಗಮನಿಸಬೇಕಾಗಿದೆ.

■

## ಅಡಿ ಟಿಪ್ಪಣಿಗಳು

೧. ಪಂಡಿತರತ್ನ ಎ. ಶಾಂತಿರಾಜಶಾಸ್ತ್ರಿಗಳು, ಶ್ರೀ ಗೋಮಟೇಶ್ವರ ಚರಿತ (೨೦೦೮-ಐದನೇ ಮುದ್ರಣ), ಪು. ೧೯-೨೧. ಶುಭಚಂದ್ರ, "ಕರ್ನಾಟಕದ ಗೊಮ್ಮಟೇಶ್ವರ ವಿಗ್ರಹಗಳು", ಮಾನವಿಕ ಕರ್ನಾಟಕ ಸಂ. ೩/೪ (ಅಗಸ್ಟ್-೧೯೭೩), ಪು. ೮೩, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨. ವೆಂಕಟಾಚಲಶಾಸ್ತ್ರಿ ಟಿ.ವಿ., "ಶ್ರವಣಬೆಳಗೊಳ ಮತ್ತು ಚಾವುಂಡರಾಯ", ವಿಜಯವಾಣಿ ದಿನಪತ್ರಿಕೆ (೨೦೧೫ ಫೆಬ್ರುವರಿ ೧), ಪು. ೫.

೩. ಹಂಜೆ ಅಪ್ಪಣ್ಣ ಎನ್., "ಕರ್ನಾಟಕದಲ್ಲಿ ಬಾಹುಬಲಿಯ ಬಸದಿಗಳು", ರೂವಾರಿ (ಶ್ರೀ ಎಸ್. ಜಿತೇಂದ್ರಕುಮಾರ್ ಅವರ ಅಭಿನಂದನ ಗ್ರಂಥ-೨೦೧೬), ಪು. ೩೮೨-೩೯೮, ಶ್ರೀ ಎಸ್. ಜಿತೇಂದ್ರಕುಮಾರ್ ಅಭಿನಂದನ ಸಮಿತಿ, ಬೆಂಗಳೂರು.

೪. ಹಂಪ ನಾಗರಾಜಯ್ಯ, "ಭಗವಾನ ಬಾಹುಬಲಿಯ ಅತಿ ಪ್ರಾಚೀನ ಪ್ರತಿಮೆ", ಪ್ರಗತಿ ಮತ್ತು ಜಿನವಿಜಯ ಸಂ. ೧೦೦/೧೦-೧೨ (ಜನೇವರಿ-ಮಾರ್ಚ್ : ೨೦೦೬), ಪು. ೨೪-೨೫, ದಕ್ಷಿಣ ಭಾರತ ಜೈನ ಸಭಾ, ಸಾಂಗಲಿ. ಕಮಲಾ ಹಂಪನಾ, "ಪಂಚಲೋಹದ ಗೋಮಟೇಶ್ವರ ಪ್ರತಿಮೆಗಳು", ಭೂಮಿಕಾ ಸಂ. ೧ (ಸಂಶೋಧನ ಪ್ರಬಂಧಗಳು-೨೦೧೨), ಪು. ೩೦೧-೩೦೩.

೫. ಗೋಪಾಲ್ ಬಾ.ರಾ., ಬನವಾಸಿ ಕದಂಬರು (೧೯೮೩), ಶಾ.ಸಂ. ೨೩.

೬. ಹಂಪ ನಾಗರಾಜಯ್ಯ, ಪೂರ್ವೋಕ್ತ.

೭. ಹಂಜೆ ಅಪ್ಪಣ್ಣ ಎನ್., "ಶ್ರವಣಬೆಳಗೊಳ ಪರಿಸರದ ಜೈನ ವಾಸ್ತುಕಲೆ", ಸಮವಸರಣ (ಸಂಶೋಧನ ಲೇಖನಗಳ ಸಂಕಲನ-೨೦೧೫), ಪು. ೬೦-೧೩೫.
೮. ಅದೇ.
೯. ಕಮಲಾ ಹಂಪನಾ, "ಚಾವುಂಡರಾಯನ ಸಮಗ್ರ ವ್ಯಕ್ತಿತ್ವ : ವಿಮರ್ಶೆ", ಭೂಮಿಕಾ ಸಂ. ೧ (ಸಂಶೋಧನ ಪ್ರಬಂಧಗಳು-೨೦೧೨), ಪು. ೩೧೭-೩೫೯.
೧೦. ಶಿರೂರ ಬಿ.ವ್ಹಿ., "ಮಹಾಮಸ್ತಕಾಭಿಷೇಕ", ಸಂಶೋಧನ ಚತುರ್ಮುಖ (ಸಂಶೋಧನ ಪ್ರಬಂಧಗಳ ಸಂಕಲನ-೨೦೦೬), ಪು. ೫೭-೫೮.
೧೧. ವಸಂತಮಾಲಾ ಜಿ.ಎಸ್., "ಶ್ರವಣಬೆಳಗೊಳದ ಐತಿಹ್ಯಗಳು", ಜಾನಪದ ಗೀತೆಗಳಲ್ಲಿ ಬಾಹುಬಲಿ (೨೦೦೬), ಪು. ೨೨.
೧೨. ಎ.ಕ. ಸಂ. ೫ ಶಾ.ಸಂ. ೨೭೨, ೨೭೩, ೨೭೬.
೧೩. ವೆಂಕಟಾಚಲಶಾಸ್ತ್ರಿ ಟಿ.ವಿ., ಪೂರ್ವೋಕ್ತ.
೧೪. ಎ.ಕ. ಸಂ. II, ಶಾ.ಸಂ. ೩೩೬.
೧೫. ಅದೇ, ಶಾ.ಸಂ. ೩೬೦.
೧೬. ಅದೇ, ಶಾ.ಸಂ. ೩೩೬.
೧೭. ಶೆಟ್ಟರ ಷ., ಶ್ರವಣಬೆಳ್ಗೊಳ (೧೯೮೧), ಪು. ೪೭-೫೩.
೧೮. ಶ್ರೀಮಾನ್ ಎರ್ತೂರು ಶಾಂತಿರಾಜಶಾಸ್ತ್ರಿಗಳವರು (ಸಂ.), ಶ್ರೀ ಭಗವಜ್ಜಿನಸೇನಾಚಾರ್ಯ-ಗುಣಭದ್ರಾಚಾರ್ಯ ವಿರಚಿತ ಮಹಾಪುರಾಣ ಸಂಪ ೧ (೧೯೯೨-ತೃತೀಯ ಮುದ್ರಣ), ಪರ್ವ-೧೬, ಪು. ೫೭೮-೫೯೩.
೧೯. ವೆಂಕಟಾಚಲಶಾಸ್ತ್ರಿ ಟಿ.ವಿ. (ಸಂ.), ಪಂಪಕವಿ ವಿರಚಿತಂ ಆದಿಪುರಾಣಂ (ಪರಿಷ್ಕೃತ ದ್ವಿತೀಯ ಮುದ್ರಣ-೧೯೯೫), ಚತುರ್ದಶಾಶ್ವಾಸಂ, ಪ.ಸಂ. ೧೪೦-೧೪೩, ಪು. ೩೨೭-೩೨೮.
೨೦. ಎ.ಕ. ಸಂ. II, ಶಾ.ಸಂ. ೩೩೬. ಕೃಷ್ಣಕುಮಾರ ಸಿ.ಪಿ., "ಜಿನಶ್ರೀರೂಪಮಾತ್ಮೋಪಮಂ", ಜೈನ ಸಾಹಿತ್ಯ : ಕೆಲವು ನೋಟಗಳು (೨೦೦೬), ಪು. ೧೨೬-೧೩೦.
೨೧. ಎ.ಕ. ಸಂ. II, ಶಾ.ಸಂ. ೨೮೧. ಜಾಗೀರದಾರ ಸೀತಾರಾಮ, "ಶ್ರವಣಬೆಳಗೊಳ ಗೊಮ್ಮಟೇಶ್ವರನ ಒಂದು ಪ್ರಾಚೀನ ಸ್ತುತಿ", ಜನ್ನ (ಅಖಿಲ ಕರ್ನಾಟಕ ಕನ್ನಡ ಜೈನ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ-೨೦೦೦), ಪು. ೪೮.
೨೨. ಎ.ಕ. ಸಂ. II, ಶಾ.ಸಂ. ೪೭೩.
೨೩. ಹಂಪ ನಾಗರಾಜಯ್ಯ, ಗೊಮ್ಮಟ-ಬಾಹುಬಲಿ (೧೯೮೧), ಪು. ೩೫-೩೬.
೨೪. ಶಿರೂರ ಬಿ.ವ್ಹಿ., ಪೂರ್ವೋಕ್ತ, ಪು. ೫೭-೫೯.
೨೫. ಕೇಸರಿ ರತ್ನರಾಜಯ್ಯ, "ಗುಳಕಾಯಜ್ಜಿ ಮತ್ತು ಬಾಹುಬಲಿ", ಮಾಧವಿ-೨ (ಮಹಾಮಸ್ತಕಾಭಿಷೇಕ ಮಹೋತ್ಸವ ಮಹಿಳಾ ಸಮ್ಮೇಳನ ಸ್ಮರಣ ಸಂಪುಟ-೧೯೯೩), ಪು. ೧೩೩-೧೩೪, ಶ್ರವಣಬೆಳಗೊಳ.
೨೬. ಚಾರುಕೀರ್ತಿ ಭಟ್ಟಾರಕ ಪಟ್ಟಾಚಾರ್ಯವರ್ಯ ಸ್ವಾಮಿಗಳು, "ಬಾಹುಬಲಿ ಆರಾಧನೆ", ಅನಂತಸಿರಿ (ಶ್ರೀ ಅನಂತನಾಥಸ್ವಾಮಿ ಬಸದಿಯ ಶತಮಾನೋತ್ಸವ ಸ್ಮರಣ ಸಂಚಿಕೆ-೨೦೦೦), ಪು. ೭೯, ಮಂಡ್ಯ
೨೭. ಎ.ಕ. ಸಂ. II, ಶಾ.ಸಂ. ೩೬೦.
೨೮. ಅದೇ, ಶಾ.ಸಂ. ೩೩೨.
೨೯. ಭಟ್‌ಸೂರಿ ಕೆ.ಜಿ., ಗೇರುಸೊಪ್ಪೆಯ (ನಗರ ಬಸ್ತಿಕೇರಿ) ಜೈನ ವಾಸ್ತು ಮತ್ತು ಮೂರ್ತಿಶಿಲ್ಪ (೧೯೯೬), ಅನುಬಂಧ - ೨, ಶಾ.ಸಂ. ೭, ಪು. ೭೮-೮೦.
೩೦. ಭಾನುಮತಿ ವೈ.ಸಿ. (ಸಂ.), ಪಂಚಬಾಣ ವಿರಚಿತ ಭುಜಬಲಿ ಚರಿತೆ (೨೦೧೧), ಇಪ್ಪತ್ತೂರನೆಯ ಸಂಧಿ, ಪ.ಸಂ. ೧೦೬-೧೦೭, ಪು. ೨೬೬.

೩೧. ಶಿರೂರ ಬಿ.ವ್ಹಿ., ಪೂರ್ವೋಕ್ತ, ಪು. ೫೯. ಕುಲಕರ್ಣಿ ಬಿ.ಎಸ್., "ಶ್ರವಣಬೆಳ್ಗೊಳದ ಗೊಮ್ಮಟೇಶ್ವರಗೆ ಜರುಗಿದ ಮಸ್ತಕಾಭಿಷೇಕಗಳು", ಶ್ರೀವಿಹಾರ (ಭಗವಾನ್ ಮಹಾವೀರರ ೨೫೦೦ನೆಯ ನಿರ್ವಾಣೋತ್ಸವ ಧರ್ಮಚಕ್ರ ಶ್ರೀವಿಹಾರದ ಸ್ಮರಣ ಸಂಪುಟ-೧೯೭೭), ಪು. ೭೯, ಶ್ರವಣಬೆಳಗೊಳ. ವಸಂತಕುಮಾರಿ, ಮೈಸೂರು ಅರಸರ ಕಾಲದಲ್ಲಿ ಜೈನರ ಸಮಾಜೋ ಧಾರ್ಮಿಕ ಜೀವನ : ಕ್ರಿ.ಶ. ೧೬೦೦-೧೯೦೦ (೨೦೧೨), ಪು. ೧೮.

೩೨. ಎ.ಕ. ಸಂ. II, ಶಾ.ಸಂ. ೩೨೪.

೩೩. ವಸಂತಕುಮಾರಿ, ಪೂರ್ವೋಕ್ತ, ಪು. ೨೬-೨೮.

೩೪. ಶಿರೂರ ಬಿ.ವ್ಹಿ., ಪೂರ್ವೋಕ್ತ, ಪು. ೫೯. ಕುಲಕರ್ಣಿ ಬಿ.ಎಸ್., ಪೂರ್ವೋಕ್ತ, ಪು. ೭೯. ವಸಂತಕುಮಾರಿ, ಪೂರ್ವೋಕ್ತ, ಪು. ೨೭-೨೮.

೩೫. ಕುಲಕರ್ಣಿ ಬಿ.ಎಸ್., ಪೂರ್ವೋಕ್ತ, ಪು. ೮೦.

೩೬. ವಸಂತಕುಮಾರಿ, ಪೂರ್ವೋಕ್ತ, ಪು. ೨೮.

೩೭. ಶಿರೂರ ಬಿ.ವ್ಹಿ., ಪೂರ್ವೋಕ್ತ, ಪು. ೫೯-೬೦. ವುಜಿರೆ ನಾ. (ಅನು.), ಪರಮ ದಿಗಂಬರ ಗೋಮಟೇಶ್ವರ (೧೯೯೭), ಪು. ೧೬೮-೧೬೯.

೩೮. ಶಿರೂರ ಬಿ.ವ್ಹಿ., ಪೂರ್ವೋಕ್ತ, ಪು. ೬೦-೬೧. ವುಜಿರೆ ನಾ. (ಅನು.), ಪೂರ್ವೋಕ್ತ, ಪು. ೧೬೯-೧೭೦.

೩೯. ಶಿರೂರ ಬಿ.ವ್ಹಿ., ಪೂರ್ವೋಕ್ತ, ಪು. ೬೦-೬೧. ವುಜಿರೆ ನಾ. (ಅನು.), ಪೂರ್ವೋಕ್ತ, ಪು. ೧೭೦.

೪೦. "ಶ್ರೀ ಗೊಮ್ಮಟೇಶ್ವರ ಶ್ರೀ ಬಾಹುಬಲಿ ಮಹಾಮಸ್ತಕಾಭಿಷೇಕ-೨೦೦೬", ಆದರ್ಶ ತ್ಯಾಗ ಸಂದೇಶ (ಗೊಮ್ಮಟೇಶ್ವರ ಭಗವಾನ್ ಶ್ರೀ ಬಾಹುಬಲಿಸ್ವಾಮಿ ಮಹಾಮಸ್ತಕಾಭಿಷೇಕ ಮಹೋತ್ಸವದ ಸ್ಮರಣ ಸಂಚಿಕೆ-೨೦೦೬), ಪು. ೫-೯.

೪೧. ಹಂಜೆ ಅಪ್ಪಣ್ಣ ಎನ್., "ಶ್ರವಣಬೆಳಗೊಳ ಪರಿಸರದ ಜೈನ ವಾಸ್ತುಕಲೆ", ಪೂರ್ವೋಕ್ತ, ಪು. ೬೦-೧೩೫.

೪೨. ಎ.ಕ. ಸಂ. II, ಶಾ.ಸಂ. ೮೨.

೪೩. ಅದೇ, ಶಾ.ಸಂ. ೨೭೪, ೨೭೭, ೩೪೨, ೫೪೭.

೪೪. ಅದೇ, ಶಾ.ಸಂ. ೩೭೩.

೪೫. ಅದೇ, ಶಾ.ಸಂ. ೨೭೯.

೪೬. ಅದೇ, ಶಾ.ಸಂ. ೩೬೦.

೪೭. ಅದೇ, ಶಾ.ಸಂ. ೩೨೯.

೪೮. ಅದೇ, ಶಾ.ಸಂ. ೩೭೬.

೪೯. ಅದೇ, ಶಾ.ಸಂ. ೩೪೩.

೫೦. ಅದೇ, ಶಾ.ಸಂ. ೩೪೪, ೩೪೫, ೩೪೬, ೩೪೭, ೩೪೮, ೩೪೯, ೩೫೩, ೩೬೧, ೪೪೩, ೪೭೮.

೫೧. ಅದೇ, ಶಾ.ಸಂ. ೨೭೫, ೨೭೮.

೫೨. ಅದೇ, ಶಾ.ಸಂ. ೩೩೯.

೫೩. ಅದೇ, ಶಾ.ಸಂ. ೩೪೦.

೫೪. ಅದೇ, ಶಾ.ಸಂ. ೩೦೦.

೫೫. ಅದೇ, ಶಾ.ಸಂ. ೩೫೭.

೫೬. ಅದೇ, ಶಾ.ಸಂ. ೩೫೧.

೫೭. ಅದೇ, ಶಾ.ಸಂ. ೩೩೫.

೫೮. ಅದೇ, ಶಾ.ಸಂ. ೪೮೫.

೫೯. ಎಸ್.ಆಯ್.ಆಯ್. ಸಂ. XI-I, ಶಾ.ಸಂ. ೫೨.
೬೦. ಎ.ಕ. ಸಂ. II, ಶಾ.ಸಂ. ೨೯೯.
೬೧. ಅದೇ, ಶಾ.ಸಂ. ೩೩೩, ೩೩೪.
೬೨. ಅದೇ, ಶಾ.ಸಂ. ೨೯೧.
೬೩. ಅದೇ, ಶಾ.ಸಂ. ೨೯೨.
೬೪. ಅದೇ, ಶಾ.ಸಂ. ೩೦೫.
೬೫. ಅದೇ, ಶಾ.ಸಂ. ೩೬೫.
೬೬. ಅದೇ, ಶಾ.ಸಂ. ೩೦೭, ೩೦೮, ೩೦೯, ೩೧೦, ೩೧೧, ೩೧೨, ೩೧೩, ೩೧೪, ೩೧೫, ೩೧೬, ೩೧೭, ೩೧೮, ೩೧೯, ೩೨೦, ೩೨೧, ೩೯೧, ೩೯೨, ೩೯೩, ೩೯೪, ೩೯೫, ೩೯೬, ೩೯೭, ೩೯೮, ೩೯೯, ೪೦೦, ೪೦೧, ೪೦೨, ೪೦೩, ೪೦೪, ೪೦೫, ೪೦೬, ೪೦೭, ೪೦೮, ೪೦೯, ೪೧೦, ೪೧೧, ೪೧೨, ೪೧೩, ೪೧೪, ೪೧೫, ೪೧೬, ೪೧೭, ೪೧೮, ೪೧೯, ೪೨೦, ೪೨೧, ೪೨೨, ೪೨೩, ೪೨೪, ೪೨೫, ೪೨೬, ೪೨೭, ೪೨೮, ೪೨೯, ೪೩೦, ೪೩೧, ೪೩೨, ೪೩೩, ೪೩೪, ೪೩೫, ೪೩೬, ೪೩೭, ೪೩೮, ೪೩೯.
೬೭. ಅದೇ, ಶಾ.ಸಂ. ೪೨೧.
೬೮. ಎಸ್.ಆಯ್.ಆಯ್. ಸಂ. ಫಿಗಿ, ಶಾ.ಸಂ. ೬೯೫.
೬೯. ಅದೇ, ಶಾ.ಸಂ. ೭೧೬.
೭೦. ಹಂಜೆ ಅಪ್ಪಣ್ಣ ಎನ್., ಲಕ್ಕುಂಡಿಯ ಬಸದಿಗಳು (೨೦೧೫), ಪು. ೧೯-೨೪.
೭೧. ವಸಂತಮಾಲಾ ಜಿ.ಎಸ್., "ಶ್ರವಣಬೆಳಗೊಳದ ಐತಿಹ್ಯಗಳು", ಜಾನಪದ ಗೀತೆಗಳಲ್ಲಿ ಬಾಹುಬಲಿ (೨೦೦೬), ಪು. ೨೧-೨೨.
೭೨. ಪಾಟೀಲ ಎಸ್.ಪಿ., "ಗೊಮ್ಮಟ ಜೀವನ-ಸಂದೇಶ", ಸಮಪ್ರಭಾವನಾ (೧೯೯೮), ಪು. ೭೪-೮೦.
೭೩. ವೆಂಕಟಾಚಲಶಾಸ್ತ್ರೀ ಟಿ.ವಿ., ಕನ್ನಡ ಕವಿಗಳು ಕಂಡ ಗೊಮ್ಮಟೇಶ್ವರ (೧೯೯೩), ಪೀಠಿಕೆ, ಪು. xliii.
೭೪. ಚಾರುಕೀರ್ತಿ ಭಟ್ಟಾರಕ ಮಹಾಸ್ವಾಮೀಜಿ, "ಬಾಹುಬಲಿಸ್ವಾಮಿಯ ಸಂದೇಶ", ಪಾರಸ ಪ್ರಭೆ (ಶ್ರೀಕ್ಷೇತ್ರ ಶ್ರವಣಬೆಳಗೊಳದ ಪರಮಪೂಜ್ಯ ಶ್ರೀಗಳವರ ಚಾತುರ್ಮಾಸ ವ್ರತಾಚರಣೆಯ ಸಂಸ್ಮರಣ ಸಂಚಿಕೆ-೨೦೦೧), ಪು. ೩೫-೩೭.

# ರಾಧೆ ಯಾರು ? – ಒಂದು ಚರ್ಚೆ



ಡಾ. ವಿಜಯಾ ಸುಬ್ಬರಾಜ್

ಇಡೀ ಭಾರತದಲ್ಲಿ, ಅದರಲ್ಲಿಯೂ ಕೃಷ್ಣಭಕ್ತಿ ಪರಂಪರೆಯಲ್ಲಿ, ರಾಧೆಯಿಲ್ಲದ ಕೃಷ್ಣನನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ಕೃಷ್ಣ ಭಕ್ತರೆಲ್ಲರೂ ತಮ್ಮನ್ನು ರಾಧೆಯೆಂದು ಪರಿಭಾವಿಸಿಕೊಂಡೇ ಭಕ್ತಿ ಸಾಧನೆಗೆ ತೊಡಗಿದ್ದಾರೆ. ಕೃಷ್ಣನಗೆ ಅಷ್ಟ ಮಹಿಷಿಯರಿದ್ದರೂ, ರಾಧೆ ಯಾರೆಂಬುದಕ್ಕೆ ಮಾಹಿತಿ ಇಲ್ಲದಿದ್ದರೂ, ತಂದೆ ತಾಯಿ ಹುಟ್ಟು ಹಿನ್ನೆಲೆ-ಯಾವುದಕ್ಕೂ ಒಂದು ಖಚಿತವಾದ ಆಧಾರವಿಲ್ಲದೆ ಇರುವ ಆ ಹೆಣ್ಣಿನೊಂದಿಗೆ ಕೃಷ್ಣನ ಹೆಸರು ಅನನ್ಯವಾಗಿ ಬೆಸೆದುಕೊಂಡಿರುವುದೊಂದು ವಿಸ್ಮಯವೇ ಸರಿ. ಯಶೋದೆಯ ಸಾಕು ಮಗನಾಗಿ, ತುಂಟಾಟ ಹುಡುಗಿಯರ ಅಥವಾ ಗೋಕುಲದ ಹೆಂಗಳೆಯರ ಸಂಗಾಟಗಳಲ್ಲಿ ಬೆಳೆದ ಕೃಷ್ಣನಿಗೆ ರಾಧೆ ಗಂಟುಬಿದ್ದದ್ದು ಎಲ್ಲಿಂದ ಎನ್ನುವ ಪ್ರಶ್ನೆ ಎಲ್ಲರನ್ನೂ ಕಾಡಿದೆ. ಬಹುಶಃ ಪ್ರಾಯದಲ್ಲಿ ಅವನ ಅನನ್ಯ ಸಂಗಾತಿಯಾಗಿ ಅನುಪಮ ಸುಂದರಿಯಾಗಿ ಕೃಷ್ಣನ ಮನಸ್ಸನ್ನು ಗೆದ್ದವಳೆಂದೇ ಭಾವಿಸುವುದಾದರೆ, ಆಕೆ ಯಾರು? ಎಲ್ಲಿಯವಳು? ತಂದೆ ತಾಯಿಗಳು ಎಲ್ಲಿಯವರು ಎನ್ನುವುದಕ್ಕೆ ಯಾವುದೇ ವಿವರಗಳು ಸಿಗುವುದಿಲ್ಲವಾದರೂ ಕೆಲವರು ವಿದ್ವಾಂಸರು ಈ ಅನುಮಾನಗಳ ಪರಿಹಾರಕ್ಕೆ ಪ್ರಯತ್ನಿಸಿದ್ದಾರೆ. ಕಾವ್ಯ ಪುರಾಣಗಳನ್ನು ಶೋಧಿಸಿದ್ದಾರೆ. ಅವರವರಿಗೆ ಲಭ್ಯ ಮಾಹಿತಿಗಳನ್ನು ಮುಂದಿಡಲು ಪ್ರಯತ್ನಿಸಿದ್ದಾರೆ. ರಾಧೆಯ ಜಾಡು ಹಿಡಿದು ಹೊರಟು ಭಿನ್ನ ಭಿನ್ನ ಮೂಲಗಳ ಬಗ್ಗೆ ಹೇಳಿದ್ದಾರಾದರೂ ಒಂದು ಸಾಮಾನ್ಯ ನಿಲುವಿಗೆ ಬರಲು ಸಾಧ್ಯವಾಗದಿದ್ದರೂ ರಾಧಾ-ಕೃಷ್ಣರ ಅನನ್ಯ, ಅಲೌಕಿಕ ಪ್ರೀತಿಯ ಸಂಬಂಧವನ್ನು ಸಾಕಷ್ಟು ವೈಭವೀಕರಿಸಿ ಬರೆದ ಕಾವ್ಯ-ನಾಟಕಗಳಿಗೆ ಮಾತ್ರ ಕೊರತೆಯಿಲ್ಲದಷ್ಟಿದೆ. ಗೀತಗೋವಿಂದದ ಖ್ಯಾತ ಕವಿ ಜಯದೇವ, ಸೂರದಾಸ ಅಷ್ಟಚಾಪ ಕವಿಗಳು. ಬಂಗಾಳದ ಹುಸೇನ್‌ಶಾಹ್‌ನ ನಂಬಿಕಸ್ಥ ಮಂತ್ರಿಗಳಾಗಿದ್ದ ಸನಾತನ ಗೋಸ್ವಾಮಿ, ರೂಪಾ ಗೋಸ್ವಾಮಿ ೪ ನೇ ಶತ.ದಿಂದ ೯ನೇ ಶದ ವರೆಗಿನ ಆಳ್ವಾರರು, ಶಿಲಪ್ಪಧಿಕಾರಂನ ಖ್ಯಾತ ಕವಿ ಇಳಂಗೋ ಅಡಿಗಳ್, ಮಣಿಮೇಖಲೈ ಖ್ಯಾತಿಯ

ಚತ್ತನಾರ್ ಮೊದಲಾದ ಕವಿಗಳು ತಮ್ಮ ಪ್ರತಿಭೆಯಿಂದ ರಾಧಾಕೃಷ್ಣರ ಅನನ್ಯ ಪ್ರೀತಿಯನ್ನು ಮೈದುಂಬಿ ಹಾಡಿ ಹೊಗಳಿದ್ದಾರೆ.

ರಾಧೆಯ ಮೂಲದ ಹುಡುಗಾಟದಲ್ಲಿ ತೊಡಗಿ ಅವಳ ಬಗ್ಗೆ ತಮಗೆ ಲಭ್ಯ ಮಾಹಿತಿಗಳನ್ನು ಆಧರಿಸಿ ಒಂದು ಸಣ್ಣ ಪುಸ್ತಿಕೆಯನ್ನು ಬರೆದಿದ್ದಾರೆ. ಅವರು ಗಮನಿಸಿದಂತೆ ರಾಧೆಯ ಪ್ರಸ್ತಾಪ, ಋಗ್ವೇದ, ಅಥರ್ವವೇದಗಳಲ್ಲಿಯೂ, ಪುರಾಣಗಳಾದ ಪದ್ಮಪುರಾಣ, ಮತ್ಸ್ಯಪುರಾಣ, ನಾರದಪುರಾಣ, ಆದಿಪುರಾಣ, ಶ್ರೀದೇವಿ ಭಾಗವತ ಪುರಾಣ ಮತ್ತು ಬ್ರಹ್ಮವೈವರ್ತ ಪುರಾಣಗಳಲ್ಲಿಯೂ ಕಾಣಸಿಗುತ್ತದೆ. ಆದರೆ ಅತ್ಯಂತ ಜನಪ್ರಿಯವಾದ ಕೃಷ್ಣ ಕಥೆಯೇ ಮುಖ್ಯವಾಗಿರುವ ಹರಿವಂಶ, ವಿಷ್ಣುಪುರಾಣ ಮತ್ತು ಭಾಗವತದಲ್ಲಿಯೂ ಅಲ್ಲದೆ ಮಹಾಕಾವ್ಯವೆಂದು ಗುರುತಿಸಿಕೊಂಡಿರುವ ಮಹಾಭಾರತ ದಲ್ಲಿಯೂ ರಾಧೆಯ ಹೆಸರು ಕಾಣಿಸಿಕೊಳ್ಳುವುದೇ ಇಲ್ಲ.

ಕಣ್ಣನ್ ಅವರು ಉದ್ಧರಿಸಿರುವ ಪುರಾಣಗಳು ಕಾಣಿಸಿಕೊಂಡದ್ದು ಭಾಗವತದ ನಂತರವೇ ಆಗಿರುವಾಗ, ಭಾಗವತದಲ್ಲಿ ಇಲ್ಲದೆ ಹೋದದ್ದು ಹೇಗೆ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಜಯದೇವನಿಗೆ ರಾಧೆಯ ಪರಿಚಯ ಸಿಕ್ಕಿದ್ದು ಬ್ರಹ್ಮವೈವರ್ತ ಪುರಾಣದಿಂದ ಎನ್ನುವುದು ವಿದ್ವಾಂಸರ ಅಭಿಪ್ರಾಯ ಬಂಗಾಳಿ ಮಹಾಭಾರತದಲ್ಲಿ ಕೃಷ್ಣನನ್ನು ಗೋಪಿಜನಪ್ರಿಯ ಎಂದು ಸಂಬೋಧಿಸಲಾಗಿದೆಯೇ ಹೊರತು ರಾಧಾಪ್ರಿಯ ಎಂದಲ್ಲ. ಹರಿವಂಶದಲ್ಲಿ ರಾಧೆಯ ಪ್ರಸ್ತಾಪವೂ ಇಲ್ಲ, ಗೋಪಿಕೆಯರ ಪ್ರಸ್ತಾಪವೂ ಇಲ್ಲ.

ಭಾಗವತದ ಒಂದು ಸಂದರ್ಭದಲ್ಲಿ ಕೃಷ್ಣನನ್ನು ಗಂಡನಾಗಿ ಪಡೆಯುವುದಕ್ಕಾಗಿ ಗೋಪಿಕೆಯರು ಕಾತ್ಯಾಯಿನಿ ಪೂಜೆ ಮಾಡುತ್ತಿದ್ದರಂತೆ. ಗೋಪಿಕೆಯರ ಆ ಗುಂಪಿನಲ್ಲಿ ಅನುಪಮ ಸುಂದರಿಯಾಗಿದ್ದ ಗೋಪಿಕೆಯೊಬ್ಬಳು ಇದ್ದಳೆಂದೂ ತನ್ನ ಅನನ್ಯ ಭಕ್ತಿಯಿಂದಾಗಿ ಕೃಷ್ಣನನ್ನು ಎಲ್ಲ ರೂಪಗಳಲ್ಲಿಯೂ ಪರಿಭಾವಿಸಿ ಪೂಜಿಸುತ್ತಿದ್ದಳೆಂದೂ ಅದನ್ನು ಗಮನಿಸಿದ ಕೃಷ್ಣ ಬೇರೆಲ್ಲ ಗೋಪಿಕೆಯರನ್ನು ಬಿಟ್ಟು ಇವಳೆಡೆಗೆ ಆಕರ್ಷಿತನಾಗಿ ಬಂದು ಅವಳನ್ನು ಏಕಾಂತ ಸ್ಥಳವೊಂದಕ್ಕೆ ಕರೆದೊಯ್ದನೆಂದು ಪ್ರಸ್ತಾಪಿಸಲಾಗಿದೆ.

ಮೊಟ್ಟ ಮೊದಲ ಬಾರಿಗೆ ೧೭ನೇ ಶತಮಾನದ ಗೌಡೀಯ ವೈಷ್ಣವ ಆಚಾರ್ಯ, ವಿಶ್ವನಾಥ ಚಕ್ರವರ್ತಿ ಅವರು 'ಅನನ್ಯರಾಧಿಕಾ' ಎಂಬ ಶ್ಲೋಕವೊಂದರಲ್ಲಿ ಪ್ರಸ್ತಾಪಿತ ವಾಗಿರುವ 'ಅನನ್ಯರಾಧಿಕಾ' ರಾಧೆಯೆಂದೇ ಅಭಿಪ್ರಾಯ ಪಡುತ್ತಾರೆ. ಇಸ್ಕಾನ್‌ನ ರುವಾರಿಗಳಾದ ಪ್ರಭುದಾಸರೂ ಕೂಡಾ ವಿಶ್ವನಾಥ ಚಕ್ರವರ್ತಿಗಳ ಅಭಿಪ್ರಾಯವನ್ನು ಸಮರ್ಥಿಸುತ್ತಾರೆ. ಆದರೆ ಮತ್ತೆ ಕೆಲವು ವಿದ್ವಾಂಸರು ಈ ಅಭಿಪ್ರಾಯವನ್ನು ವಿರೋಧಿಸುತ್ತಾರೆ. ತನ್ನ ಅಷ್ಟ ಮಹಿಷಿಗಳ ಗುಂಪಿನಲ್ಲಿ ರಾಧೆಯ ಪ್ರಸ್ತಾವವೇ ಇಲ್ಲ. ತನ್ನ ಜೀವ-ದೇಹಗಳ ಅವಿಚ್ಛಿನ್ನ ಭಾಗದಂತೆ ಇದ್ದ ರಾಧೆಯ ಬಗ್ಗೆ ಅವನೇಕೆ ಎಲ್ಲಿಯೂ ಪ್ರಸ್ತಾಪಿಸುವುದಿಲ್ಲ. ರಾಧೆ ಕುರಿತು ಮಾತನಾಡುವುದಿಲ್ಲ. ಪ್ರೀತಿ, ಪ್ರೇಮಗಳ ವಿಚಾರವಾಗಿ ಹೇಳುವಾಗಲೂ ರಾಧೆ ಸುಳಿಯುವುದೇ ಇಲ್ಲ.

ಹೀಗಿರುವಾಗ ರಾಧೆಯ ಕಲ್ಪನೆ ಹುಟ್ಟಿದ್ದಾದರೂ ಹೇಗೆ ಎನ್ನುವುದೇ ಎಲ್ಲ ಕೃಷ್ಣ ಭಕ್ತರನ್ನು ಕಾಡುತ್ತಿರುವ ಪ್ರಶ್ನೆಯಾಗಿದೆ. ಇದಕ್ಕೆ ಉತ್ತರ ನಮ್ಮ ಪುರಾಣ, ಕಾವ್ಯ, ವೇದಗಳೂ ನೀಡಲಾಗದೆ ಇದ್ದಾಗ ಬೇರೆಯೇ ಮೂಲಗಳಿಗೆ ಹೋಗುವುದು ಅನಿವಾರ್ಯವಾಗುತ್ತದೆ. ಹಾಗೆ ಹೋದಾಗ ಅನೇಕ ಅಚ್ಚರಿಯ ಸಂಗತಿಗಳು ಬೆಳಕಿಗೆ ಬಂದಿವೆ. ಒಂದು ವದಂತಿಯ ಪ್ರಕಾರ, ಬಹಳ ಹಿಂದೆ ಹೂಣರು, ಶಕರು ಮೊದಲಾದ ಅಭೀರ ಜನಾಂಗಗಳು ಆಕ್ರಮಣ ಮಾಡಿಯೋ ಇಲ್ಲ ವಲಸೆ ಬಂದೋ ದೂರದ ಈ ದೇಶದಲ್ಲಿ ಯಮುನಾನದಿ ದಡದಲ್ಲಿ ನೆಲಸಿದರು ಎನ್ನಲಾಗಿದೆ. ಕಾಲಾಂತರದಲ್ಲಿ ಇವರು ಈ ದೇಶದ ಮುಖ್ಯಧಾರೆಯಲ್ಲಿ ಸೇರಿ ಹೋಗಿ ಇದರದೇ ಒಂದು ಅವಿಭಾಜ್ಯ ಭಾಗವಾಗಿ ಬದುಕಿ ಇಲ್ಲಿನ ಧರ್ಮ, ಸಂಸ್ಕೃತಿ ಬದುಕಿನ ಶೈಲಿಯನ್ನು ರೂಢಿಸಿ ಕೊಂಡಿರಬೇಕು. ಮೂಲತಃ ಕೃಷಿಕರಾಗಿದ್ದ ಇವರು ಗೋಸಂಗೋಪನೆಯನ್ನೇ ಮುಖ್ಯ ವೃತ್ತಿಯಾಗಿಸಿಕೊಂಡಿರಬೇಕು. ಭಾಗವತದಲ್ಲಿನ ಕೃಷ್ಣಲೀಲೆಗಳ ಜೊತೆಗೆ ರಾಧೆಯ ಕತೆಯನ್ನು ವಿಲೀನಗೊಳಿಸಿಕೊಂಡಿರಬೇಕು. ಇನ್ನೂ ಒಂದು ವಿಚಿತ್ರ ವಿವರಣೆಯೆಂದರೆ ಆಭೀರರ 'ಧಾರಾ' (Stream) ಎಂಬುದು ರಾಧಾ ಎಂದು ಅಕ್ಷರ ಪಲ್ಲಟ ಆಗಿರಬೇಕು ಎಂಬುದು! ಕೃಷ್ಣ ಆಭೀರ ಜನಾಂಗಕ್ಕೆ ಸೇರಿದವನಾಗಿರುವುದರಿಂದ ರಾಧೆಯೂ ಆ ಜನಾಂಗದ ಒಬ್ಬ ಹೆಣ್ಣು ಮಗಳಾಗಿರಬೇಕು ಎನ್ನುವುದೂ ಕೂಡಾ ಒಂದು ಅಭಿಪ್ರಾಯವಾಗಿದೆ. ರಾಧೆ ಕೃಷ್ಣನಿಗಿಂತ ಹತ್ತುವರ್ಷ ದೊಡ್ಡವಳು ಎಂಬ ಪ್ರತೀತಿಯೂ ಇದೆ. ಪುರಾಣತಜ್ಞ ದೇವದತ್ತ ಪಟ್ಟನಾಯಕ ಅವರೂ ಇದನ್ನು ಒಪ್ಪುತ್ತಾರೆ. ಅಲ್ಲದೆ ರಾಧೆಯನ್ನು ಯಶೋದೆಯ ಸೋದರನ ಹೆಂಡತಿಯಾಗಿದ್ದಳೆಂದೂ ತಿಳಿಸುತ್ತಾರೆ.

೧೬ನೇ ಶ.ದ ರೂಪಾ ಗೋಸ್ವಾಮಿಯವರಂತೂ ರಾಧೆಯ ಗಂಡನ ಹೆಸರನನ್ನು ಅಭಿಮನ್ಯು ಎಂದು ಹೇಳುತ್ತಾರೆ. ಇವರ ದಾನಕೇಳೀ ಕೌಮುದಿ ಕೃತಿಯಲ್ಲಿ ಅಭಿಮನ್ಯು ಹೆಸರಿನ ತದ್ಭವರೂಪ ಆಹೀನ್ ಎಂದು ತಿಳಿಸುತ್ತಾರೆ. ಈ ಆಹೀನ್ ಎಂಬುದನ್ನೇ ಮುರಾರಿಗುಪ್ತಾ ಅವರು ಚೈತನ್ಯ ಚರಿತಾಮೃತದಲ್ಲಿ ಆಯಾನ್ ಎಂದು ನಾಮಾಂತರಿಸುತ್ತಾರೆ. ಕಾಲ, ದೇಶದೊಂದಿಗೆ ಆಹೀನ್, ಆಯಾನ್ ಎಂದೂ ಮುಂದೆ ಇದೇ ಶಬ್ದ ದಕ್ಷಿಣ ಭಾರತದ ಆಚಾರ್ಯರಾದ ನಿಂಬಾರ್ಕರು ಮತ್ತು ವಲ್ಲಭ ಎಂಬುವವರು, ವೈಷ್ಣವ ಪಂಥದ ಪ್ರತಿನಿಧಿಗಳಾಗಿದ್ದು ಉತ್ತರ ಭಾರತದ ವೈಷ್ಣವರನ್ನು ಆಯಾರ್ಸ್ ಎಂದು ರೂಪಾಂತರಿಸಿ ಕೊಂಡಿರಬೇಕು.

ಹಾಲ ರಾಜನ ಗಾಥಾ ಸಪ್ತಶತಿಯಲ್ಲಿ ಕೃಷ್ಣಲೀಲೆಗಳ ವರ್ಣನೆ ಬರುವುದಾದರೂ ರಾಧೆ ಹೆಸರಿನ ಸುಳಿವೂ ಇಲ್ಲ.

ಡಾ. ಕೋಡೂರು ಪ್ರಭಾಕರ ರೆಡ್ಡಿಯವರು ತಮ್ಮ ಗಾಥಾ ತ್ರಿಶತಿ ಮತ್ತು ಗಾಥಾ ಚತುಶ್ಶತಿಯಲ್ಲಿ ರಾಧಾ ಪ್ರಸಂಗಗಳನ್ನು ತಂದಿದ್ದಾರೆ. ಒಂದು ಪ್ರಸಂಗದಲ್ಲಿ, ಯಶೋದೆ ಕೃಷ್ಣನನ್ನು ಕುರಿತು ವ್ರಜದ ಹೆಂಗಸರ ಮುಂದೆ ಇವತ್ತಿಗೂ ಕೃಷ್ಣ ನನಗೆ ಮಗುವಾಗಿಯೂ ಕಾಣಿಸುತ್ತಾನೆ ಎಂದಾಗ ಅವರೆಲ್ಲರೂ ನಕ್ಕರಂತೆ, ಸೂಕ್ಷ್ಮದೃಷ್ಟಿಯ ಗೋಪಿಕೆಯೊಬ್ಬಳಿಗೆ

ಮಾತ್ರ ಅವಳ ಕೆನ್ನೆಯ ಮೇಲೆ ಕೃಷ್ಣಬಿಂಬ ಕಾಣಿಸಿತಂತೆ, ಕೂಡಲೇ ಅವಳ ಕೆನ್ನೆಗೆ ಮುತ್ತು ಕೊಡುವ ನೆಪದಲ್ಲಿ ಕೃಷ್ಣನಿಗೆ ಮುತ್ತು ಕೊಟ್ಟಳಂತೆ.

ಅನುವಾದದ ಎರಡನೇ ಭಾಗವಾದ ಗಾಥಾ ಚತುಶ್ಶತಿಯಲ್ಲಿ ಪ್ರಾಕೃತದ ಸಂಸ್ಕೃತ ಅನುವಾದದ ಭಾವಾರ್ಥದಂತೆ ಪದ್ಯ ಕೆಳಕಂಡಂತಿದೆ.

"ಓ ತುಂಟ ಕೃಷ್ಣನೇ! ಗೋಧೂಳಿಯನ್ನು ನಿನ್ನ ಉಸಿರಿನಿಂದ ರಾಧೆಯ ಕಣ್ಣಿಂದ ಊದಿ ಹೊರಹಾಕಿ ಅನ್ಯ ಗೋಪಾಲಕರ ಆತ್ಮಗೌರವಕ್ಕೆ ಚ್ಯುತಿ ತಂದೆ" ಎಂದು. ಇದರ ಪ್ರಕಾರ ರಾಧೆಯ ಪ್ರಸ್ತಾಪ ಗಾಥಾ ಸಪ್ತಶತಿಯಲ್ಲಿ ಪ್ರಮುಖವಾಗಿದೆ.

ಡಾ. ದಯಾನಂದ ಶ್ರೀವಾತ್ಸವ ಅವರು, ಶ್ರೀಕೃಷ್ಣಭಕ್ತಿಕೋಶ ಸಂ ||ರಲ್ಲಿ ಗಮನಿಸಿದ ಒಂದೆರಡು ಕುತೂಹಲಕರ ಪ್ರಸಂಗಗಳನ್ನು ವಿವರಿಸಿದ್ದಾರೆ. ಒಂದು ಪ್ರಸಂಗ ಹೀಗಿದೆ. ಸಾಕಾಲೀಲಾ ಅಥವಾ ದಾನಲೀಲಾ ಕ್ರೀಡೆಗಾಗಿ ಕೃಷ್ಣ ರಾಧೆಯೂ ಸೇರಿದಂತೆ ಎಲ್ಲ ಗೋಪಿಕೆಯರನ್ನೂ ಯಮುನೆಯ ಮತ್ತೊಂದು ತೀರದೆಡೆಗೆ ಕರೆದೊಯ್ಯುತ್ತಾನೆ. ಇದಕ್ಕೆ ಪ್ರತಿಯಾಗಿ ರಾಧೆಯ ಪ್ರೀತಿಯನ್ನು ಯಾಚಿಸುತ್ತಾನೆ. ರಾಧೆ ಇದಕ್ಕೆ ಒಪ್ಪುವುದಿಲ್ಲವಾದ್ದರಿಂದ ನದೀ ಮಧ್ಯದಲ್ಲಿ ರಾಧೆಯನ್ನು ಹೆದರಿಸುತ್ತಾನೆ. ಅವಳಿಗೆ ಬೇರೆ ದಾರಿಯಿಲ್ಲದೆ ಅವನ ಪ್ರೀತಿಯನ್ನು ಸ್ವೀಕರಿಸುತ್ತಾಳೆ, ಅಲ್ಲದೆ ನಿನಗೆ ಬೇಕಾದ್ದನ್ನು ನೀನು ತಗೋ ಎಂದು ಪೂರ್ಣ ಸ್ವಾತಂತ್ರ್ಯವನ್ನು ಕೊಡುತ್ತಾಳೆ.

ಮೊಟ್ಟ ಮೊದಲ ಬಾರಿಗೆ ಬ್ರಹ್ಮವೈವರ್ತ ಪುರಾಣದಲ್ಲಿ ರಾಧೆಯ ಪ್ರಸ್ತಾಪ ಕಾಣಿಸಿಕೊಳ್ಳುತ್ತದೆ ನಂತರ ಯಶಸ್ತಿಲಕ ಚಂಪೂ (ಕ್ರಿ.ಶ. ೯೫೯) ಕಾವ್ಯದಲ್ಲಿಯೂ ರಾಧೆ ಹೆಸರು ಬರುತ್ತದೆ. ಹಾಗೆಯೇ ಶ್ರೀಧರದಾಸ ಕವಿಯ (೧೧೨೭ AD) ಸದುಕ್ತಿ ಕರ್ಣಾಮೃತದಲ್ಲಿ ರಾಧೆ ಕುರಿತಾಗಿ ಹಲವಾರು ಪದ್ಯಗಳು ಇರುವುದನ್ನು ಗುರುತಿಸಲಾಗಿದೆ. ಆದರೆ ಇವರೆಲ್ಲರ ನಂತರದ ಗೀತಗೋವಿಂದದ ಜಯದೇವ ಮಾತ್ರ ಬ್ರಹ್ಮವೈವರ್ತ ಪುರಾಣದ ೧೫ನೇ ಕಾಂಡದಿಂದ ಹೆಚ್ಚು ಪ್ರಭಾವಿತನಾಗಿದ್ದಾನೆ ಎನ್ನುವುದು ವಿದ್ವಾಂಸರ ಅಭಿಪ್ರಾಯ. ಇದರಲ್ಲಿ ರಾಧಾ ಕೃಷ್ಣರ ಬಾಲ್ಯದ ತುಂಟಾಟಗಳ ವಿಸ್ತೃತ ವಿವರಣೆ ಇದೆ.

ರಾಧೆಯ ಪರಿಕಲ್ಪನೆ ಹೆಚ್ಚು ವ್ಯಾಪಕವಾಗಿ ಚಾಲನೆಗೆ ಬಂದದ್ದೆಂದರೆ ಚೈತನ್ಯ ಮಹಾಪ್ರಭುಗಳಿಂದ. ಬಂಗಾಳದಲ್ಲಿನ ಕೃಷ್ಣಭಕ್ತಿ ಚಳುವಳಿಯ ನೇತಾರರಾದ ಇವರನ್ನು ಗೌಡೀಯ ವೈಷ್ಣವ ಧರ್ಮದ ಪ್ರವರ್ತಕರೆಂದೂ ಗುರುತಿಸಲಾಗಿದೆ. ಇದೇ ಪಂಥಕ್ಕೆ ಸೇರಿದ ಜೀವಗೋಪಾಲಸ್ವಾಮಿಗಳು, ಗೋಪಾಲ ಚಂಪು ಕೃತಿಯಲ್ಲಿ ರಾಧೆಯನ್ನು ಅತ್ಯಂತ ಉದಾತ್ತೀಕರಣದೊಂದಿಗೆ ವಿವರಿಸಿದ್ದಾರೆ.

ಚೈತನ್ಯ ಮಹಾಪ್ರಭುಗಳು ರಾಧಾತತ್ವಕ್ಕೆ ಹೆಚ್ಚಿನ ಮಹತ್ವಕೊಟ್ಟು ಜನಪ್ರಿಯ ಗೊಳಿಸುವುದರ ಜೊತೆಗೆ ಅವಳನ್ನು ಆಹ್ಲಾದಿನಿಶಕ್ತಿಯೆಂದು ಭಾವಿಸುವುದರ ಜೊತೆಗೆ ಪ್ರೇಮದಾಹಿನಿಯೂ ಆಗಿದ್ದಾಳೆಂದು ಭಾವಿಸುತ್ತಾರೆ. ಅವರ ದೃಷ್ಟಿಯಲ್ಲಿ ರಾಧಾಕೃಷ್ಣರ ಸಂಬಂಧ ಅವಿಚ್ಛಿನ್ನ-ಅಭಿನ್ನ, ಆದರೆ ಭಿನ್ನಭಿನ್ನವಾಗಿ ಕಾಣಿಸಿಕೊಂಡದ್ದು ಕೇವಲ

ಲೀಲೆಗಾಗಿ! ಅಲ್ಲದೆ ಕೃಷ್ಣ-ರಾಧೆಯರ ಸಂಬಂಧವನ್ನು ಮತ್ತೊಂದು ರೀತಿಯಲ್ಲಿಯೂ ವಿವರಿಸುತ್ತಾರೆ. ಚೈತನ್ಯ ಚರಿತಾಮೃತದಲ್ಲಿ ರಾಧೆಯನ್ನು ಪೂರ್ಣಶಕ್ತಿಯೆಂದು ಮತ್ತು ಕೃಷ್ಣನನ್ನು ಶಕ್ತಿಮಾನನೆಂದು ಅವರಿಬ್ಬರೂ ಬೇರೆ ಬೇರೆ ಎನ್ನಲು ಯಾವ ಶಾಸ್ತ್ರ ಪ್ರಾಮಾಣ್ಯವೂ ಇಲ್ಲವೆಂದು ವಿವರಿಸುತ್ತಾರೆ. ಇದೇ ಸಂದರ್ಭದಲ್ಲಿ ತೆಲುಗು ಭಾಗವತವನ್ನು ಬರೆದ ನಿಂಬಾರ್ಕಾಚಾರ್ಯರು ಉತ್ತರ ಭಾರತಕ್ಕೆ ಹೋಗಿ ಬೃಂದಾವನದಲ್ಲಿ ನೆಲೆಸಿದ್ದು ಮೊಟ್ಟ ಮೊದಲ ಬಾರಿಗೆ ರಾಧಾ-ಕೃಷ್ಣ ಸಂಪ್ರದಾಯಕ್ಕೆ ದಾರ್ಶನಿಕತೆಯ ಸ್ಪರ್ಶವನ್ನು ಅಥವಾ ಅಧ್ಯಾತ್ಮಿಕತೆಯ ನೆಲೆಯನ್ನು ಕಲ್ಪಿಸಿಕೊಟ್ಟರು. ಈ ಒಂದು ತಿರುವು ನಿಜಕ್ಕೂ ಮರೆಯಲಾಗದ ಒಂದು ಸಂಗತಿಯಾಗಿದೆ ಅಲ್ಲಿಂದ ಮುಂದೆ ಹದಿನೈದನೆಯ ಶತಮಾನದಷ್ಟು ಹೊತ್ತಿಗೆ ಸಾಕಷ್ಟು ಪ್ರಾಚುರ್ಯವನ್ನು ಪಡೆಯಿತು ಮತ್ತು ಇಂದಿನವರೆಗೂ ನಡೆಯುತ್ತಲೇ ಮುಂದುವರೆದಿದೆ.

ರಾಧೆಯ ಹುಟ್ಟು ಪೂರ್ವೋತ್ತರಗಳ ಬಗ್ಗೆ ನಡೆದ ಜಿಜ್ಞಾಸೆ. ಅನೇಕ ಅಭಿಪ್ರಾಯಗಳ ಹುಟ್ಟಿಗೆ ದಾರಿಮಾಡಿದೆ.

ಕ್ರಿ.ಶ. ೩ನೇ ಅಥವಾ ೪ನೇ ಶತಮಾನದಲ್ಲಿ ಉತ್ತರ ದಕ್ಷಿಣ ಭಾರತದ ಕವಿಗಳ ನಡುವೆ ಸಾಕಷ್ಟು ಸಾಂಸ್ಕೃತಿಕ ಕೊಳು ಕೊಡುವಿಕೆಯ ಪ್ರಕ್ರಿಯೆ ನಡೆಯಿತು. ಭಾಗವತ ಪುರಾಣಗಳು ತಮಿಳು ಭಾಷೆಯಲ್ಲಿ ರಚನೆಯಾದವು. ಆಳ್ವಾರ್ ಕವಿಗಳು ತಮಿಳು ಭಾಷೆಯಲ್ಲಿ ಹೊಂದಿದ್ದ ಪಾಂಡಿತ್ಯದ ಪ್ರಮಾಣದಷ್ಟೇ ಸಂಸ್ಕೃತ ಭಾಷೆಯಲ್ಲಿಯೂ ಪಡೆದಿದ್ದರು. ಭಾಗವತ ಕಥೆಗಳ ನಿರಂತರ ಸಂಗ್ರಹ ಕಾರ್ಯ ನಡೆಯಿತು ಇದರಿಂದಾಗಿ ಕೃಷ್ಣಕಥೆಗಳು ಸಮೃದ್ಧವಾಗಿ ಎಲ್ಲಾ ಮೂಲಗಳಿಂದ ಬಂದು ಸೇರಿದವು. ಹರಿವಂಶ ಭಾಗವತ, ವಿಷ್ಣುಪುರಾಣ ಇತ್ಯಾದಿಗಳಲ್ಲಿನ ಕಥೆಗಳೂ ಇದ್ದು ಕಾಲ್ಪನಿಕ ದೃಷ್ಟಿಯಿಂದ ಅಭ್ಯಸಿಸಲು ಅನುಕೂಲವಾಯಿತು. ಕಥೆಗಳ ನಡುವಿನ ವ್ಯತ್ಯಾಸಗಳನ್ನು ಗುರುತಿಸಿ ವಿವರಿಸಲು ಸಾಧ್ಯವಾಯಿತು, ತಮಿಳು ಕವಿಗಳು (ಆಳ್ವಾರರು) ತಮ್ಮ ಸಾಹಿತ್ಯದಲ್ಲಿ ವಿವರಿಸಿದ ನಾಪಿನ್ನೈಯನ್ನೇ ರಾಧೆ ಎಂದು ಸಮರ್ಥಿಸಲು ಪ್ರಯತ್ನಿಸಿದರು

ಡಾ. ಎಂ. ಶೇಷನ್ ಎನ್ನುವ ವಿದ್ವಾಂಸರೂ ಚೆನ್ನೈನ ವೈಷ್ಣವ ಕಾಲೇಜಿನ ಪ್ರಾಧ್ಯಾಪಕರೂ ಆಗಿದ್ದವರು ತಮ್ಮ ಹಿಂದಿಯಲ್ಲಿನ ಭಕ್ತಿಸಾಹಿತ್ಯ ಸಂಶೋಧನ ಪ್ರಬಂಧವಾದ "ತಮಿಳ್ ಸಾಹಿತ್ಯಮೆ ಕೃಷ್ಣಕಾವ್ಯಕಿ ಪರಂಪರಾ"ದಲ್ಲಿ ಕೆಲವು ಕುತೂಹಲಕರವಾದ ವಿವರಣೆಗಳನ್ನು ನೀಡಿದ್ದಾರೆ. ಅವರ ವಿವರಣೆಯಲ್ಲಿ ಅಡಿಯಾಳಾನಂದನ್ ಎಂದರೆ ಯಾರು ಇಡೀ ವಿಶ್ವವನ್ನೇ ಎರಡು ಹೆಜ್ಜೆಗಳಲ್ಲಿ ಅಳೆದನೊ ಅವನನ್ನು ತಿರುಮಾಳ್ ಎಂದು ಸಂಬೋಧಿಸಲಾಗಿದೆ ಈ ತಿರುಮಾಳ್ ಎನ್ನುವುದನ್ನು ಮುಲ್ಲೈ (ವನಪ್ರದೇಶ) ಜೊತೆಗೆ ಸಮೀಕರಿಸುತ್ತಾರೆ. ಮುಲ್ಲೈ ಜನಾಂಗದವರ ಮುಖ್ಯವೃತ್ತಿ ಕೃಷಿ ಮತ್ತು ಗೋಸಂಗೋಪನೆ. ಇವರ ಅರಸ ಮಾಯಾನ್ (ಕಪ್ಪು ಎಂದರ್ಥ) (ಆಯಾರ್ ಎಂದೂ ಕರೆಯಲಾಗುತ್ತಿತ್ತು) ಈ ಮಾಯಾನ್ ಮುಂದೆ ಕಣ್ಣನ್ ಎಂದು ರೂಪಾಂತರ ಗೊಂಡಿತಂತೆ. ಕಣ್ಣನ್ ಎಂಬ ಪದ ಪ್ರಯೋಗ ತೆಲುಗು ಹಿಂದಿಗಳಲ್ಲಿ ಕನ್ನಯ್ಯ, ಕಾನ್ಹಾ ಎಂದು ರೂಪಾಂತರಗಳೊಂದಿಗೆ ಇಂದಿಗೂ ಕಾಣ ಕಾಣಸಿಗುತ್ತದೆ.

ಜೀವಕ ಚಿಂತಾಮಣಿ ಎನ್ನುವ ಕೃತಿಯಲ್ಲಿ 'ನಪ್ಪಿನ್ನೈ' ಎನ್ನುವ ಹೆಸರಿನ ಪ್ರಯೋಗವಿದೆ. ತಮಿಳು ವಿದ್ವಾಂಸರ ಪ್ರಕಾರ 'ನಪ್ಪಿನ್ನೈ' ಎನ್ನುವ ಹೆಸರು ದೇವತೆಯೊಬ್ಬಳನ್ನು ನಿರ್ದೇಶಿಸುತ್ತದೆ. ಅಲ್ಲದೆ ಈ ಹೆಸರು ಕೃಷ್ಣನೊಂದಿಗೆ ಹೆಣೆದುಕೊಂಡಿದೆ. ಕೆಲವಡೆ 'ನಪ್ಪಿನ್ನೈ' ಎನ್ನುವುದನ್ನು ಉಪಕೇಶಿ ಎಂದು ನಾಮಾಂತರಿಸಲಾಗಿದೆ. ಟೀಕಾಕಾರ ನೇಮಿನಾಥ ಉಪಕೇಶಿ ಎನ್ನುವುದು 'ನಪ್ಪಿನ್ನೈ'ನ ಮತ್ತೊಂದು ಹೆಸರೇ ಆಗಿದೆ ಎನ್ನುತ್ತಾರೆ. 'ನಪ್ಪಿನ್ನೈ' ಎನ್ನುವುದು ಒಂದು ಗುಣವಾಚಕ. ಇದರ ಅರ್ಥ ಅತ್ಯಂತ ಸುಂದರವಾದ್ದು, ಆಕರ್ಷಕ ಸೌಂದರ್ಯ ಉಳ್ಳದ್ದು ಎಂದೇ ತಮಿಳಿನಲ್ಲಿ ಪ್ರಚಲಿತವಾಗಿದೆ. ಈ 'ನಪ್ಪಿನ್ನೈ' ಯಮುನಾತೀರದಲ್ಲಿ ಕೃಷ್ಣನನ್ನು ಬಹುವಾಗಿ ಆಕರ್ಷಿಸಿ, ಅವನ ಅನನ್ಯ ಭಾಗವಾಗಿ ಅಲ್ಲಿಯೇ ಉಳಿದು ಬಿಟ್ಟಳೆಂಬ ಪ್ರತೀತಿ ಇದೆ.

ಜೀವಕ ಚಿಂತಾಮಣಿಯಲ್ಲಿ ನಪ್ಪಿನ್ನೈ ಮತ್ತು ಕೃಷ್ಣ ಬೇರೆ ಬೇರೆ ಜಾತಿಗಳಿಗೆ ಸೇರಿದವರೆಂದು ವಿವರಿಸಲಾಗಿದೆ. ಇನ್ನೊಂದು ಮಾಹಿತಿಯಲ್ಲಿ ಬೇರೆಯೇ ವಿವರಣೆಯಿದೆ. ನೆಲ್ಲಿನಗರ್ ಅರುಳಳ್ ದಾಸರ್ ಅಥವಾ ವರದರಾಜ ಐಯ್ಯಂಗಾರ್ ತಮ್ಮ ತಮಿಳು ಭಾಗವತದಲ್ಲಿ ನಪ್ಪಿನ್ನೈಯನ್ನು ಯಶೋದೆಯ ತಮ್ಮನ ಮಗಳೆಂದು ಹೇಳಿದೆ ಯಶೋದೆಯ ತಮ್ಮ ಕುಂಭಕ ಮಿಥಿಲೆಯ ಕುರುಬರಾಜನಾಗಿದ್ದನೆಂದೂ ಅವನ ಬಳಿ ಹತೋಟಿಗೆ ಸಿಗದ ಎಂಟು ಎತ್ತುಗಳು ಇದ್ದುವೆಂದೂ ಅವುಗಳನ್ನು ಯಾರು ಪಳಗಿಸುತ್ತಾರೋ ಅವರಿಗೆ ತನ್ನ ಮಗಳಾದ ನಪ್ಪಿನ್ನೈಯನ್ನು ವಿವಾಹ ಮಾಡಿ ಕೊಡುವುದಾಗಿ ಘೋಷಿಸಿದ್ದನೆಂದೂ ಕೃಷ್ಣನು ತನ್ನ ಬಲ ಪರಾಕ್ರಮಗಳಿಂದ ಆ ಎತ್ತುಗಳನ್ನು ಹತೋಟಿಗೆ ತಂದನೆಂದೂ ಆ ಕಾರಣದಿಂದ ತನ್ನ ಮಾತಿನಂತೆ ಕುಂಭಕ ತನ್ನ ಮಗಳನ್ನು ಕೃಷ್ಣನಿಗೆ ವಿವಾಹ ಮಾಡಿಕೊಟ್ಟನೆಂದೂ ವಿವರಿಸಲಾಗಿದೆ. ಆಳ್ವಾರರು ನಪ್ಪಿನ್ನೈ (ನಿಪ್ಪಿನ್ನೈ) ಮತ್ತು ಕೃಷ್ಣ ಕುರಿತಾಗಿ ಸುಂದರವಾದ ಗೀತೆಗಳನ್ನು ರಚಿಸಿದ್ದಾರೆಂದು ತಿಳಿದು ಬಂದಿದೆ ನಪ್ಪಿನ್ನೈಯನ್ನು ಸಂಕ್ಷಿಪ್ತವಾಗಿ ಪಿನ್ನಾ ಪಿನ್ನೆ ಎಂದು ಸಂಬೋಧಿಸಲಾಗಿದೆ. ಸೇಲಂ ಕಡೆ ಹೆಣ್ಣು ಮಕ್ಕಳಿಗೆ 'ನಪೀನಾ' ಎಂಬ ಹೆಸರನ್ನು ಇಡಲಾಗಿದೆ. ಪೆರಿಯ ಆಳ್ವಾರ್ ತಮ್ಮ ರಚನೆಯಲ್ಲಿ ಯಶೋದೆಯ ಬಾಯಲ್ಲಿ ಕೃಷ್ಣನನ್ನು ಪಿನ್ನೈಮನಾಲನ್ (ಪಿನ್ನೈಗಂಡ) ಎಂದು ಕರೆದಿದ್ದಾರೆ.

ಡಾ. ಕೃಷ್ಣನ್ ಅವರು ತಮ್ಮ ಪುಸ್ತಿಕೆಯಲ್ಲಿ ಪಿನ್ನೈಯನ್ನು ಕಿರಿಯ ಸೋದರಿ ಮಿಂಚಿನಂತೆ ಹೊಳೆಯುವವಳು ಸುಂದರವಾದ ಗುಂಗುರು ಕೂದಲು ಉಳ್ಳವಳೆಂದು ಗೋವಳ ವಂಶದವಳೆಂದು ಹಲವು ಅರ್ಥಗಳಲ್ಲಿ ಬಳಸಿರುವುದನ್ನು ಪ್ರಸ್ತಾಪಿಸಿದ್ದಾರೆ. ಅದೇ ಸಂದರ್ಭದಲ್ಲಿ ಸ್ವಾಮಿ ವೇದಾಂತ ದೇಶಿಕರ್ ಅವಳನ್ನು ರಾಧಾ ಪ್ರಜಾಂಗನಾ ಎಂದೂ ಸಂಬೋಧಿಸಿರುವುದನ್ನು ಪ್ರಸ್ತಾಪಿಸಿದ್ದಾರೆ. ನಪ್ಪಿನ್ನೈ ಮತ್ತು ರಾಧಾ ಇಬ್ಬರಲ್ಲಿಯೂ ಹಲವಾರು ಸಾದೃಶ್ಯಗಳಿವೆ. ಇಬ್ಬರೂ ಗೋಪಾಲಕ ಜಾತಿಗೆ ಸೇರಿದವಳು ಇಬ್ಬರೂ ಯಮುನಾ ತೀರವಾಸಿಗಳು ತಮಿಳು ಮತ್ತು ಉತ್ತರ ಭಾರತದ ಸಾಹಿತ್ಯದಲ್ಲಿ ಯಶೋದೆ ಅಥವಾ ನಂದಗೋಪರ ಸಂಬಂಧಿಗಳು. ನೌಕಾಲೀಲ ದಾನಲೀಲ ಪ್ರಸಂಗಗಳು ಎರಡೂ ಭಾಗಗಳಲ್ಲಿನ ಸಾಹಿತ್ಯದಲ್ಲಿ ಕಾಣಿಸಿವೆ. ವಿಷ್ಣು ಪುರಾಣದಲ್ಲಿ ಬರುವ 'ನೈಶ್ಯನೃತ್ಯ'

ವಿವರ, ಶಿಲಪ್ಪಧಿಕಾರಂನಲ್ಲಿ ಬರುವ ಹಲ್ಲೀಸಕಕ್ಕೆ ಸಮಾನವಾಗಿದೆ. ಕೃಷ್ಣ ಅಥವಾ ಕಣ್ಣನ್‌ನನ್ನು ಕುರವೈಕ್ಕೂತ್ತು ನೃತ್ಯಮಾಡಲು ಪ್ರಾರ್ಥಿಸಿಕೊಂಡಾಗ ಅವನು ತನ್ನ ಅಣ್ಣ ಬಲರಾಮ ಮತ್ತು ನಪ್ಪಿನ್ನೈ ಜೊತೆ ನರ್ತಿಸಿದನಂತೆ. ಅದನ್ನೇ ಈಗ ಅಂದರೆ ಅವನು ನರ್ತಿಸಿದ ಎರಡು ನೃತ್ಯಗಳನ್ನು ನೈಶ್ಯನೃತ್ಯ (ಹಲ್ಲೀಸಕ) ಮತ್ತು ಕುರವಕ್ಕೂತ್ತು (ರಾಸಲೀಲಾ) ಎಂದು ಕರೆಯಲಾಗುತ್ತದೆ.

ಮುಂದೆ ಇನ್ನೂ ಕೆಲವರು ವಿದ್ವಾಂಸರು ರಾಧೆಯನ್ನು ಮಹಾಲಕ್ಷ್ಮಿ ಅವತಾರವೆಂದೂ ನೀಳಾದೇವಿ ಅವತಾರವೆಂದೂ ಗುರುತಿಸುತ್ತಾರೆ.

ಇಷ್ಟೆಲ್ಲ ವೈವಿಧ್ಯಮಯ ವಿವರಣೆ ಅಭಿಪ್ರಾಯಗಳ ನಡುವೆ ಹುಟ್ಟಿಕೊಂಡ ರಾಧೆಯ ಸಂಬಂಧ ಕೃಷ್ಣನೊಡನೆ ಅನನ್ಯವಾಗಿ ಬೆಸೆದುಕೊಂಡು ಭಾರತದಲ್ಲಿ ಅಲೌಕಿಕ ಪ್ರೀತಿಯ ರೂಪಕವಾಗಿರುವ ಇವರಿಬ್ಬರ ಸುತ್ತ ಹುಟ್ಟಿಕೊಂಡ ಕಥೆಗಳು ದೇವಾಲಯಗಳಲ್ಲಿ ಅದ್ಭುತ ಶಿಲ್ಪ ಕಲಾಸೃಷ್ಟಿಗೆ ಪ್ರಚೋದನೆಯಾದದ್ದೇ ಅಲ್ಲದೆ, ಭಾರತದ ಎಲ್ಲ ಭಾಷೆಗಳಲ್ಲಿ ರಾಧಾಕೃಷ್ಣ ಸಂಬಂಧವಾಗಿ ಹುಟ್ಟಿಕೊಂಡ ಕಾವ್ಯ, ನಾಟಕ, ಚಿತ್ರಕಲೆ, ಸಂಗೀತಕಲೆ, ನೃತ್ಯಕಲೆಗಳ ಸೃಷ್ಟಿಗೆ ಕೊನೆಯೇ ಇಲ್ಲ. ಕವಿ ನಾಟಕಕಾರನ್ನು ನೃತ್ಯ ಶಿಲ್ಪಕಲಾವಿದರನ್ನು ಆಕರ್ಷಿಸುತ್ತಾ ಅವರವರ ಚೈತನ್ಯವನ್ನು, ಪ್ರಚೋದನೆಯನ್ನು ನೀಡುತ್ತಲೇ ಬಂದಿದೆ ರಾಧಾ–ಕೃಷ್ಣ ಪರಿಕಲ್ಪನೆ.

ದೇಶದ ಎಲ್ಲಾ ಪ್ರಾದೇಶಿಕ ಭಾಷೆಗಳಲ್ಲಿ ರಾಧಾ–ಕೃಷ್ಣ ಸಾಹಿತ್ಯ ಸೃಷ್ಟಿ ಅಪಾರ ವಾಗಿರುವಂತೆ, ಕನ್ನಡ ಸಾಹಿತ್ಯ ಪ್ರತಿಭೆಗಳನ್ನು ರಾಧಾ–ಕೃಷ್ಣ ಸಂಬಂಧ ಸಾಹಿತ್ಯಸೃಷ್ಟಿಗೆ ಮುಂದಾಗಿಸಿದೆ. ಆದರೂ ಎಲ್ಲೆಲ್ಲಿ ಕೃಷ್ಣಭಕ್ತಿ ಚಳುವಳಿ ಪ್ರಬಲವಾಗಿತ್ತೋ, ಅಲ್ಲೆಲ್ಲ ಅಂದರೆ ದಕ್ಷಿಣ ಭಾರತಕ್ಕಿಂತ ಉತ್ತರ ಭಾರತದಲ್ಲಿನ ದೇವಾಲಯಗಳ ವಾಸ್ತುಶಿಲ್ಪದ ಅನನ್ಯಭಾಗವಾಗಿ ಈ ರಾಧಾ–ಕೃಷ್ಣ ಪ್ರೇಮ ಪ್ರಸಂಗಗಳು, ಕೃಷ್ಣಲೀಲೆಗಳು ಅದರಲ್ಲಿಯೂ ರಾಸಲೀಲೆಗಳು ಅದ್ಭುತ ಕೆತ್ತನೆಯ ಭಾಗವಾಗಿ ಹೃದಯ ಸ್ಪರ್ಶಿಯಾಗಿವೆ. ರಾಧಾ–ಕೃಷ್ಣಮೂರ್ತಿಗಳು ಹೇರಳವಾಗಿ ಕಾಣಿಸುತ್ತವೆ. ವೈಷ್ಣವ ಪಂಥದ ಆರಾಧಕರು, ತಮ್ಮ ತಮ್ಮ ನಿತ್ಯ ಪೂಜೆಯಲ್ಲಿ ರಾಧಾ–ಕೃಷ್ಣಮೂರ್ತಿಗಳನ್ನು ಇರಿಸಿಕೊಂಡಿದ್ದಾರೆ.

ದಕ್ಷಿಣದಲ್ಲಿ ರಾಧಾಮಂದಿರಗಳು ಕಾಣುವುದೇ ಬಹಳ ಅಪರೂಪ ಇಸ್ಕಾನ್, ಬಿರ್ಲಾ ಮಂದಿರಗಳಲ್ಲಿ ಇವುಗಳೇ ಪ್ರತಿಷ್ಠಾಪನೆಗೊಂಡಿರುವುದು ಕಾಣಿಸುತ್ತದೆ. ಎಲ್ಲೆಲ್ಲಿ ಕೃಷ್ಣಮಂದಿರಗಳು ಇವೆಯೋ ಅಲ್ಲೆಲ್ಲ ಅನಿವಾರ್ಯವಾಗಿ ಕಡ್ಡಾಯವಾಗಿ ರಾಧಾಮೂರ್ತಿಗಳೂ ಕಾಣುತ್ತವೆ ಉತ್ತರಭಾರತದಲ್ಲಿ.

ಸಂಸ್ಕೃತದಲ್ಲಿ ಕೃಷ್ಣಕಾವ್ಯಗಳು ಕೃಷ್ಣಕರ್ಣಾಮೃತ (ಲೀಲಾಶುಕ. ೧೧ನೆಯ ಶ.) ಕೃಷ್ಣಲೀಲಾ ತರಂಗಿಣಿ. ಗೀತಗೋವಿಂದ, ಕೃಷ್ಣಕೇಂದ್ರಿತ ಗೀತನಾಟಕಗಳಾದ ರುಕ್ಮಿಣೀಹರಣ, ಕಾಲಿಯದಮನ. ಪಾರಿಜಾತಹರಣ, ರಾಸಕ್ರೀಡಾ ಇತ್ಯಾದಿ ಕೃತಿಗಳನ್ನು ಶಂಕರದೇವನು ಅಸ್ಸಾಮಿ ಭಾಷೆಯಲ್ಲಿ ರಚಿಸಿದ್ದಾನೆ. ತ್ಯಾಗರಾಜರು ಕೃಷ್ಣ–ಗೋಪಿಕೆಯರ ನೌಕಾವಿಹಾರದ ಪ್ರಸಂಗವನ್ನಾಧರಿಸಿ ನೌಕಾಚರಿತ್ರಮ್ ಎಂಬ ಗೀತನಾಟಕ ಬರೆದಿದ್ದಾರೆ.

ಕನ್ನಡಕ್ಕೆ ಬರುವುದಾದರೆ ಕನ್ನಡದ ನವೋದಯ ಕವಿಗಳ ಸಾಲಿನಲ್ಲಿ ಮಹತ್ವದ ಕವಿಯೆಂದು ಗುರುತಿಸಿಕೊಂಡಿರುವ ಪು.ತಿ.ನ. ಅವರಂತೂ ಕೃಷ್ಣಭಕ್ತಿ ಕೃಷ್ಣಪ್ರೀತಿಯನ್ನು ತಮ್ಮ ಬದುಕಿನ ಅವಿಚ್ಛಿನ್ನ ಭಾಗವಾಗಿಸಿಕೊಂಡು ಹಲವು ರೀತಿಯಲ್ಲಿ ಬಿಡಿ ಕವನಗಳಾಗಿ ಗೀತನಾಟಕವಾಗಿ ಮಹಾಕಾವ್ಯವಾಗಿ ಕೃಷ್ಣನ ಅಲೌಕಿಕ ವ್ಯಕ್ತಿತ್ವವನ್ನು ಕಡೆದಿರಿಸಿದ್ದಾರೆ. ಇವರಿಗೂ ಮೊದಲು ತಿರುಕರು, ಸಮೇತನಹಳ್ಳಿ ರಾಮರಾಯರು ಕೃಷ್ಣ ಪ್ರಸಂಗಗಳನ್ನು ಆಧರಿಸಿ ನಿಷ್ಕಾಮ ಪ್ರೇಮ, ರಾಸಲೀಲೆ ಗೀತನಾಟಕಗಳನ್ನು ರಚಿಸಿರುವರಾದರೂ ದೊಡ್ಡ ಪ್ರಮಾಣದಲ್ಲಿ ಕೃಷ್ಣಸಾಹಿತ್ಯಕ್ಕೆ ಕೊಡುಗೆ ನೀಡಿದವರೆಂದರೆ ಪುತಿನ ಮಾತ್ರವೇ! ಇವರ ಮಹಾಕಾವ್ಯವಾದ ಶ್ರೀಹರಿಚರಿತೆ, ಗೋಕುಲ ನಿರ್ಗಮನ–ಎರಡೂ ಕೃತಿಗಳಲ್ಲಿ ರಾಧಾ–ಕೃಷ್ಣರ ಪ್ರಸ್ತಾಪವಿದೆ, ವಿವರಣೆಯೂ ಇದೆ. ಇಲ್ಲಿ ರಾಧಾ ಪಾತ್ರ ಕಾಣಿಸಿಕೊಳ್ಳುತ್ತದೆ. ಶ್ರೀ ಹರಿಚರಿತೆಯಲ್ಲಿ ರಾಧಾದರ್ಶನಂ ರಾಧಾ–ಕೃಷ್ಣ ಸಂಗತಿ, ರಾಧಾ–ಕೃಷ್ಣ ಮಿಲನಂ ಎಂದು ಮೂರು ಅಧ್ಯಾಯಗಳು ಬರುತ್ತವೆ. ಇವುಗಳಲ್ಲಿ ಸಾಕಷ್ಟು ವಿವರಣೆ 'ರಾಧೆ' ಕುರಿತಾಗಿಯೇ ಇದೆ. ರಾಧೆಯ ಕುರಿತು ಸಾಕಷ್ಟು ಮಾಹಿತಿ ಸಂಗ್ರಹಿಸಿರುವುದು ಇಲ್ಲಿ ಗೋಚರವಾಗುತ್ತದೆ. ಭಾಗವತದಲ್ಲಿನ ಪ್ರಸಂಗಗಳನ್ನು ಬಳಸಿಕೊಂಡಿದ್ದಾರೆ. ಅಲ್ಲದೆ ಅದೇ ಅವರಿಗೆ ಅತ್ಯಂತ ಅಮೂಲ್ಯ ಆಕರ. ಹರಿಚರಿತೆಯಲ್ಲಿ ರಾಧಾ ಚಿಂತನೆಯನ್ನು ಗಂಭೀರ ನೆಲೆಯಲ್ಲಿ ನಡೆಸಿದ್ದಾರೆ.

ರಾಧಾ ಪರಿಕಲ್ಪನೆ ಬಗ್ಗೆ ಎಲ್ಲ ವಿದ್ವಾಂಸರು ಜಿಜ್ಞಾಸೆ ನಡೆಸಿದಂತೆ ಪುತಿನ ಅವರೂ ಕೂಡ ಮೊದಲಿಗೆ, "ಗೋವ್ರಜದೊಳಾವಳು ರಾಧೆ? ಎಲ್ಲಿಹಳು? ಮಾವನ ಮಗಳು? ಕನ್ನೆಯೋ? ಕುಟುಂಬಿನಿಯೋ? ಬಲ್ಲವರಾರ್ ಆ ಹರಿವಲ್ಲಭೆಯ? ಇತಿಹಾಸ ಬದ್ಧಳೊ ಕವಿ ಕಲ್ಪನಾವಿಭೂತಳೊ? ವಿಶ್ವವಲ್ಲಭಗುಂಟೆ ಪ್ರಣಯಿನೀಪಕ್ಷಪಾತಂ, ಶುಕಮುನಿಯರಿಯ ವ್ಯಾಸನುಮರಿಯನಾ ಪ್ರಣಯ ಪ್ರಸಂಗಮನು! ಆದೊಡೆ ರಾಧೆ ಶ್ರೀಹರಿಯೊಲವ ಸೂರೆಗೊಂಡಾ ಹೆಣ್ಣು! ರಾರಾಜಿಸಿದಳು ಹರಿಭಕ್ತ ಮಾನಸದೊಳುಜ್ವಲ ತರುಣಿ! ದಿವ್ಯ ಪ್ರೇಮಾಯತನ ಮಾರ್ಗಮೀಕೆಯ ಕೃಷ್ಣ ಕಾಮಂ!" ಎಂದು ಬಣ್ಣಿಸುವಾಗ ಕವಿಗೆ ಅವಳ ಮೂಲ ಹುಟ್ಟು ಪೂರ್ವೋತ್ತರಗಳನ್ನು ತಿಳಿಯಬೇಕೆಂಬ ಹಂಬಲಕ್ಕಿಂತ ಕೃಷ್ಣನ ಬಗೆಗಿನ ಅದಮ್ಯ ಪ್ರೀತಿಯನ್ನು ವೈಭವೀಕರಿಸಿ, ಉದಾತ್ತೀಕರಿಸಿ ತನ್ಮಯತೆಯೊಂದಿಗೆ ಅದ್ಭುತವಾದ ರೀತಿಯಲ್ಲಿ ರಾಧೆಯನ್ನು ಶಬ್ದಶಿಲ್ಪವಾಗಿ ಕಡೆದಿರಿಸಿದ್ದಾರೆ.

ಇವರ ವಿವರಣೆಯಲ್ಲಿ ರಾಧೆ ಷೋಡಶಿ, ಸುಬಲ ದಂಪತಿಗಳ ಮಗಳು. ಅತ್ಯಂತ ಸೌಂದರ್ಯವತಿ, ಕೃಷ್ಣ ಪ್ರೀತಿಗಾಗಿ ಹಂಬಲಿಸುತ್ತಿದ್ದಾಳೆ ಕಾತ್ಯಾಯಿನಿ ಪೂಜೆಗೈದ ಗೋಪಿಕೆಯರಿಂದ ಕೃಷ್ಣನ ತುಂಟಾಟಗಳನ್ನು ಬಣ್ಣಿಸಿ, ಅವಳ ವಿರಹದುರಿಯನ್ನು ಮತ್ತಷ್ಟು ಪ್ರಜ್ವಲಿಸುವಂತೆ ಮಾಡುತ್ತಾರೆ. ಕಡೆಗೆ, ಕೃಷ್ಣ–ರಾಧೆಗಾಗಿ ಹಂಬಲಿಸುವುದು ನಿಂತು ಇಬ್ಬರ ಸಮಾಗಮವಾಗುತ್ತದೆ. ರಾಧೆಗಂತೂ ಭವ ದೂರತ್ವದ ಅನುಭವವಾಗುತ್ತದೆ.

ಇದೇ ಕವಿ ಗೋಕುಲ ನಿರ್ಗಮನದಲ್ಲಿ ರಾಧಾ–ಕೃಷ್ಣರ ಪ್ರೇಮದ ಉತ್ಕಟ ಕ್ಷಣಗಳನ್ನು ಸತ್ವಯುತವಾಗಿ ಮತ್ತು ಮನೋಹರವಾಗಿ ಚಿತ್ರಿಸಿದ್ದಾರೆ. ರಾಧೆ ಇಲ್ಲಿ

ಗೋಕುಲದಲ್ಲಿ ಇರುವವಳೇ! ಹರಿಚರಿತೆಯಲ್ಲಿ ಸುಬಲನ ಮಗಳೆಂದಿದ್ದರೆ ಇಲ್ಲಿ ಸುದಾಸನ ಮಗಳೆಂದಿದ್ದಾರೆ. ಸುದಾಸ ತನ್ನ ಮಗಳ ಮತ್ತು ಕೃಷ್ಣನ ಸಲುಗೆಯ ಒಡನಾಟದಿಂದ ಅಪಕೀರ್ತಿಯ ಭೀತಿಗೆ ಒಳಗಾಗಿ ಬೇಸರಗೊಂಡರೂ ಕೃಷ್ಣನ ಮುರಳೀನಾದದ ವಶೀಕರಣಕ್ಕೆ ಖುದ್ದು ತಾನೇ ಒಳಗಾಗಿ ರಾಧೆಯು ಅವನಗೆ ವಶವಾದದ್ದರಲ್ಲಿ ಆಶ್ಚರ್ಯ ವಿಲ್ಲವೆಂದು ಮೆದುವಾಗುತ್ತಾನೆ.

ಇಲ್ಲಿ ಕವಿ ರಾಧಾ-ಕೃಷ್ಣರ ಅನನ್ಯ ಪ್ರೇಮವನ್ನು ಅದ್ವೈತದ ಸ್ಥಿತಿಗೆ ಕೊಂಡೊಯ್ಯುತ್ತಾರೆ. ರಾಧಾ-ಕೃಷ್ಣರ ಪರಸ್ಪರಾನುರಾಗದಿಂದ ಹುಟ್ಟಿದ ಆನಂದ ವಿಶ್ವಾನಂದದಲ್ಲಿ ಪರಿಸಮಾಪ್ತಿಯಾಗುವಂತೆ ಚಿತ್ರಿಸಿದ್ದಾರೆ.

ಹೀಗೆ ರಾಧೆ ಕೃಷ್ಣನ ಅನನ್ಯ ಭಾಗವಾಗಿ ವಾಗರ್ಥಗಳಂತೆ ಬೆಸೆದು ಕೊಂಡಿದ್ದರೂ ರಾಧೆಯ ವಿಚಾರವಾಗಿ ಸ್ಪಷ್ಟವಾದ ವಿವರಗಳಾಗಲೀ, ಕೃಷ್ಣ ಮಧುರೆಗೆ ಹೋದನಂತರ ರಾಧೆಯ ಸ್ಥಿತಿ ಏನಾಯಿತೆಂಬುದಾಗಲೀ, ಯಾರ ಲಕ್ಷ್ಯಕ್ಕೂ ಬಂದ ಹಾಗಿಲ್ಲ. ರಾಧೆ ಕೃಷ್ಣನ ಪ್ರೇಯಸಿಯೇ ಹೊರತು ಅವನನ್ನು ವಿವಾಹವಾದವಳಲ್ಲ. ಜೊತೆಗೆ ಕೃಷ್ಣನೂ ಕೂಡಾ ತನ್ನ ಮುಂದಿನ ಬದುಕಿನಲ್ಲಿ ರಾಧೆಯನ್ನು ಕುರಿತು ಎಂದೂ ಎಲ್ಲಿಯೂ ಚಿಂತಿಸಿದ್ದಿಲ್ಲ.

ಇದೇ ಸಂಬಂಧದಲ್ಲಿ ೨೦ನೇ ಶತಮಾನದ ತೊಂಬತ್ತರ ದಶಕದಲ್ಲಿ ಬಾಬಾ ಗೇಹೀರಾಮಜಿ ಮಹಾರಾಜ್ ಅವರು ಮಹಾನ್ ಕೃಷ್ಣ ಭಕ್ತರು. ಭಜನೆ, ಸಂಕೀರ್ತನೆ ಉಪನ್ಯಾಸಗಳ ಜೊತೆಗೆ ಶ್ರೀರಾಧಾಕಾ ನ್ಯಾಯ್ ಎಂಬ ನಾಟಕವನ್ನು ಆಡಿಸುತ್ತಿದ್ದರಂತೆ. ಆ ನಾಟಕದಲ್ಲಿ ರಾಧೆಯೇ ಕೇಂದ್ರ, ಆಕೆಯನ್ನು ಮಹಾರಾಣಿಯನ್ನಾಗಿ ಬಿಂಬಿಸಲಾಗಿದೆ. ರಾಜ್ಯದಲ್ಲಿ ಸುಖ, ಶಾಂತಿ ನೆಮ್ಮದಿಗಳ ವಿಚಾರವಾಗಿ ದಿನಂಪ್ರತಿ ವರದಿ ತರಿಸಿಕೊಳ್ಳುತ್ತಿದ್ದಾಗ ಒಮ್ಮೆ ಕೃಷ್ಣನೆಂಬ, ನಂದಬಾಬನ ಏಕಮಾತ್ರ ಪುತ್ರನ ಪುಂಡಾಟಿಕೆಗಳ ಬಗ್ಗೆ ರಸಿಕದಾಸಿಯೊಬ್ಬಳು ದೂರಿತ್ತಾಗ ಅದನ್ನು ಸಮರ್ಥಿಸಲು ಸಾಕ್ಷಿಗಳನ್ನು ಕರೆಸಲಾಗುತ್ತದೆ. ಅವನ ಮೇಲಿನ ದೂರುಗಳು ದೂರುಗಳೇ ಅಲ್ಲ ಎನ್ನುವುದು ಸಾಬೀತಾಗುತ್ತದೆ. ಜೊತೆಗೆ ಅವನ ತುಂಟಾಟಗಳು ಪುಂಡಾಟಗಳು ಪುಂಡಾಟಗಳೇ ಅಲ್ಲ. ಅಷ್ಟೇ ಅಲ್ಲ ಅವನು ಸಾಧಾರಣ ಮನುಷ್ಯನೇ ಅಲ್ಲ. ಪರಾತ್ಪರತತ್ವ ಪರಮೇಶ್ವರ. ಅವನ ಎಲ್ಲ ಚಟುವಟಿಕೆಗಳಲ್ಲಿ ಉದಾರತೆ, ಸೌಶೀಲ್ಯ, ಸರಳತೆ, ಕೃಪಾರ್ದ್ರತೆ, ಜನವತ್ಸಲತೆ, ಆರ್ತ ಬಂಧುತ್ವ, ದಿವ್ಯ ಸೌಂದರ್ಯ, ಸಮರ್ಥತೆ ಇತ್ಯಾದಿ ಲೋಕೋತ್ತರ ಗುಣಗಳಿಂದ ಪರಿಪೂರ್ಣವಾಗಿದ್ದು, ಭಕ್ತರ ಭಾವವಶನಾಗಿ ಅವರು ನಿರೀಕ್ಷಿಸುವ ಸುಖಾನುಭೂತಿಯನ್ನು ಕೊಡಲು ಹಲವು ರೂಪಗಳಲ್ಲಿ ತನ್ನ ಲೀಲೆಗಳನ್ನು ತೋರುತ್ತಿದ್ದಾನೆ. ಬೆಣ್ಣೆ ಕದಿಯುವುದು, ಗೋಪಿಕೆಯರನ್ನು ಅಡ್ಡಗಟ್ಟುವುದು, ವಸ್ತ್ರ ಕದಿಯುವುದು, ಮುರಳೀನಾದದಿಂದ ಮೋಹಿತರನ್ನಾಗಿ ಮಾಡುವುದು, ಇವೆಲ್ಲವೂ ಇವನ ಪ್ರೀತಿಯ ಲೀಲೆಗಳು. ಆದ್ದರಿಂದ ಇವನು ನಿರಪರಾಧಿ ಎಂದು ತೀರ್ಪು ನೀಡಲಾಯಿತು. ಇದೊಂದು ರೀತಿಯಲ್ಲಿ ನಿಂದಾಸ್ತುತಿ ಶೈಲಿಯಲ್ಲಿ ಕೃಷ್ಣ ಪಾರಮ್ಯ ಮತ್ತು ಹಿರಿಮೆಯನ್ನು ಎತ್ತಿ ಹಿಡಿಯುವುದಾಗಿದೆ.

ರಾಧೆಯ ಚರಿತ್ರೆ ನಿಗೂಢ. ಎಲ್ಲ ವಿದ್ವಾಂಸರು, ಪುರಾಣ ಕರ್ತೃಗಳು, ಭಾಗವತ ರಚನಕಾರರು, ಕವಿ, ನಾಟಕಕರರು, ಕೃಷ್ಣಭಕ್ತರು ಎಲ್ಲರೂ ತಮ್ಮ ತಮ್ಮ ವಿಚಾರ, ತರ್ಕ, ಕಲ್ಪನೆ, ದರ್ಶನಗಳಿಗೆ ತಕ್ಕಂತೆ ರಾಧೆಯನ್ನು ಸೃಷ್ಟಿಸಿದ್ದಾರೆ. ಅವಳ ವ್ಯಕ್ತಿತ್ವ, ಕೃಷ್ಣ ಪ್ರೀತಿಯ ಅನನ್ಯತೆಯನ್ನು ವರ್ಣಮಯವಾಗಿ ರೋಚಕವಾಗಿ ಚಿತ್ರಿಸಿದ್ದಾರೆ. ಕೃಷ್ಣನಿದ್ದಲ್ಲಿ ರಾಧೆ ಎನ್ನುವುದನ್ನು ಮುಕ್ತ ಮನಸ್ಸಿನಿಂದ ಒಪ್ಪಿಕೊಂಡಿದ್ದಾರೆ. ಕೃಷ್ಣನ ಜೊತೆಯಲ್ಲಿ ಅವಳನ್ನೂ ದೈವತ್ವಕ್ಕೆ ಏರಿಸಿ ಪೂಜಿಸುತ್ತಿದ್ದಾರೆ, ಆರಾಧಿಸುತ್ತಿದ್ದಾರೆ ಮತ್ತು ಮಧುರ ಭಕ್ತಿಯ ನೆಲೆಯಲ್ಲಿ ತಮ್ಮನ್ನೂ ರಾಧೆಯಾಗಿ ಪರಿಭಾವಿಸಿಕೊಂಡಿದ್ದಾರೆ.



# 'ರಕ್ತವದನಂ' – ಒಂದು ಅವಲೋಕನ



**ಎಸ್. ಬಿಳಿಗಿರಿವಾಸನ್**

ಕುರುಭೂಭೃತ್‌ಚಲ ತೂಲಕೂಲಪವನಂ ಕೌರವ್ಯಗಂಧೇಭಕೇ
ಸರಿ ದುಶ್ಯಾಸನರಕ್ತರಕ್ತವದನಂ ದುರ್ಯೋಧನೋರುಕ್ಷಮಾ
ಧರ ವಜ್ರಂ ಕುರುರಾಜರತ್ನಮಕುಟೋತ್ಕೂಟಾಂಘ್ರಿಸಂಘಟ್ಟಸಂ
ಗರನೆಂದೆಂದಭಿವರ್ಣಿಪೆಂ ರಣಯಶಃಶ್ರೀರಾಮನಂ ಭೀಮನಂ ॥

–ರನ್ನ ಕವಿಯ 'ಗದಾಯುದ್ಧ ಸಂಗ್ರಹಂ', ಸಂ. ತೀ.ನಂ.ಶ್ರೀ.

ಈ ಪದ್ಯವು ಪ್ರೊ. ಟಿ.ಎಸ್. ವೆಂಕಣ್ಣಯ್ಯನವರು, ಬಿ.ಎಂ. ಶ್ರೀಯವರು, ಎ.ಆರ್. ಕೃಷ್ಣಶಾಸ್ತ್ರಿಗಳು, ಜಿ.ಪಿ. ರಾಜರತ್ನಂ ಅವರಾದಿಯಾಗಿ ಇತ್ತೀಚಿನ ಸಾಹಿತ್ಯ ವಿದ್ಯಾರ್ಥಿಗಳವರೆಗೂ ಚಿರಪರಿಚಿತವಾಗಿರುವಂತಹುದು, ಪಾಠ ಹೇಳಿರುವಂತಹುದು, ಶಿಷ್ಯಪ್ರಶಿಷ್ಯರಾದಿಯಾಗಿ ನಡೆದು ಬಂದಿರುವಂತಹುದು. ಈ ಪದ್ಯದಲ್ಲಿರುವ ವಿಶೇಷವೊಂದು ಈ ಸಾಹಿತ್ಯ ದಿಗ್ಗಜಗಳ ಕಣ್ತಪ್ಪಿಸಿಕೊಂಡಿರುವುದು ಅಚ್ಚರಿಯನ್ನುಂಟು ಮಾಡುವಂತಹುದು.

ಒಮ್ಮೆ ಜಿ.ಪಿ. ರಾಜರತ್ನಂ ಅವರು ಚಿತ್ರದುರ್ಗದಲ್ಲಿ ಯಾವುದೋ ಕಾರ್ಯಕ್ರಮದಲ್ಲಿ ಹೋಗಿದ್ದಾಗ ವುಂತಕಲ್ ಶ್ರೀನಿವಾಸರಾವ್ ಎಂಬ ಪೆಟ್ರೋಲ್ ಬಂಕ್ ಮಾಲೀಕರ ಮನೆಯಲ್ಲಿ ತಂಗಿದ್ದರು. ಅಂದಿನ ಮಧ್ಯಾಹ್ನ ಊಟವಾದ ನಂತರ ಮಾತನಾಡುತ್ತ ವಿಶ್ರಾಂತಿಯಲ್ಲಿದ್ದಾಗ ಶ್ರೀನಿವಾಸರಾಯರು ಮೇಲಿನ ಪದ್ಯವನ್ನು ಉದ್ಧರಣ ಮಾಡಿ 'ದುಶ್ಯಾಸನರಕ್ತರಕ್ತವದನಂ ಎಂದರೇನು ?' ಎಂಬ ಪ್ರಶ್ನೆಯನ್ನು ಎತ್ತಿದರು.

ಆಗ ರಾಜರತ್ನಂ ಅವರು 'ವಿಶೇಷವೇನಿದೆ? ಭೀಮನ ಮುಖಕ್ಕೆಲ್ಲ ದುಶ್ಯಾಸನನ ರಕ್ತ ಬಳಿದುಕೊಂಡಿತ್ತು. ದುಶ್ಯಾಸನರಕ್ತರಕ್ತವದನಂ ಇಷ್ಟೆ ತಾನೆ ಎಂದರು.'

ಶ್ರೀನಿವಾಸರಾಯರು 'ನೋಡೀ ನನಗೇಕೋ ಇದು ಅನುಮಾನವಾಗಿ ಕಾಣುತ್ತೆ' ಎನ್ನುವರು. ರಾಜರತ್ನಂ ಅವರಿಗೆ ಸಹನೆ ಉಳಿಯದೆ ಇಂತಹ ಸರಳವಾದ, ನೇರವಾದ

ವಿಷಯುವಾದಾಗ ಇವರೇಕೆ ಹೀಗೆ ಅಡ್ಡಪ್ರಶ್ನೆ ಎತ್ತಿದ್ದಾರೆ ಎಂದುಕೊಂಡು 'ಶ್ರೀನಿವಾಸರಾಯರೇ ನೀವೇ ಹೇಳಿ ಇದರಲ್ಲಿ ಅಂತಹ ರಹಸ್ಯ ಏನಿದೆ ?' ಎಂದರು.

'ಸ್ವಾಮಿ, ನಾನು ಅಷ್ಟು ತಿಳಿದವನಲ್ಲ ಅದರಲ್ಲೂ ನಿಮಗೆ ಹೇಳಲು ನಾನೆಷ್ಟರವನು. ನನಗೇಕೋ ಅನುಮಾನವಾಯ್ತು ತಮ್ಮಲ್ಲಿ ಪರಿಹಾರ ಸಿಕ್ಕೀತೆಂದು ಕೇಳಿದೆ' ಎಂದು ಮೌನವಾಂತರು.

ಕಡೆಗೆ ರಾಜರತ್ನಂ ಅವರು 'ಶ್ರೀನಿವಾಸರಾವ್ ನೀವು ಹೇಳಿ ಅಥವಾ ನಾನು ಹೇಳುವುದನ್ನು ಸುಮ್ಮನೆ ಒಪ್ಪಿಕೊಳ್ಳಿ' ಎಂದು ಬಾಯಿ ಬಡಿದರು.

ಆಗ ರಾಯರು 'ಸಾರ್ ಬೇಸರ ಪಡಬೇಡಿ. ನನ್ನ ಸಂಶಯಕ್ಕೆ ಕಾರಣ ಹೇಳ್ತೀನಿ ದಯವಿಟ್ಟು ಕೇಳಿ' ಎಂದು ಮುಂದುವರೆಸುತ್ತಾ 'ಕುರುಭೂಭೃತ್‌ಚಲ ತೂಲಕೂಲಪವನಂ ಕೌರವ್ಯಗಂದೇಭ–ಕೇಸರಿ–ದುರ್ಯೋಧನೂರು ಕ್ಷಮಾಧರ–ವಜ್ರದಂಡಂ' ಹೀಗೆ ಹೋಲಿಕೆಯ ಸರಣಿ ಸಾಗುತ್ತದೆ.

"ಕೌರವನ ಬಲ ಒಂದು ಹಕ್ಕಿಯ ಗರಿ–ಭೀಮ ಕಾಲಪವನ ; ಕೌರವ ಕುಲದ ಕೀರ್ತಿ ಎಂಬುದು ಒಂದು ಆನೆ. ಅದಕ್ಕೆ ಭೀಮ ಸಿಂಹವಿದ್ದಂತೆ ; ದುರ್ಯೋಧನನ ಊರುಗಳು (ತೊಡೆಗಳು) ಬೆಟ್ಟಕ್ಕೆ ಸಮಾನವಾದರೆ–ಭೀಮ ವಜ್ರಾಯುಧವಿದ್ದಂತೆ– ಹೀಗೆ ಒಂದು ಅಬಲವಾದದ್ದು. ಅದಕ್ಕೆ ವಿರುದ್ಧವಾಗಿ ಮತ್ತೊಂದು ಪ್ರಬಲವಾದದ್ದು ಹೀಗೆ ರನ್ನ ಹೇಳಿಕೊಂಡೇ ಬಂದಿದ್ದಾನೆ. ಹಾಗೆಯೇ ದುಶ್ಯಾಸನನ ರಕ್ತಕ್ಕೆ ರಕ್ತವದನಂ ಎಂಬುದು ಅದಕ್ಕಿಂತಲೂ ಪ್ರಬಲವಾದ ವಿರೋಧವಾದ ಮತ್ತೇನೋ ಒಂದು ಇರಲೇಬೇಕಲ್ಲವೇ, ಅದನ್ನು ಬಿಟ್ಟು ಸುಮ್ಮನೆ 'ರಕ್ತವನ್ನು ಮುಖಕ್ಕೆ ಬಳಿದುಕೊಂಡಿದ್ದ' ಎಂದುಬಿಟ್ಟರೆ ಮೇಲೆ ಎಲ್ಲ ಕಡೆಯೂ ಬಂದಿರುವ ಜೋಡಣೆಯ ಸರಣಿ ಇಲ್ಲಿ ತಪ್ಪಿ ಹೋಗುವುದಿಲ್ಲವೇ ಎಂದರು."

ಆಗ ರಾಜರತ್ನಂ ಅವರಿಗೆ 'ಈ ಪೆಟ್ರೋಲ್ ಮಾರೋ ವ್ಯಕ್ತಿಗೆ ಹೊಳೆದ ಈ ಅನುಮಾನ ನಮ್ಮ ಗುರುಗಳಾದ ವೆಂಕಣ್ಣಯ್ಯ, ಬಿ.ಎಂ.ಶ್ರೀ., ಎ.ಆರ್. ಕೃಷ್ಣಶಾಸ್ತ್ರಿಗಳಿಗಾಗಲೀ ನನಗಾಗಲಿ ಏಕೆ ಹೊಳೀಲಿಲ್ಲ. ಈಚಿನ ಯಾರಿಗಾದರೂ ಈ ಯೋಚನೆ ಬರಲೇ ಇಲ್ಲವಲ್ಲ' ಎಂದು ನಿಟ್ಟುಸಿರು ಬಿಟ್ಟರು.

ಪರಾಭವವನ್ನು ಒಪ್ಪಿಕೊಂಡ ರಾಜರತ್ನಂ ಅವರು ಬೆಂಗಳೂರಿಗೆ ಹಿಂದಿರುಗಿದರು. ಎಲ್ಲಾ ಗ್ರಂಥಾಲಯಗಳನ್ನು ಜಾಲಾಡಿದರು. ಮೈಸೂರಿನ ಗಂಗೋತ್ರಿಯನ್ನು ಪ್ರದಕ್ಷಿಣೆ ಮಾಡಿ ಬಳಲಿದರು. ಅಂತಿಮವಾಗಿ ಮದರಾಸಿಗೆ ಹೋದಾಗ ಓರಿಯಂಟಲ್ ಲೈಬ್ರರಿಯಲ್ಲಿ ಹುಡುಕಿದ ಮೇಲೆ ಒಂದು ಹಳೆಯದಾದ ಸಂಸ್ಕೃತ–ಸಂಸ್ಕೃತ–ಇಂಗ್ಲಿಷ್ ನಿಘಂಟು ದೊರೆಯಿತು. ಅದರಲ್ಲಿ "ರಕ್ತವದನ : ರಕ್ತಮುಖ ; ಲೀಚ್ (ಜಿಗಣೆ = ಇಂಬಳು, ನೀರಲ್ಲೂ ಕಾಡುಗಳಲ್ಲೂ ವಾಸಿಸುವ ರಕ್ತಹೀರುವ ಒಂದು ಜಾತಿ ಹುಳು) ಎಂದು ಬರೆದಿತ್ತು. ಅದರ ಪಕ್ಕದಲ್ಲಿ ಜಿಗಣೆಯ ಚಿತ್ರವೂ ಇತ್ತು. ರಾಜರತ್ನಂ

ದೊಡ್ಡಭಾರದಿಂದ ಬಿಡುಗಡೆಯಾದ ನಿಟ್ಟುಸಿರು ಬಿಟ್ಟು ಉಲ್ಲಾಸದಿಂದ ಬೆಂಗಳೂರಿಗೆ ಹಿಂತಿರುಗಿದರು.

'ದುರ್ಯೋಧನಾದಿಗಳು ಭೀಮನ ಮೇಲಿನ ವಿನಾಕಾರಣವಾದ ದ್ವೇಷದಿಂದ ಅವನನ್ನು ಪ್ರವಾಹಕ್ಕೆ ತಳ್ಳಿದ್ದೂ, ವಿಷಪ್ರಾಶನ ಮಾಡಿಸಿದ್ದೂ, ಅರಗಿನ ಮನೆಯ ಪ್ರಕರಣ, ಹೊಟ್ಟೆಗಿಲ್ಲದೆ ಅಲೆಸಿದ್ದೂ, ಕಪಟ ದ್ಯೂತ, ದ್ರೌಪದಿಯ ವಸ್ತ್ರಾಪಹರಣ–ವನವಾಸ ಅಜ್ಞಾತವಾಸಗಳೂ ಕೊನೆಯಲ್ಲಿ ಜೀವ ಉಳಿಸಿಕೊಳ್ಳಲು ಐದು ಊರುಗಳನ್ನು ಬೇಡಿದರೂ ನಿರಾಕರಿಸಿ ಯುದ್ಧಕ್ಕೆ ದಾರಿ ಮಾಡಿದ್ದು ಇದೆಲ್ಲವೂ ಭೀಮನಲ್ಲಿ ಕೂಡಿಟ್ಟಿದ್ದ ಕೋಪ, ಕ್ರೋಧ, ದ್ವೇಷ, ಚಲ, ಎಲ್ಲವೂ ಒಮ್ಮೆಗೇ ಸಂದಿದ್ದು ರೋಷಾವೇಷ ಉಕ್ಕಿ ದುಶ್ಯಾಸನನ ರಕ್ತ ಹೀರುತ್ತಿದ್ದುದನ್ನು ಪಟ್ಟು ಹಿಡಿದು, ರಕ್ತವನ್ನು ಬಿಡದ ಜಿಗಣೆಯ ಸ್ವಭಾವಕ್ಕೆ ಹೋಲಿಸಿರುವುದು ಎಷ್ಟೊಂದು ಸಹಜವಾಗಿದೆ ಅಲ್ಲವೇ ? ನಮ್ಮ ರನ್ನನ ಆ ಸನ್ನಿವೇಶದ ಕಲ್ಪನೆಗೆ ಏನೆನ್ನಬೇಕು ?' ಎಂದು ರಾಜರತ್ನಂ ಅವರು 'ಕಲಿಯುವಿಕೆ ತಿಳಿಯುವಿಕೆ ಎಂಬುದಕ್ಕೆ ಒಂದು ಕೊನೆ ಇದೆಯೇ ? ಈಗ ಶ್ರೀನಿವಾಸರಾವ್ ಇದ್ದಿದ್ದರೆ ಅವರಿಗಾಗುತ್ತಿದ್ದ ಆನಂದದ ಅನುಭವ ನಮಗೆ ಸಿಕ್ಕೀತೇ. ಇದಕ್ಕೆಲ್ಲ ಅವರೇ ಮೂಲ' ಎಂದು ತಮ್ಮ ಕೃತಕೃತ್ಯತಾ ಭಾವವನ್ನು ವ್ಯಕ್ತಪಡಿಸಿದ್ದಾರೆಂದು ತಿಳಿದುಬರುತ್ತದೆ.

■

## ಗ್ರಂಥಋಣ


೧. ಸಾಹಿತಿಗಳ ಸ್ಮೃತಿ–ಬೆಳಗೆರೆ ಕೃಷ್ಣಶಾಸ್ತ್ರೀ (ಅಭಿನವ).

೨. ರನ್ನ ಕವಿ ಗದಾಯುದ್ಧ ಸಂಗ್ರಹಂ–ಸಂ. ತೀ.ನಂ. ಶ್ರೀಕಂಠಯ್ಯ (ಕಾವ್ಯಾಲಯ).

೩. ಸಿರಿಗನ್ನಡ ಅರ್ಥಕೋಶ–ಸಂ. ಶಿವರಾಮಕಾರಂ (ಐಬಿಎಚ್ ಪ್ರಕಾಶನ).

# ಹತ್ತನೆಯ ಶತಮಾನದ ಕನ್ನಡ–ತೆಲುಗು ದ್ವಿಭಾಷಿಕ ಶಾಸನಗಳ ಸ್ವರೂಪ

◆

**ಟಿ. ಮಂಜುನಾಥ**

## ಮುನ್ನೋಟ

ಶಾಸನಗಳ ಚರಿತ್ರೆಯನ್ನು ಅವಲೋಕಿಸಿದರೆ ಮೊದಲಿಗೆ ಅಶೋಕನು ಕ್ರಿಪೂ. ೩ನೇ ಶತಮಾನದಲ್ಲಿ ಹಾಕಿಸಿರುವ ದ್ವಿಭಾಷಾ ಶಾಸನಗಳು ಕಂಡುಬರುತ್ತವೆ. ಕ್ರಿ.ಶ. ಮೊದಲನೆಯ ಹಾಗೂ ಎರಡನೆಯ ಶತಮಾನದಲ್ಲಿ ಸಾತವಾಹನರದ್ದು ದೊರಕಿದರೆ, ನಂತರ ದಕ್ಷಿಣದಲ್ಲಿ ಪ್ರಾಕೃತ–ಸಂಸ್ಕೃತ ನುಡಿಗಳಲ್ಲಿ ಬರೆದಿರುವ ಶಾಸನಗಳು ಸಿಗುತ್ತವೆ. ಕ್ರಿ.ಶ. ೪–೫ನೇ ಶತಮಾನದಲ್ಲಿ ಕದಂಬ ಅರಸರು ದ್ವಿಭಾಷೆಯಲ್ಲಿ ಬರೆಸಿರುವ ಶಾಸನಗಳು ದೊರಕುತ್ತವೆ. ಕ್ರಿ.ಶ. ಹತ್ತನೇ ಶತಮಾನದ ಹೊತ್ತಿಗೆ ಮೂರು ಬಗೆಯ ಭಾಷಾ ಬಳಕೆಯನ್ನು ಶಾಸನಗಳಲ್ಲಿ ಕಾಣುತ್ತೇವೆ. ಒಂದು; ಪಾಕೃತ. ಎರಡು; ಕನ್ನಡ–ಸಂಸ್ಕೃತ. ಮೂರು; ಕನ್ನಡ–ತೆಲುಗು. ಪ್ರಕೃತ ಪ್ರಬಂಧದಲ್ಲಿ ಕ್ರಿ.ಶ. ೮ ಮತ್ತು ೯ನೇ ಶತಮಾನದಿಂದ ಉಳಿದುಬಂದಿರುವ ಕನ್ನಡ–ತೆಲುಗು ದ್ವಿಭಾಷಾ ಶಾಸನಗಳಾದ ಕಲಕಡ[೧], ವೆಲಿಗಲ್ಲು[೨], ಅಕನೂರು[೩], ಅರಕಟವೇಮುಲ[೪] ಮತ್ತು ಕುರ್ಕ್ಯಾಲ[೫] ಶಾಸನಗಳಲ್ಲಿರುವ ಕನ್ನಡ, ತೆಲುಗು ಹಾಗೂ ಅವುಗಳಲ್ಲಿರುವ ದ್ರಾವಿಡ ರೂಪಗಳ ವೈಶಿಷ್ಟ್ಯಗಳನ್ನು ಗುರುತಿಸಲಾಗಿದೆ.

## ೧.೦. ದ್ವಿಭಾಷಾ ಶಾಸನಗಳು : ಪ್ರದೇಶ ಹಾಗೂ ರಾಜಕೀಯ ಹಿನ್ನೆಲೆ

ದ್ವಿಭಾಷಾ ಶಾಸನಗಳ ಭಾಷಾ ಸ್ವರೂಪದೊಡನೆ, ಆ ಶಾಸನಗಳು ರಚನೆಯಾದ ರಾಜಕೀಯ ವಿವರಗಳನ್ನು ತಿಳಿದರೆ, ಆ ಕಾಲದ ಭಾಷೆಯ ಸ್ವರೂಪವನ್ನು ಅರಿಯಲು ಸಾಧ್ಯವಾಗುತ್ತದೆ. ಮೇಲೆ ತಿಳಿಸಿದ ಐದು ದ್ವಿಭಾಷಾ ಶಾಸನಗಳು ಕನ್ನಡ–ತೆಲುಗು ದ್ವಿಭಾಷಾ ಪ್ರಾಂತ್ಯಗಳಲ್ಲಿ ದೊರತಿವೆ. ಕರ್ನಾಟಕದ ಇಂದಿನ ಕೋಲಾರ ಜಿಲ್ಲೆಯು ಬಹಳ ಹಿಂದಿನಿಂದಲೂ ಬಹುಭಾಷಾ ಪ್ರದೇಶವಾಗಿದೆ. ಕೋಲಾರದ ಕೆಜಿಎಫ್, ಮಾಲೂರು ಪ್ರದೇಶಗಳಲ್ಲಿ ತಮಿಳಿನ ಪ್ರಭಾವವಿದ್ದರೆ, ಮುಳಬಾಗಿಲು, ಶ್ರೀನಿವಾಸಪುರ, ಬಾಗೇಪಲ್ಲಿ, ಗೋರಿಬಿದನೂರುಗಳಲ್ಲಿ ತೆಲುಗು ನುಡಿಯ ಪ್ರಭಾವವಿದೆ. ಕೋಲಾರಕ್ಕೆ

ಅಂಟಕೊಂಡಿರುವ ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯು ಸಹ ದ್ವಿಭಾಷಿಕ ಪ್ರದೇಶವಾಗಿತ್ತು ಎಂಬುದಕ್ಕೆ ಅಲ್ಲಿ ದೊರತಿರುವ ದ್ವಿಭಾಷಿಕ ಶಾಸನಗಳಿಂದ ಗುರುತಿಸಬಹುದು.

'ಕಲಕಡ' ಹಾಗೂ 'ವೆಲಿಗಲ್ಲು' ಶಾಸನಗಳು ಚಿತ್ತೂರು ಜಿಲ್ಲೆಯ ಕ್ರಮವಾಗಿ ವಾಯಲಪಾಡು, ಮದನಪಲ್ಲಿ ತಾಲ್ಲೂಕುಗಳಲ್ಲಿ ಸಿಕ್ಕಿವೆ. ಇವು ಕ್ರಿ.ಶ. ಒಂಬತ್ತನೇ ಶತಮಾನಕ್ಕೆ ಸೇರಿದ 'ವೀರಗಲ್ಲು' ಶಾಸನಗಳಾಗಿವೆ. ಇವೆರಡು ಶಾಸನಗಳು ವೈದುಂಬ ಅರಸ ಗಣ್ಡ ತ್ರಿಣೇತ್ರನ ಆಳ್ವಿಕೆಯನ್ನು ಹೇಳುತ್ತವೆ. ಇವರ ದ್ವಿಭಾಷಾ ಶಾಸನಗಳಿಗೆ ವಿಶೇಷವಾದ ಸ್ಥಾನವಿದೆ. 'ಅಕನೂರು'ಶಾಸನವು ವಾರಂಗಲ್ ಜಿಲ್ಲೆಯ ಜನಗಾಂ ತಾಲ್ಲೂಕಿನಲ್ಲಿದೆ. ಇದನ್ನು ಕೊಳ್ಳಿಪಾಕೆನಾಡು-೨೦೦೦ ಅನ್ನು ಆಳುತ್ತಿದ್ದ ಮಹಾಸಾಮಂತ ಅರಸ ಸಂಕರಗಂಡರಸನ ಸಾಮಂತನಾದ ಇಂದುಪಯ್ಯನ ಆಳ್ವಿಕೆಯಲ್ಲಿ ಹಾಕಿಸಲಾಗಿದೆ. ಇದು ಕೊಳ್ಳಿಪಾಕೆಯ ಪಿರಿಯಬಸದಿಗೆ ಕೊಟ್ಟ ಭೂಮಿದತ್ತಿಯನ್ನು ಪ್ರಸ್ತಾಪಿಸಿದೆ.

'ಅರಕಟವೇಮುಲ' ಶಾಸನವು ಕಡಪ ಜಿಲ್ಲೆಯಪ್ರೊದ್ದಟೂರು ತಾಲ್ಲೂಕಿನಲ್ಲಿದೆ. ಇದು ಕ್ರಿ.ಶ. ಒಂಬತ್ತನೇ ಶತಮಾನದಲ್ಲಿ ರಚಿತವಾಗಿದೆ. ಈ ಶಾಸನ ರಾಷ್ಟ್ರಕೂಟರ ಶ್ರೀವಲ್ಲಭನನ್ನು ತಿಳಿಸುತ್ತದೆ. ಮತ್ತೊಂದು 'ಕುರ್ಕ್ಯಾಲ' ಶಾಸನವಾಗಿದೆ. ಇದು ಕರೀಂನಗರ ಜಿಲ್ಲೆಯ ಅದೇ ತಾಲ್ಲೂಕಿನ ಕುರ್ಕ್ಯಾಲಹಳ್ಳಿಯ ಹತ್ತಿರವಿರುವ ಬೊಮ್ಮಲಮ್ಮಗುಟ್ಟದ ಮೇಲಿನ ಶಾಸನವಾಗಿದೆ. ಇದು ಕನ್ನಡ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಮಹತ್ವದ ಆಕರವಾಗಿದೆ. ಇದನ್ನು ವೇಮುಲವಾಡದ ಚಾಲುಕ್ಯರ ಎರಡನೇ ಅರಿಕೇಸರಿಯ ಕಾಲವನ್ನು ತಿಳಿಸುತ್ತದೆ. ಇದು ಕ್ರಿ.ಶ. ಹತ್ತನೇ ಶತಮಾನಕ್ಕೆ ಸೇರಿದ ಶಾಸನವಾಗಿದೆ.

### ೧.೧. ದ್ವಿಭಾಷಾ ಶಾಸನಗಳ ಸೃಷ್ಟಿಗೆ ಕಾರಣಗಳು

ದ್ರಾವಿಡ ಭಾಷೆಗಳಾದ ಕನ್ನಡ, ತೆಲುಗು ಹಾಗೂ ತಮಿಳು ಭಾಷೆಗಳು ಒಳಗೊಂಡಿರುವ ಪ್ರದೇಶಗಳೆಂದರೆ: ಕರ್ನಾಟಕದ ಕೋಲಾರ, ಆಂಧ್ರದ ಚಿತ್ತೂರು, ಅನಂತಪುರ ಮತ್ತು ತಮಿಳುನಾಡಿನ ಉತ್ತರ ಆರ್ಕಾಟ್ ಜಿಲ್ಲೆಗಳಾಗಿವೆ. ಇದಕ್ಕೆ ಉದಾಹರಣೆಗಳೆಂದರೆ ಚಿತ್ತೂರಿನಲ್ಲಿ ದೊರೆತಿರುವ ವೆಲಿಗಲ್ಲು, ಕಲಕಡ ಶಾಸನಗಳಲ್ಲಿ ಬಳಕೆಯಾಗಿರುವ ಕನ್ನಡ-ತೆಲುಗು ದ್ವಿಭಾಷಾ ಶಾಸನಗಳಾಗಿವೆ. ಆದರೆ ಉತ್ತರ ಆರ್ಕಾಟ್ ಜಿಲ್ಲೆಯ ಕ್ರಿ.ಶ. ೮ ಮತ್ತು ೯ನೇ ಶತಮಾನಗಳ ತಮಿಳು ಶಾಸನಗಳನ್ನು ಗಮನಿಸಿದಾಗ ಸಂಸ್ಕೃತ ಭಾಷೆಯ ಛಾಯೆ ಇರುವುದು ತಿಳಿದುಬರುತ್ತದೆ.

ದ್ವಿಭಾಷಾ ಪ್ರಾಂತಗಳಲ್ಲಿ ಎರಡು ಭಾಷೆಗಳ ಪರಸ್ಪರ ಸಂಪರ್ಕದಿಂದ ಶಾಸನಗಳಲ್ಲಿ ಕೊಡುಕೊಳು ನಡೆದಿರುವುದು ಕಂಡುಬಂದಿದೆ. ದ್ವಿಭಾಷಾ ಶಾಸನಗಳು ಉಂಟಾಗಲು ಕೆಳಗಿನ ಅಂಶಗಳು ಕಾರಣವಾಗುತ್ತವೆ." ಒಂದು ಪ್ರದೇಶದಲ್ಲಿ ಯಾವುದೇ ಭಾಷೆಯ ಶಾಸನ ದೊರೆಯಬೇಕಾದರೆ ಪ್ರಧಾನವಾಗಿ ಎರಡು ಕಾರಣಗಳಿರುತ್ತವೆ.

೧. ಅದು ಆ ಪ್ರದೇಶವನ್ನು ಆಳುತ್ತಿರುವ ಅರಸರ ಭಾಷೆಯಾಗಿರಬಹುದು.

೨. ಅದು ಆ ಪ್ರದೇಶದ ಜನ ಆಡುತ್ತಿರುವ ಭಾಷೆಯಾಗಿರಬಹುದು."[೬]

ದ್ವಿಭಾಷಾ ಶಾಸನಗಳನ್ನು ಹಾಕಿಸಲು ಇವುಗಳಲ್ಲದೆ ಉಳಿದೆರಡು ಕಾರಣಗಳು ಕಂಡುಬರುತ್ತವೆ. ಅವು ಹೀಗಿವೆ;

**೧.೨. ರಾಜಕೀಯ ಸಂಪರ್ಕ**

ಕೋಲಾರ, ಮುಳಬಾಗಿಲು, ಬಾಗೇಪಲ್ಲಿ, ಚಿಂತಾಮಣಿ, ಮಾಲೂರು, ಬೌರಿಂಗ್‌ಪೇಟ್, ಆಂಧ್ರದ ಚಿತ್ತೂರು ಜಿಲ್ಲೆಯ ಮದನಪಲ್ಲಿ, ಪುಂಗನೂರು, ಕುಪ್ಪಂ, ವಾಯಲ್ಪಾಡು ಇವು ದ್ವಿಭಾಷಾ ಪ್ರಾಂತಗಳಾಗಿ ತೋರಿಬಂದಿವೆ. ಈ ಪ್ರದೇಶಗಳಲ್ಲಿ ರಾಜಕೀಯುವಾಗಿ ಕ್ರಿ.ಶ. ೯-೧೦ನೇ ಶತಮಾನದ ತೆಲುಗು ಚೋಡರ[೭] ಪ್ರಭಾವವಾಗಿರುವುದಕ್ಕೆ ಆಧಾರಗಳಿವೆ. ಕೋಲಾರದ ಕ್ರಿ.ಶ. ೭-೮ನೇ ಶತಮಾನದ ಮುಳಬಾಗಿಲು[೮], ಚಿತ್ತೂರಿನ ಚಂದ್ರಗಿರಿ[೯], ಕ್ರಿ.ಶ. ೮೪೫ರ ಕಾಳಹಸ್ತಿ[೧೦], ತಾಲ್ಲೂಕುಗಳಲ್ಲಿ ತಮಿಳು ಅರಸರಾದ ಪಲ್ಲವರ ಪ್ರಭಾವವಾಗಿರುವುದು ಕಂಡುಬರುತ್ತದೆ. ಕೋಲಾರದ ಗೌರಿಬಿದನೂರು[೧೧], ಮುಳಬಾಗಿಲು[೧೨], ಆಂಧ್ರದ ಅನಂತಪುರದ ಬೂದಲಿ[೧೩], ಚಿತ್ತೂರಿನ ಕರ್ಶನಪಲ್ಲಿ[೧೪], ಮದನಪಲ್ಲಿಯ ಕ್ರಿ.ಶ. ೮ನೇ ಶತಮಾನದ ಚಿಪ್ಪಲಿಯ[೧೫] ಶಾಸನಗಳಲ್ಲಿ ತಮಿಳುನಾಡಿನ ಚೋಳರ ಆಳ್ವಿಕೆಯು ಸ್ಪಷ್ಟವಾಗಿದೆ.

ಅವಿಭಜಿತ ಕೋಲಾರದ ಬಾಗೇಪಲ್ಲಿ ಹಾಗೂ ಉತ್ತರಕ್ಕೆ ಕಡಪ ಪ್ರದೇಶದಲ್ಲಿ ತೆಲುಗು ಚೋಡರು ಆಳ್ವಿಕೆ ನಡೆಸುತ್ತಿದ್ದುದನ್ನು ಶಾಸನಗಳು ಆಧಾರವನ್ನು ಒದಗಿಸುತ್ತವೆ[೧೬]. ಇವುಗಳಲ್ಲದೆ "ಕ್ರಿ.ಶ.ಸು. ೩೫೦ರ ಕಾಲಕ್ಕಾಗಲೇ ಇಂದಿನ ತಮಿಳುನಾಡಿನ ಬಾರಾಘಾಟ್, ಬಾಲಾಮಹತ್ ಪ್ರದೇಶಗಳು ಪ್ರಾಚೀನ ಕರ್ನಾಟಕದ ಅವಿಭಾಜ್ಯ ಭಾಗವಾಗಿ ಕರ್ನಾಟಕದ ಗಂಗರಸರ ಅಧೀನದಲ್ಲೇಬಹುಕಾಲ ಇದ್ದದ್ದುಸರಿಯಷ್ಟೆ."[೧೭]

**೧.೩. ವ್ಯಾಪಾರ ಸಂಪರ್ಕ**

ಕೋಲಾರ ಪ್ರದೇಶವು ಚೋಳರ ಕಾಲಕ್ಕೂ ಹಿಂದಿನಿಂದಲೂ ಒಂದು ವ್ಯಾಪಾರ ಪ್ರದೇಶವಾಗಿತ್ತು. ಅವರ ಕಾಲದಲ್ಲಿ ಮುಖ್ಯವಾಗಿ ಕಾಂಚೀಪುರಂ (ಕಂಚಿ) ಜೊತೆ ವ್ಯಾಪಾರ ನಂಟನ್ನು ಹೊಂದಿತ್ತು. ಹಾಗೆಯೇ ತೆಲುಗು ಭಾಷಿಕರ ಜೊತೆ ಉತ್ತಮ ವ್ಯಾಪಾರದ ಸಂಬಂಧವಿತ್ತು ಎಂಬ ಸುಳಿವು 'ಪ್ರಾಚೀನಪಥ'ವು ಕೊಡುತ್ತದೆ. ಕೋಲಾರ ಜಿಲ್ಲೆಯ ಕನ್ನಡಶಾಸನಗಳಲ್ಲಿ 'ವಡುಗವಟಿ' ಎಂಬಪ್ರಯೋಗವನ್ನು ಗುರುತಿಸಬಹುದು. ಉತ್ತರಾ ಪಥಾ, ದಕ್ಷಿಣಾ ಪಥಗಳಿರುವಂತೆ 'ಆಂಧ್ರಪಥಾ'ವೆಂಬುದಿದೆ. ಅದು ಆಂಧ್ರ ಪ್ರದೇಶವನ್ನು ಸೂಚಿಸುತ್ತದೆ. ಅಂದರೆ ಆಂಧ್ರಕ್ಕೆ ಹೋಗುವ ದಾರಿ ಎಂದು ತಿಳಿದುಬರುತ್ತದೆ. ಅದು" ಪ್ರಾಚೀನ ಕಾಲದಲ್ಲೂ ಕಾಂಚೀಪುರವನ್ನು ಚಂಗಲ್ ಮತ್ತು ನೆಲ್ಲೂರು ಜಿಲ್ಲೆಗೆ ಸೇರಿಸುವ ಮಾರ್ಗವೊಂದು ಇದ್ದಿರಬೇಕು"[೧೮].

**೧.೪. ಶಾಸನ: ದ್ವಿಭಾಷಿಕತೆ**

ಚಿತ್ತೂರು ಜಿಲ್ಲೆಯ ವಾಯಲ್ಪಾಡು ತಾಲೂಕಿನಲ್ಲಿ ದೊರಕಿರುವ 'ಕಲಕಡಶಾಸನ'ವು ಕ್ರಿ.ಶ. ೯ನೇ ಶತಮಾನದ ಹಳಗನ್ನಡ ಭಾಷೆಯಲ್ಲಿದೆ. ಇದು ಕನ್ನಡ-ಸಂಸ್ಕೃತ ಭೂಯಿಷ್ಠ

ಬರಹದ ೨೮ ಸಾಲುಗಳುಳ್ಳ ತ್ರಿಭಾಷಾ ಶಾಸನವಾಗಿದೆ. ಇದು ೧-೩, ೭-೧೧, ೨೦-೨೮ರವರಗಿನ ಸಾಲುಗಳು 'ಹಳಗನ್ನಡ', ೪-೬ರವರೆಗಿನ ಸಾಲುಗಳು 'ಹಳೇತೆಲುಗು', ೧೨-೧೯ರವರೆಗೆ 'ಸಂಸ್ಕೃತ ಭಾಷೆ'ಯಿಂದ ಕೂಡಿವೆ. ಹಳಗನ್ನಡ ಭಾಷೆಯಲ್ಲಿ ಸಂಸ್ಕೃತ, ತೆಲುಗು ನುಡಿಗಳನ್ನು ಬಳಸಿರುವುದರಿಂದ ಇದು ಮಿಶ್ರಭಾಷಾ ಪಾಠವನ್ನು ಸಾದರಪಡಿಸುತ್ತವೆ.

ಚಿತ್ತೂರು ಜಿಲ್ಲೆ, ಮದನಪಲ್ಲಿ ತಾಲ್ಲೂಕಿನ 'ವೆಲಿಗಲ್ಲು' ಹಳ್ಳಿಯಲ್ಲಿ ಸಿಕ್ಕಿರುವ ಕ್ರಿ.ಶ. ೯ನೇ ಶತಮಾನದ ಶಾಸನವು ದ್ವಿಭಾಷಾ ಶಾಸನವಾಗಿದೆ. ಶಾಸನದ ೧-೫ ಹಾಗೂ ೧೪-೧೬ನೇ ಸಾಲುಗಳು 'ಹಳೇ ತೆಲುಗು' ನುಡಿಯಲ್ಲಿವೆ. ೬-೧೪ ಸಾಲುಗಳು 'ಹಳಗನ್ನಡ'ದಿಂದ ಕೂಡಿವೆ. ಕೆಲವು ಹೆಸರು, ಮತ್ತು ಸ್ಥಳನಾಮ ಅಲ್ಲಿನ ಸ್ಥಳೀಯ ನುಡಿಯಲ್ಲಿವೆ. ಇದೊಂದು ಸಂಸ್ಕೃತಭೂಯಿಷ್ಠ ಕಲ್ಬರಹವಾಗಿರದೆ, ಹಳಗನ್ನಡ ಮತ್ತು ಪ್ರಾಚೀನ ತೆಲುಗು ಭಾಷೆಗಳ ಪದಗಳು ಹೆಚ್ಚು ಬಳಸಿರುವ ನಿದರ್ಶನಗಳಿವೆ. ಇವುಗಳ ಜೊತೆಗೆ ಪ್ರಾಕೃತದ ಕೆಲವು ಸ್ಪಷ್ಟ ನಿದರ್ಶನಗಳು ದಾಖಲಾಗಿವೆ. ತೆಲುಗು ನುಡಿಯಲ್ಲಿ ಬರೆದಿರುವ ಪದಗಳು ಸ್ಪಷ್ಟವಾಗಿ ಪರಿಚಯವಾಗುತ್ತದೆ. ಆದರೆ ಹಳಗನ್ನಡ ಬಳಸಿರುವ ಸಾಲುಗಳಲ್ಲಿ ಅಸ್ಪಷ್ಟ ಪದಗಳ ಪ್ರಯೋಗಗಳನ್ನು ಅದು ಒಳಗೊಂಡಿದೆ.

ವಾರಂಗಲ್ ಜಿಲ್ಲೆಯ ಜನಗಾಂ ತಾಲ್ಲೂಕು ಅಕನೂರು ಹಳ್ಳಿಯಲ್ಲಿ ಸಿಕ್ಕಿರುವ ಕ್ರಿ.ಶ. ಸು. ೯ನೇ ಶತಮಾನದ ಶಾಸನವು ದ್ವಿಭಾಷಾ ಶಾಸನವಾಗಿದೆ. ಶಾಸನದ ಮೊದಲನೆಯ ಮತ್ತು ಎರಡನೆಯ ಮುಖದಲ್ಲಿ ಹಳಗನ್ನಡದ ೨೯ ಚಿಕ್ಕ ಚಿಕ್ಕ ಸಾಲುಗಳಿವೆ. ಶಾಸನದ ಮೂರನೆಯ ಮುಖದಲ್ಲಿ ೧೯ ಚಿಕ್ಕ ಚಿಕ್ಕ ಸಾಲುಗಳು ಪ್ರಾಚೀನ ತೆಲುಗು ಭಾಷೆಯಲ್ಲಿವೆ.

'ಅರಕಟವೇಮುಲ' ಶಾಸನವು ಕ್ರಿ.ಶ. ಸುಮಾರು ೯ನೇ ಶತಮಾನಕ್ಕೆ ಸೇರಿಸಬಹುದು. ಇದು ರಾಷ್ಟ್ರಕೂಟರ ಅಮೋಘವರ್ಷನು ಆಳುತ್ತಿದ್ದನು ಎಂಬುದನ್ನು ಶಾಸನದಲ್ಲೇ ಉಲ್ಲೇಖಿಸಲಾಗಿದೆ. ಇದು ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿದೆ. ಮೊದಲನೇ ಭಾಗದ ಎರಡು ಸಾಲುಗಳು ಹಳಗನ್ನಡದಲ್ಲಿ ರಚಿತವಾಗಿವೆ. ಅನಂತರ ಪ್ರಾಚೀನ ತೆಲುಗು ನುಡಿಯನ್ನು ಹೋಲುವಂತಹ ೩ ಸಾಲುಗಳಿವೆ. ಶಾಸನದ ಕೊನೆಯ ಎರಡು ಸಾಲುಗಳು ಸಂಸ್ಕೃತ ಮೂಲದ ಶ್ಲೋಕವೊಂದು ರಚಿತವಾಗಿದೆ.

'ಕುರ್ಕ್ಯಾಲ' ಶಾಸನವು ಕ್ರಿ.ಶ. ಹತ್ತನೇ ಶತಮಾನದಲ್ಲಿ ಆಳ್ವಿಕೆ ನಡೆಸುತ್ತಿದ್ದ ವೇಮುಲವಾಡದ ಚಾಲುಕ್ಯ ಅರಸ 'ಎರಡನೇ ಅರಿಕೇಸರಿ'ಯ ಅಮೂಲ್ಯವಾದ ಶಾಸನವಾಗಿದೆ. ಶಾಸನದಲ್ಲಿ ಮೂರು 'ಸಂಸ್ಕೃತ ಪದ್ಯ'ಗಳೂ, ಆರು 'ಕನ್ನಡ ಪದ್ಯ'ಗಳೂ ಹಾಗೂ ಮೂರು 'ಪ್ರಾಚೀನ ತೆಲುಗು ಕಂದ' ಪದ್ಯಗಳು ಇದರಲ್ಲಿವೆ. ಈ ಶಾಸನದಲ್ಲಿ ಕನ್ನಡ ಮತ್ತು ಸಂಸ್ಕೃತ ಭಾಷೆಗಳು ಸರಿಯಾಗಿ ಬರೆಯಲ್ಪಟ್ಟಿವೆ.

**೨.೦. ಭಾಷಿಕ ವಿಶ್ಲೇಷಣೆ**

ಕ್ರಿ.ಶ. ೮, ೯, ೧೦ನೇ ಶತಮಾನದಲ್ಲಿ ದ್ವಿಭಾಷಾ ಶಾಸನಗಳು ದೊರೆತಿವೆ. ಕಲಕಡ, ವೆಲಿಗಲ್ಲು, ಆಕನೂರು, ಅರಕಟವೇಮುಲ, ಹಾಗೂ ಕುರ್ಕ್ಯಾಲ ಶಾಸನಗಳಲ್ಲಿ ಅದೇ ಕಾಲದ ಕರ್ನಾಟಕದ ಬೇರೆ ಭಾಗದ ಶಾಸನಗಳಲ್ಲಿ ಸಿಗುವ ಪ್ರಯೋಗಗಳು ಇವುಗಳಲ್ಲಿ ದೊರೆತಿವೆ. ಈ ದ್ವಿಭಾಷಾ ಶಾಸನಗಳಲ್ಲಿ ಪ್ರಯೋಗವಾಗಿರುವ ತೆಲುಗು ಭಾಷೆಯನ್ನು ಗಮನಿಸಿದಾಗ, ಆಂಧ್ರ ಪ್ರದೇಶದ ಕ್ರಿ.ಶ. ೭ ಹಾಗೂ ೮ನೇ ಶತಮಾನಗಳ ಶಾಸನಗಳಲ್ಲಿನ ಪ್ರಾಚೀನ ವೈಶಿಷ್ಟ್ಯಗಳು ಹೆಚ್ಚಾಗಿ ಉಳಿದಿರುವುದು ಕಂಡುಬರುತ್ತದೆ. ಅಲ್ಲದೇ ಮೇಲಿನ ದ್ವಿಭಾಷಾ ಶಾಸನಗಳಲ್ಲಿ ವಿಶೇಷವಾಗಿ ದ್ರಾವಿಡ ಭಾಷೆಯ ಪದ ಪ್ರಯೋಗಗಳು ತೋರಿಬಂದಿವೆ. ಕನ್ನಡ ಹಾಗೂ ತೆಲುಗು ಭಾಗಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ.

**೨.೧. ದ್ರಾವಿಡದಿಂದ ತೆಲುಗು ಬೇರೆಯಾಗಿ ರೂಪುಗೊಂಡ ಬಗೆ:**

ತೌಲನಿಕ ವಿಧಾನದಿಂದ ಭಾಷೆಗಳನ್ನು ಬೇರೆ ಬೇರೆ ಭಾಷಾ ಗುಂಪುಗಳಾಗಿ ವಿಂಗಡಿಸಬಹುದು. "ಈ ರೀತಿ ಭಾಷಾ ಕುಟುಂಬವೊಂದರಲ್ಲಿ ಸೇರಿಸುವ ಭಾಷೆಗಳನ್ನೆಲ್ಲ ಒಂದೇ ಒಂದು ಮೂಲಭಾಷೆಯಿಂದ ಚಾರಿತ್ರಿಕವಾಗಿ ಸಾಧಿಸಲು ಸಾಧ್ಯವಿದೆ."[೯] ಕನ್ನಡ, ತಮಿಳು, ತೆಲುಗು, ತೋದ, ಗೋಂಡಿ, ಕುವಿ, ಮೊದಲಾದ ಮೂವತ್ತಕ್ಕೂ ಹೆಚ್ಚು ಭಾಷೆಗಳನ್ನು 'ದ್ರಾವಿಡ' ಭಾಷಾ ಗುಂಪಿಗೆ ಸೇರಿಸಲಾಗಿದೆ. ಇಪ್ಪತ್ತೊಂದನೇ ಶತಮಾನದಲ್ಲಿ ಭಾಷಾವಿಜ್ಞಾನಿಗಳು 'ಮೂಲ ದ್ರಾವಿಡ'ವೆಂಬ ಮೂಲಭಾಷೆಯಿಂದ ಚಾರಿತ್ರಿಕವಾಗಿ ಮೇಲಿನ ಭಾಷೆಗಳನ್ನು ಸಾಧಿಸಲು ಪ್ರಯತ್ನಿಸಿದ್ದಾರೆ.

'ಮೂಲ ದ್ರಾವಿಡ ಭಾಷೆಯಿಂದ ಮೂರು ಪ್ರಾದೇಶಿಕ ಗುಂಪುಗಳಾಗಿ ಒಡದಿವೆ. ಅವುಗಳಲ್ಲಿ 'ದಕ್ಷಿಣ ದ್ರಾವಿಡ'ವೆಂಬ ಪ್ರಧಾನ ಗುಂಪಾಗಿ ಮೊದಲು ಬೇರ್ಪಟ್ಟಿತು. ಇದು ಪ್ರಧಾನವಾಗಿ ಎರಡು ಗುಂಪುಗಳಾಗಿ ಪ್ರತ್ಯೇಕಗೊಂಡಿತು. ಒಂದು. ಮೂಲ ದಕ್ಷಿಣ ದ್ರಾವಿಡ I. ಎರಡು. ಮೂಲ ದಕ್ಷಿಣ ದ್ರಾವಿಡ II. ಇವುಗಳಲ್ಲಿ ಕ್ರಮವಾಗಿ ಕನ್ನಡ, ತಮಿಳು ಮೊದಲ ಶಾಖೆಯಿಂದ, ತೆಲುಗು, ಗೋಂಡಿ, ಕುವಿ, ಮೊದಲಾದ ಭಾಷೆಗಳು ಎರಡನೇ ಶಾಖೆಯಿಂದ ಪ್ರತ್ಯೇಕಗೊಂಡವು'. (ಕೃಷ್ಣಮೂರ್ತಿ.ಭ, ೨೦೦೩. ೨೧) ಎಂದು ಈಗಾಗಲೇ ವಿದ್ವಾಂಸರು ಗುರುತಿಸಿದ್ದಾರೆ. ಮುಂದೆ ಇವುಗಳ ಬದಲಾದ ಸ್ವರೂಪ ಎಂತಹದ್ದು ಎಂಬುದನ್ನು ಗುರುತಿಸಲು ಶಾಸನಗಳನ್ನು ಆಧಾರವಾಗಿ ಬಳಸಲು ಸಾಧ್ಯವಿದೆ.

ದ್ರಾವಿಡದಿಂದ ತೆಲುಗು ಭಾಷೆಯು ಬೇರೆಯಾಗುವ ಸಂದರ್ಭದಲ್ಲಿ ಎಂತಹ ಬದಲಾವಣೆಗಳು ನಡೆದಿವೆ, ಅವುಗಳ ಸ್ವರೂಪವೇನು ಎಂಬುದನ್ನು ದ್ವಿಭಾಷಿಕ ಶಾಸನಗಳ ಮೂಲಕ ಹೇಳಲು ಸಾಧ್ಯ. ಮೂಲದ್ರಾವಿಡದಿಂದ ತೆಲುಗು ಭಾಷೆ ಬೇರೆಯಾಗಿರುವ ಬಗೆಯನ್ನು ಭಾಷಾವಿಜ್ಞಾನದ ಹಿನ್ನಲೆಯಲ್ಲಿ ಯಾವ ಬಗೆಯ ಬದಲಾವಣೆಗಳು ನಡೆದವು ಎಂಬುದನ್ನು ಈ ಕೆಳಗೆ ಸ್ಥೂಲವಾಗಿ ವಿಶ್ಲೇಷಿಸಲಾಗಿದೆ.

**೨.೧.೧. 'ಆಳ್' ಸ್ತ್ರೀಲಿಂಗ ದ್ರಾವಿಡ ರೂಪ:**-ದ್ರಾವಿಡ ಭಾಷೆಗಳಲ್ಲಿ ನಾಮವಾಚಕಗಳು ಎರಡು ಬಗೆಯಲ್ಲಿವೆ. ತಮಿಳಿನಲ್ಲಿ 'ಉಯರ್ ತಿಣೈ', 'ಅಟ್ರಿಣೈ' ಎಂದೂ, ತೆಲುಗಿನಲ್ಲಿ 'ಮಹತ್ತು' ಹಾಗೂ 'ಅಹಮತ್' ಎಂಬುದಾಗಿ ಕರೆಯಲಾಗುತ್ತದೆ. ಆದರೆ ತೆಲುಗಿನಲ್ಲಿ ಸ್ತ್ರೀಯನ್ನು ಸೂಚಿಸುವ ಪ್ರತ್ಯೇಕ ಪ್ರತ್ಯಯಗಳಿಲ್ಲ. ಸ್ತ್ರೀಸೂಚಕ ಪ್ರತ್ಯಯಗಳಾದ ಏಕವಚನ ಅಹಮತ್‌ನಲ್ಲೂ, ಬಹುವಚನ ಮಹತ್ ಗುಂಪಿನಲ್ಲೂ ಏರ್ಪಟ್ಟಿವೆ. ಪ್ರಾಚೀನ ತೆಲುಗು ಶಾಸನಗಳಲ್ಲಿ ಸ್ತ್ರೀಸೂಚಕ ಪದ ಪ್ರಯೋಗವಿಲ್ಲ. ಆದರೆ ಚಿತ್ತೂರು ಜಿಲ್ಲೆಯ ಕಲಕಡ ಶಾಸನದಲ್ಲಿ ಸ್ತ್ರೀಲಿಂಗ ಸೂಚಕ 'ಆಳಿನಿ' (=ಹೆಂಡತಿ) ಏಕವಚನ ರೂಪ ಉಲ್ಲೇಖವಿದೆ.

ಹತ್ತನೇ ಶತಮಾನದವರೆಗಿನ ಕನ್ನಡ ಶಾಸನಗಳಲ್ಲಿ ಸ್ತ್ರೀಲಿಂಗ ಪ್ರತ್ಯಯವಾಗಿ (ಅ)-(ಆ)ಆಳ್ ಬಳಕೆಯಾಗಿದೆ.[೨೦] 'ಆಳಿನಿ' ಪದದ ಪ್ರಾಚೀನ ರೂಪ ಆಳ್. ದ್ರಾವಿಡ ಭಾಷೆಗಳಲ್ಲಿ ತ.ಆಟ್ಟಿ(ಹೆಂಡತಿ), ಕ.ಆಡಂಗಿ, ತೆ.ಆಳು, ಆಟದಿ, ಆಡದಿ.[೨೧] ಎಂಬ ಜ್ಞಾತಿ ಪದಗಳಿವೆ. ಆಳ್ ಎಂಬ ರೂಪವು ಮುಂದೆ ಡಕಾರವಾಗಿ ಆಡ (=ಸ್ತ್ರೀ) ರೂಪ ಮಾತ್ರ ತೆಲುಗಿನಲ್ಲಿ ಉಳಿದಿದೆ. [<ಆಡಿ *ಆಳ್-/*ಆಣ್-][೨೨]

**೨.೧.೨. ಟ>ಡ:**- ಮೂರ್ಧನ್ಯ ಟ'ಕಾರವು ಕನ್ನಡದಲ್ಲಿ ಘೋಷವರ್ಣವಾಗುತ್ತದೆ. ತೆಲುಗಿನಲ್ಲಿ ಕೂಡ ಈ ಲಕ್ಷಣ ಕಂಡಬಂದರೂ ವೆಲಿಗಲ್ಲು ಶಾಸನದಲ್ಲಿ ಮೂರ್ಧನ್ಯ ಟಕಾರದ ಪ್ರಯೋಗವಿದೆ. 'ಪೋಟುನ' ಪದವು ಯುದ್ಧ ಎಂಬರ್ಥವನ್ನು ಕೊಡುತ್ತದೆ. ಅಲ್ಲದೆ 'ಪೊಡುಚು' (=ಇರಿತ) ಅರ್ಥವೂ ಇದೆ. ದ್ರಾವಿಡ ನುಡಿಗಳಾದ ತ.ಪುಟೈಪು, ಕ.ಪೊಡೆ, ಕೊ.ಪೊಡ, ತೆ.ಪೊಡುಚು, ಪೋಟು[೨೩] ಎಂಬ ಧಾತು ರೂಪಗಳು ಶಾಸನಗಳಲ್ಲಿ ಕಂಡುಬರುತ್ತವೆ. ಅಘೋಷ ವರ್ಣವು ಘೋಷ ವರ್ಣವಾಗಿ ತಮಿಳನ್ನು ಬಿಟ್ಟು ಕನ್ನಡ, ತೆಲುಗು, ಕೊಡವ ಭಾಷೆಗಳಲ್ಲಿ ಉಂಟಾಗುತ್ತಿರುವುದನ್ನು ಇದು ಹೇಳುತ್ತಿದೆ.

**೨.೧.೩. ಣ>ನ:**- ಮೂಲ ದ್ರಾವಿಡದ *ಣ ಕಾರವು ಪ್ರಾಚೀನ ತೆಲುಗು ಭಾಷೆಯಲ್ಲಿ "ಣ ಈ ಮೂರ್ಧನ್ಯನಾಸಿಕವರ್ಣವು ತೆಲುಗಿನಲ್ಲಿ ಸಾಮಾನ್ಯವಾಗಿ ದಂತ್ಯ ವರ್ಣ 'ನ'ಕಾರವಾಗುತ್ತದೆ."[೨೪] 'ಈ ಬದಲಾವಣೆಯು ಕ್ರಿ.ಶ. ೭ನೇ ಶತಮಾನದಿಂದ ಆರಂಭವಾಗಿ ೯ನೇ ಶತಮಾನಕ್ಕೆ ಪೂರ್ತಿಯಾಗಿದೆ' ಎಂದು ಡಾ. ಬೂದರಾಜು ರಾಧಾಕೃಷ್ಣ ಅವರು ಸೂಚಿಸಿದ್ದಾರೆ.[೨೫] ಕ್ರಿ.ಶ. ೯ನೇ ಶತಮಾನದ ಹೊತ್ತಿಗೆ ಣಕಾರ ನಕಾರವಾಗಿದ್ದರೂ ಕೂಡ ಚಿತ್ತೂರು ಜಿಲ್ಲೆಯ ವೆಲಿಗಲ್ಲು ದ್ವಿಭಾಷಾ ಶಾಸನದಲ್ಲಿ 'ಪಣಿ' ಮತ್ತು ಕ್ರಿ.ಶ. ೮೨೫ರ ಚೆನ್ನರಾಯನಿಪಲ್ಲಿಯಲ್ಲಿ ದೊರೆತಿರುವ ತೆಲುಗು ಶಾಸನ[೨೬]ದಲ್ಲಿ 'ತಣ' ಪದಗಳಲ್ಲಿ ಪ್ರಾಚೀನ ರೂಪವಾದ ಣಕಾರದ ಕುರುಹುಗಳಾಗಿ ಈ ಪ್ರಯೋಗಗಳಿವೆ. [<ಕಆಡಿ .ಪಣ್-][೨೭] ಆಡುಮಾತಿನ ಲಕ್ಷಣವನ್ನು ತಿಳಿಸುವಂತಹ ಹಲವು ಉದಾಹರಣೆಗಳಿವೆ.

| **ಕನ್ನಡ** | **ತೆಲುಗು** | |
|---|---|---|
| ಅಣ್ಣನ್ | ಅನ್ನ | |
| ಕಣ್ | ಕನ್ನು | ಮುಂತಾದವು. |

### ೩.೦. ಕನ್ನಡದ ಪ್ರಭಾವ

ತೆಲುಗು ಭಾಷೆಯು ಮೊದಲಿನಿಂದಲೂ ಸಂಸ್ಕೃತ ಭಾಷೆಯ ಪ್ರಭಾವಕ್ಕೊಳಗಾಗಿದೆ. ಆದರೆ ಗಡಿ ಪ್ರದೇಶಗಳಲ್ಲಿ ತೆಲುಗು ಭಾಷೆಯ ಮೇಲೆ ಕನ್ನಡ ಪ್ರಭಾವ ಆಗಿರುವುದನ್ನು ಶಾಸನಗಳ ಮೂಲಕ ಗುರುತಿಸಬಹುದು. ತೆಲುಗು ಭಾಷೆಯು ಕನ್ನಡದ ಪ್ರಭಾವವನ್ನು ಪಡೆದರೂ ಕೂಡ ತನ್ನ ಸ್ವಂತಿಕೆಯನ್ನು ಪಡೆದಿದೆ. ಈ ಎರಡೂ ಭಾಷೆಗಳ ಧ್ವನಿ ಹಾಗೂ ಪದರಚನೆಯನ್ನುಹೋಲಿಸುವುದರ ಮೂಲಕ ಕನ್ನಡದ ಪ್ರಭಾವವನ್ನು ಗುರುತಿಸಲಾಗಿದೆ.

**೩.೧. ಪುರುಷವಾಚಕ ಸರ್ವನಾಮ 'ವಾನ್ಱು':** ತೆಲುಗು ಭಾಷೆಯಲ್ಲಿ ವಾನ್ಱು (=ವಾಡು (ಅವನು) ಎಂಬುದು ಪುರುಷ ವಾಚಕ ಸರ್ವನಾಮವಾಗಿದೆ. ದ್ವಿಭಾಷಾ ಶಾಸನದಲ್ಲಿ ಇದು ಪ್ರಥಮಾ ವಿಭಕ್ತಿ ಏಕವಚನದಲ್ಲಿ ಪ್ರಯೋಗವಾಗಿದೆ. ಇದು ತೆಲುಗು ಭಾಷೆಯ ಪ್ರಾಚೀನ ಸರ್ವನಾಮ ರೂಪವಾಗಿದೆ[೨೯]. ಕ್ರಿ.ಶ. ೭ ಮತ್ತು ೮ನೇ ಶತಮಾನಗಳ ಆದಿ ಭಾಗ[೩೦]ದ ಶಾಸನಗಳಲ್ಲಿ ವಾಣ್ಡು ಎಂದು ಪ್ರಯೋಗವಾಗಿರುವುದು ಕಂಡುಬರುತ್ತದೆ. ಇದಕ್ಕೆ ಕೋಲಾರ ಪ್ರದೇಶಗಳಲ್ಲಿ ಸಿಕ್ಕಿರುವ ಶಾಸನಗಳಲ್ಲಿ ಅವಂಗೆ[೩೧], ಅವನ್ಗೆ[೩೨] ಎಂಬ ಸಂವಾದಿ ಸರ್ವನಾಮ ರೂಪಗಳು ಬಳಕೆಯಾಗಿವೆ. ತೆಲುಗಿನ ಈ ಸರ್ವನಾಮ ಪ್ರಯೋಗವನ್ನು ಗಮನಿಸಿದರೆ ಮಿಕ್ಕ ದ್ರಾವಿಡ ಭಾಷೆಗಳಿಗಿಂತ ಬೇರೆಯಾಗಿ ಗೋಚರಿಸುತ್ತದೆ. ದಕ್ಷಿಣ ದ್ರಾವಿಡ ಭಾಷೆಗಳಾದ ಕನ್ನಡ, ತಮಿಳು, ಮಲೆಯಾಳಗಳಲ್ಲಿ 'ಅವನ್' ಎಂದಿದ್ದು, ತೆಲುಗು, ಕೊಲಾಮಿಗಳಲ್ಲಿ 'ವಾನ್ಱು', ರೂಪವಿದೆ. 'ಅವನ್' ಸರ್ವನಾಮದಲ್ಲಿರುವ ಪೂರ್ವದ ಅ ಸ್ವರವು ಅದರ ಮುಂದಿನ ವ್ಯಂಜನವಾದ ವಕಾರಕ್ಕೆ ಪ್ರಯುಕ್ತವಾದಾಗ 'ವಾ' ಎಂದು ದೀರ್ಘವಾಗುತ್ತದೆ. "ತಮಿಳಿನಲ್ಲಿನ 'ನ್ಱ' ಇರುವೆಡೆಗಳಲ್ಲಿ (ಎಂದರೆ ಹ್ರಸ್ವಸ್ವರಕ್ಕೆ ಪರದಲ್ಲಿ ವಿಶೇಷವಾಗಿ) ಕನ್ನಡದಲ್ಲಿ 'ನ್ದ' ಇರುವುದು ಸಾಮಾನ್ಯ"[೩೩]. ಇದೇ ರೀತಿ ತೆಲುಗಿನಲ್ಲಿ 'ನ್ಱ'ದಲ್ಲಿ ದ್ವಿತ್ವ 'ಱ' ಕಾರವು ಮೂರ್ಧನ್ಯ ಉಚ್ಚಾರ ಸ್ಥಾನದಲ್ಲಿ ಹುಟ್ಟುವುದರಿಂದ ಬಹುಶಃ 'ಱ' ಕಾರವು ಡಕಾರವಾಗಿರುವ ಸಾಧ್ಯತೆಯಿದೆ. ಇದರ ನಿಷ್ಪತ್ತಿಯನ್ನು ಹೀಗೆ ಗುರುತಿಸಬಹುದು: 'ವಾನ್ಱು>ವಾನ್ಡು>ವಾಡು.

### ೪.೦. ಇತರ ದ್ರಾವಿಡ ಭಾಷೆಗಳಿಗಿಂತ ತೆಲುಗು ಭಿನ್ನವಾಗಿರುವ ಬಗೆ

ದಕ್ಷಿಣ ದ್ರಾವಿಡ ಭಾಷೆಗಳಾದ ಕನ್ನಡ, ತಮಿಳು ಮೊದಲಾದ ನುಡಿಗಳಿಗಿಂತ ತೆಲುಗು ಮಧ್ಯದ್ರಾವಿಡ ಭಾಷೆಯಾಗಿ ಹಲವು ವಿಷಯಗಳಲ್ಲಿ ಭಿನ್ನವಾಗಿದೆ. ಹಳೆಗನ್ನಡವನ್ನು ಮತ್ತು ಹಳೆತೆಲುಗು ಭಾಷೆಗಳನ್ನು ಹೋಲಿಸಿದಾಗ ಹೆಚ್ಚು ವಿಷಯಗಳಲ್ಲಿ ತೆಲುಗು ಬೇರೆಯಾಗಿ ರೂಪುಗೊಂಡಿದೆ. ಇದಕ್ಕೆ ಸಂಬಂಧಿಸಿದಂತೆ ಕ್ರಿ.ಶ. ೯, ೧೦ನೇ ಶತಮಾನಗಳ ಶಾಸನಗಳಲ್ಲಿ ಇದರ ಪ್ರಯೋಗಗಳಿವೆ. ಅಂತಹ ಪ್ರಯೋಗಗಳಲ್ಲಿ ಕೆಲವನ್ನು ಇಲ್ಲಿ ಗಮನಸಬಹುದು.

**೪.೧. ಱ>ಡ:-**ಪ್ರಾಚೀನ ದ್ರಾವಿಡ ಭಾಷೆಗಳಲ್ಲಿನ 'ಱ'ಕಾರ ತೆಲುಗು ಮತ್ತು ಕನ್ನಡ ಭಾಷೆಗಳಲ್ಲಿ ಕ್ರಮವಾಗಿ 'ಡ'ಕಾರ, 'ಳ'ಕಾರಗಳಾಗಿ ಬದಲಾಗುತ್ತದೆ. ಕ್ರಿ.ಶ. ೯-

೧೦ನೇ ಶತಮಾನಗಳ ಶಾಸನಗಳಲ್ಲಿ ಕೆಲವು ಪದಗಳಲ್ಲಿ ಈ ಬದಲಾವಣೆಯನ್ನು ಕಾಣುತ್ತೇವೆ. ವೆಲಿಗಲ್ಲು ಶಾಸನದಲ್ಲಿ 'ತೋಟಿ' (=ತೆ.ತೋಟಿ) ಎಂಬ ಪ್ರಯೋಗವಿದೆ. ಇದಕ್ಕೆ 'ತೋಡಿ ಅಥವ ತೋಡ'[೩೪] ಎಂಬ ರೂಪ ಅದೇ ಶತಮಾನಗಳ ಶಾಸನಗಳಲ್ಲೇನೇ ಕಾಣಿಸುತ್ತದೆ. (ತ.ತೋಟಿನ್, ತೋಟಿ; ತೆ.ತೋಡ,ತೋಡಿ; ಮ.ತೋಟಿನ್, ತೋಟಿ.) [<ಕಆಡಿಚಿಟಿಜ ಕಅಆಡಿ *ತೋಟ್-ಅ;ಕಖಆಡಿ*ತೋ]‌[೩೫] ಹೀಗೆ ಟಿ>ಡವಾಗುವ ನಿಯಮ ಪದಗಳ ಕೊನೆಯಲ್ಲಿ ನಡೆಯುತ್ತದೆ. ಇದಕ್ಕೆ ದಕ್ಷಿಣ ದ್ರಾವಿಡ ಭಾಷೆಗಳ ಈಗಿನ ಆಡುಮಾತಿನಲ್ಲಿ ಹಲವು ಉದಾಹರಣೆಗಳಿವೆ:

| **ತಮಿಳು** | **ಕನ್ನಡ** | **ತೆಲುಗು** |
|---|---|---|
| ಕೋಟಿ | ಕೋಳಿ | ಕೋಡಿ |
| ಚೋಟಿ | ಚೋಳ | ಚೋಡ |
| ಏಟು | ಏಳ್ | ಏಡು |
| ಚುಟಿ | ಸುಳಿ | ಸುಡಿ |
| ನೆಟಿಲ್ | ನೆಳಲ್>ನೆರಳು | ನೀಡ |

ಕ್ರಿ.ಶ. ೮-೯ನೇ ಶತಮಾನದ ಶಾಸನಗಳಲ್ಲಿ ಸಂಖ್ಯಾವಾಚಿ ಏಟು ರೂಪವಿದ್ದು, ಅನಂತರದ ತೆಲುಗು ಶಾಸನಗಳಲ್ಲಿ 'ಏಡು' ಎಂಬ ಪ್ರಯೋಗವಿದೆ. ದ್ರಾವಿಡ ಭಾಷೆಗಳಾದ ತ;ಏಟು, ಮ;ಏಟು, ಕ; ಏಟು, ತು;ಏಳು, ತೆ; ಏಡು, ಕೊ.ಎಡ್, ಕು.ಒಡ್[೩೬] ಪದಗಳಲ್ಲಿ ಎರಡು ಬಗೆಗಳು ಕಂಡುಬರುತ್ತವೆ. ದಕ್ಷಿಣ ದ್ರಾವಿಡ ಭಾಷೆಗಳಲ್ಲಿ 'ಟಿ'ಕಾರವಿದ್ದು ದಕ್ಷಿಣ ಮಧ್ಯ ದ್ರಾವಿಡ ಭಾಷೆಗಳಲ್ಲಿ ಟಿಕಾರವಿರುವ ಕಡೆ ಡಕಾರವಾಗಿ ಬದಲಾಗಿರುವುದು ಈ ಎಲ್ಲಾ ಅಂಶಗಳಿಂದ ಸ್ಪಷ್ಟಪಡುತ್ತದೆ.

**೪.೨. ಳ>ಲ:**-ಪ್ರಾಚೀನ ತೆಲುಗು ಭಾಷೆಯ ವರ್ಣ ಬದಲಾವಣೆಗಳಲ್ಲಿ ಳ ಕಾರವು ಲಕಾರವಾಗುವುದು ಒಂದಾಗಿದೆ. ಆಡುಮಾತಿನಲ್ಲಿ ಇದಕ್ಕೆ ಹಲವು ಉದಾಹರಣೆಗಳು ದೊರೆಯುತ್ತವೆ. ಕುಳಮ್-ಕೊಲನು, ಆಳು-ಏಲು, ವಿಳಂಗು-ವೆಲುಗು ಮೊದಲಾದವು. ಈ ಪದಗಳಲ್ಲಿ ಪದಮಧ್ಯ, ಪದಾಂತ್ಯಗಳಲ್ಲಿ ಳಕಾರವಿರುವ ಕಡೆಗಳಲ್ಲಿ ಲಕಾರವಾಗಿರುವುದು ಕಾಣಿಸುತ್ತದೆ. ಶಾಸನಗಳಲ್ಲೂ ಈ ಬಗೆಯ ಪ್ರಯೋಗಗಳು ಕಂಡುಬರುತ್ತವೆ. ಪದಾಂತ್ಯ: ವೆಲಿಗಲ್ಲು ಶಾಸನದಲ್ಲಿ 'ಪಡಲ್' ಎಂಬ ಪದಪ್ರಯೋಗವಿದೆ. ಇದು 'ಪಡವಾಲು' ಪದದ ಮತ್ತೊಂದು ರೂಪವಾಗಿದೆ. ಇದರರ್ಥ 'ಸೇನಾಪತಿ'. ಇದು ದ್ರಾವಿಡ ಭಾಷೆಗಳಾದ ತಮಿಳು ಹಾಗೂ ಕನ್ನಡ ಭಾಷೆಗಳಲ್ಲಿ ಕ್ರಮವಾಗಿ ಪಟ್ಟೈಯಾಳ್, ಪಡವಾಳ್ ಪದಗಳು ಬಳಕೆಯಲ್ಲಿವೆ. [<ಕಆಡಿ *ಪಟ- ಮತ್ತು *ಆಳ್-ವ್ಯಕ್ತಿ][೩೭]. ಇದು ಪ್ರಾಕೃತದ ಭಡವಾಳೊ< ಸಂಸ್ಕೃತ ಭಟಪಾಲಃ[೩೮]ಎಂಬ ಪದದಿಂದ ನಿಷ್ಪತ್ತಿಯಾಗಿರುವುದು ಕಂಡುಬರುತ್ತದೆ. ಅದೇ ಶಾಸನದಲ್ಲಿ 'ವೆಳುಂಗು' ಎಂಬ ಪದದಲ್ಲಿ

ಳ-ಲವಾಗಿ ಬದಲಾಗದೆ ಹಾಗೆಯೇ ಉಳಿದಿರುವ ಪ್ರಯೋಗವಿದೆ. 'ವೆಳುಂಗು' ಸ್ಥಳವಾಚಕ ಇಂದು 'ವೆಲಿಗಲ್ಲು' ಎಂದಾಗಿದೆ. 'ವೆಳುಂಗು' ಪದವು ಮೂಲದ್ರಾವಿಡದ *ವೆಳ್-ಮೂಲರೂಪವಾಗಿದೆ.

**೪.೩. ಱಕಾರ ದ್ವಿತ್ವ:**- ಇದು ದ್ರಾವಿಡ ಭಾಷೆಗಳ ವಿಶಿಷ್ಟವಾದ ಧ್ವನಿ. ಹಳಗನ್ನಡದಲ್ಲಿದ್ದು ಹೊಸಗನ್ನಡದಲ್ಲಿ ರಕಾರವಾಗಿ ಬದಲಾಗಿದೆ. ಆದರೆ ತಮಿಳು, ಮಲೆಯಾಳಗಳಲ್ಲಿ ಈಗಲೂ ಬಳಕೆಯಲ್ಲಿದೆ. ಸೋಲಿಗರ ನುಡಿಯಲ್ಲಿ ಕೇವಲ ಧ್ವನಿ ಪ್ರಭೇದವಾಗಿ ಉಳಿದಿದೆ. ಕನ್ನಡದಲ್ಲಿ ಱಕಾರ ದ್ವಿತ್ವವಿಲ್ಲ. ಕುರ್ಕ್ಯಾಲ ಶಾಸನದಲ್ಲಿ 'ಱ' ಕಾರದ್ವಿತ್ವದಿಂದೊಡಗೂಡಿದ 'ಗುಣ್ಡಿಕಱ್ಱು', 'ವೆಂಗಿಪಱ್ಱು' ಪ್ರಯೋಗಗಳು ಕಂಡುಬರುತ್ತವೆ. ಕನ್ನಡದಲ್ಲಿ ಈ ಶಾಸನಕ್ಕೂ ಪೂರ್ವದಲ್ಲಿ ಇಂಥ ಪ್ರಯೋಗಗಳಿಲ್ಲವೆಂದೂ ಅದು ತೆಲುಗಿನ ಪ್ರಭಾವದಿಂದ ಬಳಕೆಯಾಗಿದೆ ಎಂದು ಎಂ.ಬಿ. ನೇಗಿನಹಾಳ ಅವರು ಅಭಿಪ್ರಾಯಪಟ್ಟಿದ್ದಾರೆ.[೩೯] ತೆಲುಗು ಶಾಸನಗಳಲ್ಲಿ ಱಕಾರ ದ್ವಿತ್ವವಿರುವ ಸ್ಥಳನಾಮಗಳು ಪ್ರಯೋಗಗೊಂಡಿವೆ. ಕೊಱ್ಱಪಱು[೪೦], ತಾಱುಪಱ್ಱು[೪೧], ಮಡಪಲ್ಲುಪಱ್ಱು[೪೨], ಮಲ್ಕಪಱ್ಱು[೪೩], ಮೊದಲಾದ ಪದಗಳಲ್ಲಿ ದ್ವಿತ್ವವಿದೆ. ಇಂಥ ದ್ವಿತ್ವಗಳಿಗೆ ಕಾರಣ ಬಹುಶಃ ಉಚ್ಚಾರಣೆಯಲ್ಲಿ ಸ್ವರದ ಮೇಲೆ ಬೀಳುವ ಒತ್ತು (ಆಘಾತ) ಎಂದು ಹೇಳಬಹುದು.

**೫.೦. ಸಮಾರೋಪ:**- ಪ್ರಕೃತ ಪ್ರಬಂಧದ ಒಟ್ಟು ಚರ್ಚೆಯನ್ನು ಕೂಲಂಕುಷವಾಗಿ ಗಮನಿಸಿದಾಗ ಈ ಕೆಳಗಿನ ಅಂಶಗಳು ಕಂಡುಬರುತ್ತವೆ:

* ಗಡಿ ಭಾಗದ ದ್ವಿಭಾಷಾ ಶಾಸನಗಳಲ್ಲಿ ಕನ್ನಡ ಮತ್ತು ತೆಲುಗು ಭಾಷೆಗಳ ಪರಸ್ಪರ ಕೊಡುಕೊಳ್ಳುವಿಕೆ ನಡೆದಿದೆ.

* ಈಗಿನ ಕೋಲಾರ ಹಾಗೂ ಚಿತ್ತೂರು ಜಿಲ್ಲೆಗಳು ಕ್ರಿ.ಶ. ಹತ್ತನೇ ಶತಮಾನದ ಹೊತ್ತಿಗೆ ದ್ರಾವಿಡ ಗಡಿಯ ಪ್ರದೇಶವಾಗಿತ್ತೆಂಬುದನ್ನು ದ್ವಿಭಾಷಾ ಶಾಸನಗಳಲ್ಲಿನ ದ್ರಾವಿಡ ಪದಪ್ರಯೋಗಗಳು ಎತ್ತಿ ತೋರಿಸಿವೆ.

ಕ್ರಿ.ಶ. ೯-೧೦ನೇ ಶತಮಾನದ ದ್ವಿಭಾಷಾ ಶಾಸನಗಳಲ್ಲಿನ ತೆಲುಗು ಪದಪ್ರಯೋಗಗಳು ತೆಲುಗು ಭಾಷೆಯು ದ್ರಾವಿಡದಿಂದ ಬೇರೆಯಾಗಿ ರೂಪುಗೊಂಡ ಬಗೆಯನ್ನು ತೋರಿಸುತ್ತಿವೆ.

## ಆಕರ ಗ್ರಂಥಗಳು


೧. E.I.XXX No.46.Insc. A.

೨. E.I. XXIV No.26.Insc.C.

೩. IAP.Wr.No.3, KUES.Vol.V pt.II.No.418.

೪. SII.X.No.604, IAP.Cud.No.45,1968. ಇದರಲ್ಲಿ ಸಾಲುಗಳ ವ್ಯತ್ಯಾಸವಿದೆ.

೫. IAP.Krm.No.3,

೬. ಆಂಧ್ರ ಪ್ರದೇಶದ ಕನ್ನಡ ಶಾಸನಗಳು, ಸಂಪುಟ ೫, ಭಾಗ ೧, ಪುಟ XXXIX.
೭. SII.X.641, 616, 635.
೮. E.I.VII.22-3;EC.X.Part.II.
೯. Inscriptions of The Pallavas.No.330, SII.XII.43, TTDI.I.No.2,
೧೦. E.I.XI.No.22(B)Plate.I, IA.XL.104-14, EI.XI.22-C and Plate I.
೧೧. EC. X.gb.76,69,72,73,75.
೧೨. EC.X.mb.203, 208,209,256.
೧೩. SII.IX.pt.I.No.401.
೧೪. SII.IX.pt.I.No.301.
೧೫. SII.IX.pt.I.No.400.
೧೬. SII.X..No.607, EI.XXVII.225-282, SII.X.No.606.
೧೭. ಶಾಸನ ಮಂಥನ, ಪುಟ ೩೪೫.
೧೮. ಬಾಣರಸರ ಶಾಸನಗಳು ಒಂದು ಅಧ್ಯಯನ, ಪುಟ ೨೪.
೧೯. ಕನ್ನಡ ಭಾಷೆಯ ಕಲ್ಪಿತ ಚರಿತ್ರೆಪುಟ ೧೯.
೨೦. ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ, ಪುಟ ೧೫೦.
೨೧. See DED.342 (B).
೨೨. See DED.342.
೨೩. DED.3493, and TVB 891.
೨೪. ತೌಲನಿಕ ದ್ರಾವಿಡ ವ್ಯಾಕರಣ, ಪುಟ ೪೧.
೨೫. ಪ್ರಾಚೀನಾಂಧ್ರ ಶಾಸನಾಲು, ಪುಟ XLV.
೨೬. SII.X.No.639.
೨೭. See DED.3209
೨೮. DED.2582.
೨೯. SII.X.No.606,625.A.D.
೩೦. SII.VI.No.593, E.I.XXX,pp280-284 ,SII.X.No.35.
೩೧. EC.X.mb.92.
೩೨. EC.X.mb.255.
೩೩. ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ, ಪುಟ ೭೯.
೩೪. SII.X.No.626, ಚಿತ್ತೂರು.
೩೫. BSOAS 12.355, See DED.2939.
೩೬. DED.772.
೩೭. DED.3195.
೩೮. Surya Raya Andhra Nighantuvu.

೩೯. ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ, ಪುಟ ೭೯.

೪೦. E.I.V,118-122,799-843.

೪೧. SII.I.No.38,945-50.

೪೨. SII.I.No.36.

೪೩. E.I. X,9-47,945.

## ಆಧಾರ ಗ್ರಂಥಗಳು

೧. Budaraju Radha Krishna. 1971. Early Telugu Inscriptions (Upto 1100 A.D) . : Andhrapradesh sahitya akademi: Hydarabad.

೨. Ed.by.B I.Rice : Epigraphia carnatica,Vol- X Kolar.

೩. Burrow,T, and Emeneau.M.B.1984. A Dravidian Etymological Dictionary . Clarendon :.Oxford.

೪. Epigraphia Indica, Vols,5,7,10,11,24,27,30 ;Archaeological Survey of India. New Delhi.

೫. South Indian Inscriptions, Vols,5,6,9Pt.1,10 ;Archaeological Survey of India. New Delhi.

೬ Ed.Mahalingam,T.V.1988, Inscriptions of The Pallavas, ICHR and Agam Prakashan.Delhi.

೭. ಇಂ:ರಾಬರ್ಟ್ ಕಾಲ್ಡ್‌ವೆಲ್. ಮಾಧವ ಪೆರಾಜೆ. ೨೦೦೫. ತೌಲನಿಕ ದ್ರಾವಿಡ ವ್ಯಾಕರಣ. ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ. ಹಂಪಿ.

೮. ಡಾ. ಕೆ.ಆರ್. ಗಣೇಶ್, ಡಾ. ಆರ್. ಶೇಷಶಾಸ್ತ್ರಿ, ೨೦೦೧, ಆಂಧ್ರ ಪ್ರದೇಶದ ಕನ್ನಡ ಶಾಸನಗಳು ಭಾಗ–೧. ಕನ್ನಡ ವಿ.ವಿ. ಹಂಪಿ.

೯. ಎಂ.ಬಿ. ನೇಗಿನಹಾಳ, ೧೯೮೨, ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ. ಪ್ರಸಾರಾಂಗ. ಕರ್ನಾಟಕ ವಿಶ್ವವಿದ್ಯಾಲಯ.ಧಾರವಾಡ.

೧೦. ಪಿ.ವಿ.ಕೃಷ್ಣಮೂರ್ತಿ, ೨೦೦೯, ಬಾಣರಸರ ಶಾಸನಗಳು ಒಂದು ಅಧ್ಯಯನ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು.

೧೧. ಪಿ.ವಿ. ಕೃಷ್ಣಮೂರ್ತಿ, ೨೦೧೧, ಶಾಸನ ಮಂಥನ, ತುಮಕೂರು ವಿ.ವಿ. ತುಮಕೂರು.

೧೨. ಬಿ.ಆರ್. ಭಾರತೀ, ೨೦೧೧, ರಾಷ್ಟ್ರಕೂಟರ ಶಾಸನಗಳು, ಭಾಗ–೧, ೨. ಪ್ರಸಾರಾಂಗ. ಮೈಸೂರು ವಿ.ವಿ. ಮೈಸೂರು.

# ಮನುಶ್ಯ ಸಮ್ಮಂದಗಳ ಬಂದ

◆

ಎಂ.ಜಿ. ವಾರಿ

## ೦.೧. ಮನುಶ್ಯ ಸಮ್ಮಂದಗಳ ಬಂದ

* (ದೇಸಿ ನೆಲೆಯಲ್ಲಿ ಕಾಣುವ) ಮನುಶ್ಯ ಮನುಶ್ಯರ ನಡುವಿನ (ಕವ್ವುಂಬಿಕ+ ವಿಶಾಲ ಮಾನವೀಯ ನೆಲೆಯ) ಸಮ್ಮಂದ.

* ಮನುಶ್ಯ ಮತ್ತು ಇತರ ಪ್ರಾಣಿ, ಪಶು, ಪಕ್ಶಿಗಳೊಂದಿಗಿನ ಸಮ್ಮಂದ.

* ಮನುಶ್ಯ ಮತ್ತು ಜೀವ (?) ಇಲ್ಲದ ಪ್ರಕ್ರುತಿಯೊಂದಿಗಿನ ಸಮ್ಮಂದ.

* ಮನುಶ್ಯ ಮತ್ತು ಬಾಶೆ, ದರಮ, ಮತ್ತಿತರ ಸಾಂಸ್ಕ್ರುತಿಕ ಪರಂಪರೆಯೊಂದಿಗಿನ ಸಮ್ಮಂದ.

* ಮನುಶ್ಯ ಮತ್ತು (ಒಳ ಮತ್ತು ಹೊರ ಜಗತ್ತಿನ ಅಂತರಂಗದ ಸಮ್ಮಂದ) ಒಳಿತು–ಕೆಡುಕುಗಳ ಸಮ್ಮಂದ.

ಮನುಶ್ಯ ಕಶೇರುಕ ವರ್‍ಗಕ್ಕೆ ಸೇರಿದ ಪ್ರಾಣಿ; ಇತರ ಕಶೇರುಕಗಳಿಗೆ ಇರದಿದ್ದ ಒಂದು ವಿಶಿಸ್ಟ ಶಕ್ತಿ ಮನಸಿಗಿದೆ. ಹೀಗೆ ಬಾಲ್ಯದಲ್ಲಿ ಪಟ್ಯ ವಿಶಯವಾಗಿ ಓದಿದ ನೆನಪಿದೆ. ಈ ರೀತಿ ಮನುಶ್ಯ ತನ್ನ ಸುತ್ತ–ಮುತ್ತ ಇರುವ ವಸ್ತು–ವಿಶಯಗಳನ್ನು ಕಾಣುವ, ಕಂಡರಿಯುವ, ಅವುಗಳಲ್ಲಿ ಸರಿ–ತಪ್ಪುಗಳನ್ನು ವಿವೇಚನೆಗೆ ಒಳಪಡಿಸುವ, ಶಕ್ತಿ–ಸಾಮರ್‍ತ್ಯವೂ ಆತನಿಗಿದೆ. ಇಂತಿರುವಾಗ ಹೊರಜಗತ್ತಿನೊಂದಿಗೆ ಇರುವ(ಸಂಭಂದ>) ಸಮ್ಮಂದವೆ ಕುತೂಹಲದೊಂದಿಗೆ ಅಚ್ಚರಿಯನ್ನೂ ಮೂಡಿಸುತ್ತದೆ. ಈ ಸರಮಾಲೆಯ ಸಮ್ಮಂದದ ವಿಶಯ ಮೂರ್‍ತರೂಪದಿಂದ ನಿರಾಕಾರದೆಡೆಗೆ ಸಾಗುತ್ತಿದೆ.

ಇಲ್ಲಿ ಈ ಐದು ಅಂಶಗಳುಳ್ಳ ಸರಮಾಲೆಯನ್ನು (ಬೇಕಿರಲಿ–ಬೇಡವಿರಲಿ>) ಬೇಕಿರಲಿ–ಬೇಡಿರಲಿ (-UUU/-UUU) (ಕೊರಳಿಗೆ>) ಕೊಳ್ಳಿಗೆ ತಗುಲುವ ಹಾಗೆ ಹಾಕಿಕೊಳ್ಳಲೇಬೇಕಿದೆ. ಆಗ ಸಮತೋಲಿತ ಸಮತೂಕದ ಹೆಜ್ಜೆ ನಡಿಗೆಯೊಂದಿಗೆ

ಸಾಗುವಲ್ಲೆ ತನ್ನತನದ ವ್ಯಕ್ತಿತ್ವದ ರೂಪು-ರಚನೆಯ ನಿರ್ಮಾಣ ಆಗಲಿದೆ. ಇದು ನಮ್ಮತನವನ್ನು ಬಿಂಬಿಸುವ ಒಂದು ಮಾಪುಗೋಲು ಅಹುದು.

ಮೊದಲ ಹಂತದ ಸಮ್ಮಂದವುಳ್ಳ ವಿವೇಚನೆ ಮಾತ್ರ ಇಲ್ಲಿ ನಡೆದಿದೆ. ಬಾಶಿಕ+ಬಾವನೆಗಳುಳ್ಳ (ತಾಳ-ಮೇಳದಿಂದ ಕೂಡಿದ) ಸಮ್ಮಂದದ ನಿರೂಪಣೆಗೆ ಸೀಮಿತವಾದ ವಿವರಣೆ ಇಲ್ಲಿದೆ.

ಒಂದೇ ಮನುಶ್ಯ ಜಾತಿಯ ಸಮ್ಮಂದದ ಒಳಗನ್ನು (ದೇಸಿ ಪರಂಪರೆ ಮತ್ತದರ ಆಳ-ಅಗಲಗಳೊಂದಿಗೆ) ಬಿಚ್ಚಿಡುವ ಯತ್ನವೇ ಇಲ್ಲಿದೆ.

**೧.೧. ಕವ್ವುಂಬಿಕ ಜೋಡುನುಡಿಗಳು**

ಕನ್ನಡ ಬಾಶೆಯ ಪದಪ್ರಪಂಚದಲ್ಲಿ[೧] ಜೋಡುನುಡಿಗಳಿಗೆ ಒಂದು ವಿಶಿಸ್ಟ ಪಾತಳಿಯ ನೆಲೆಯಲ್ಲಿ ಗುರುತಿಸಿಕೊಳ್ಳುವ ಹಾಗೆ ಬಳಕೆಯಾಗುತ್ತಿವೆ. ಇವುಗಳಲ್ಲೆ ಕುಟುಂಬ ಮಾದರಿಯ ರೂಪ-ಸ್ವರೂಪ ಪಡೆದ ನುಡಿಜೋಡುಗಳಿವೆ. ಈ ರೀತಿ ಹತ್ತಿದ ಕುಟುಂಬ ಎಂದರೆ ರಕ್ತ ಹಂಚಿಕೊಂಡಿರುವುದೇ ಆಗಿರುತ್ತದೆ. ಇಂತ ಗಳಿಗೆಯಲ್ಲಿ ಇದನ್ನು ನಜದ ನೆಲೆಯ ರಕ್ತ ಸಮ್ಮಂದಿ[೨] ಕುಟುಂಬ ಎಂದೇ ಕಂಡುಕೊಳ್ಳಬೇಕು.

ಇದೇ ರೀತಿ ಬಾಶಿಕ ನೆಲೆಯಲ್ಲೂ ಗುರುತಿಸಬಹುದಾದ ವಿಶಿಸ್ಟ ನುಡಿಜೋಡು ಮತ್ತೊಂದು ಬಗೆಯದಾಗಿವೆ. ಇವುಗಳ ವ್ಯಾಪ್ತಿ ಮತ್ತು ಬಳಕೆ ಸೀಮಿತವಾದುದು. ಇವುಗಳ ಬಳಕೆಯ ಹರಹನ್ನು ಹನ್ನೆರಡು ಇಲ್ಲವೆ ಹದಿಮೂರೆಂದು ಕಟ್ಟಿಹಾಕಬಹುದು.

ಈ ಬಗೆಯ ಜೋಡುನುಡಿಗಳು ಬೇರು ಮಟ್ಟದಲ್ಲಿ ಕ್ರಿಯಾದಾತುಗಳೆರಡು ಅಂಗಪದಗಳಂತೆ ಬಳಕೆಗೊಳ್ಳುವುದಿದೆ. ಈ ಕ್ರಿಯಾದಾತುವಿನ ಅಂಗಪದಗಳಿಂದ ಮೂರ್‍ನಾಕು ರೂಪದ (ಸ್ವಲ್ಪ ಬೇರೆ ಬೇರೆ ಉಚ್ಚಾರಣೆ ಹೊಂದಿದ) ನುಡಿಜೋಡುಗಳು ಸಿದ್ದಗೊಳ್ಳುತ್ತವೆ.

ಹೀಗೆ ಸಿದ್ದಗೊಂಡ ಮೂರ್‍ನಾಕು ಜೋಡಿನುಡಿಗಳನ್ನು ವಾಕ್ಯರಚನೆಯ ಹಿನ್ನಲೆಯೊಂದಿಗೆ 'ಪದರೂಪ'ಗಳೆಂದು ಗುರುತಿಸಲಾಗುವುದು. ಇಂತು ಈ ಪದರೂಪಗಳೇ ಅಂಗಪದಗಳಾಗಿ ಬಾಗಿಯಾಗುತ್ತವೆ. ಇಂತಹ ಅಂಗಪದಗಳಾಗಿ ತೋರುವ ಉಲಿ ಉಚ್ಚಾರಣೆಯಲ್ಲಿ ಸಾಕಸ್ಟು ತದ್ರೂಪ ಹೋಲಿಕೆ ಕಂಡು ಬರುತ್ತದೆ. ಆದರೆ ತಿರುಳಿನ ನೆಲೆಯಲ್ಲಿ ಅಲ್ಪ-ಸ್ವಲ್ಪ ಬದಲಾಗಬಹುದು ಅಸ್ಟೆ! ಇನ್ನು ಇವು ಸಹಜವಾಗಿ ಬಾಶಿಕ ರಚನೆಗೆ ಸಮ್ಮಂದಿಸಿರುವುದರಿಂದ ಇವುಗಳನ್ನು 'ರಾಚನಿಕ ಸ್ವರೂಪದ' ನುಡಿಗಳು ಎಂಬ ಹಣೆಪಟ್ಟಿಯಿಂದ ಗುರುತಿಸಲಾಗುವುದು. ಇವುಗಳಿಗೆ ಕೊಡುವ ಉದಾಹರಣೆಗಳಿಂದ ಮನದಟ್ಟು ಮಾಡಿಸಲು ಸಾದ್ಯ.

ಸನಿಹ ಸಮ್ಮಂದಿ ಕವ್ವುಂಬಿಕ ಜೋಡುನುಡಿಗಳು ೨.೧.

(೧.೧) ಕವ್ವುಂಬಿಕ ಜೋಡುನುಡಿಗಳು <

ರಾಚನಿಕ ಸ್ವರೂಪದ ಕವ್ವುಂಬಿಕ ಜೋಡುನುಡಿಗಳು ೩.೧.

## ೨.೧. ಹತ್ತಿದ/ಹತ್ತಿರ ಸಮ್ಮಂದಿ ಕವ್ಪುಂಬಿಕ ಜೋಡುನುಡಿಗಳು

ಈ ತರಹದ ಜೋಡುನುಡಿಗಳ (ನೋಡಿ.೨.೧.೧.) ವಿವರಣೆ ಕೊಡುವಾಗಲಂತು ಒಡನೆ ನಮ್ಮೆದುರು ಹಾಜರಾಗುವ ಶಬ್ದಚಿತ್ರದ ನುಡಿಜೋಡು ಎಂದರೆ 'ಕಳ್ಳು-ಬಳ್ಳಿ' ಎಂಬುದೆ! ಈ ಕಳ್ಳು-ಬಳ್ಳಿ ಜೋಡುನುಡಿಯ ಉಲಿ ಉಚ್ಚಾರಣೆಯಲ್ಲೆ ಒಂದು ಸೊಗಸಿದೆ. ಇಲ್ಲಿ 'ಬಳ್ಳಿ' ಎನ್ನುವ ರೂಪಕದ ಕಲ್ಪನೆಯೇ ವಿಶಿಸ್ಟವಾದುದು. ಬಳ್ಳಿಯೊಂದು (ಹೇಗೆ+ಹೇಗೊ>) 'ಹ್ಯಾಗ್ಯಾಗೋ' (=ಹಲವು ಬಗೆಯಲ್ಲಿ) ಬಾಗಿ, ಬಳುಕುತ್ತ, ಯಾವುದಾದರೂ ಒಣಗಿದ ಟೊಂಗೆಯ ಟಿಸಿಳಿನ ಆಸರೆ ಸಿಕ್ಕರೆ ಸಾಕು, ತನ್ನ ತೋಳ್ತೆಕ್ಕೆಯಿಂದ ಗಟ್ಟಿಯಾಗಿ ಅಪ್ಪಿಕೊಂಡು, ಸುತ್ತು ಹಾಕಿಕೊಳ್ತಾ, ಚಾಚುವಿಕೆಯನ್ನು ವಿಸ್ತರಿಸಿಕೊಳ್ತಾ, ಮುನ್ನಡೆಯುತ್ತದೆ. ಹಾಗೆಯೇ ಕಳ್ಳಿನ ಸಮ್ಮಂದದ ಚಾಚುವಿಕೆಯೂ ಆಗಿದೆ!

ಉದಾಹರಣೆಗೆ ಉತ್ತರಕರ್ನಾಟಕದ ಅಡ್ಡೆಸರಿನ (ಅಡ್ಡ+ಹೆಸರು) ಚಿಗುರು ಕೊನರುವಿಕೆಯ ಸ್ವರೂಪವೇ ಚಮತ್ಕಾರವಾಗಿ ತೋರುತ್ತದೆ. ಒಂದು ಮನೆತನದ ಹೆಸರಿನವರು (ಯಾವ+ಯಾವ>) 'ಯಾವ್ಯಾವ' ಕಾರಣದಿಂದ 'ಯಾವ್ಯಾವ' ನೆಲೆಗೆ ನುಸುಳಿಕೊಂಡು ಇಲ್ಲವೆ ತೆವಳಿಕೊಂಡು ಹೋಗಬೇಕಾಗಿ ಬರುತ್ತದೆ. ಇನ್ನೇನು ಪೂರ್ತಿ ಲಯವಾಗುವ ಅವಸ್ತೆಯಲ್ಲೂ ಅರಿವಿಗೆ ಬಾರದ ಹಾಗೆ, ಒಂದು ಹುಲ್ಲುಕಡ್ಡಿಯ ಆಸರೆಯೊಂದಿಗೆ ಗಟ್ಟನೆಲೆ ಕಂಡುಕೊಂಡು, ಮತ್ತೆ ಚಿಗುರೊಡೆದು ಬೆಳೆಯುತ್ತಿರುತ್ತದೆ. ಈ ಅರುವಿನ ಕುರುಹೇ ಒಂದು ಚಣ ವಿಸ್ಮಯವನ್ನೇ ಹುಟ್ಟು ಹಾಕುತ್ತದೆ.[೩]

ಇದೇ ರೀತಿ ಮತ್ತಸ್ಟು ಜೋಡುನುಡಿಗಳು (ನೋಡಿ.೨.೧.೨) ಮಾನವೀಯ ಸಮ್ಮಂದವನ್ನು ಗಟ್ಟಿಗೊಳಿಸುವ ನೆಲೆಯಲ್ಲೆ ಸುತ್ತುಹಾಕುತ್ತಲೇ ಇರ್‍ತವೆ. ನಮ್ಮ ಆದಿಕವಿ(?) ಪಂಪನೇ ಹೇಳಿದ್ದು, "ಮನುಷ್ಯ ಜಾತಿ ತಾನೊಂದೆ ವಲಮ್" ಎಂಬುದು ಎಂದೆಂದಿಗೂ ಬೆಳ್ಳಂಬೆಳಕನ್ನು ಹೊರಚೆಲ್ಲುವಂತದು! ಇದೀಗ ಆ ಬೆಳಕಿನೊಂದಿಗೆ ಮುಕಾಮುಕಿಯಾಗುತ್ತ ಗಮನಿಸಬಹುದು.

(ಹತ್ತಿದ) ಕಳ್ಳು-ಬಳ್ಳಿ ನೆಲೆಯ ವಿಂಗಡನೆ ೨.೧.೧.

೨.೧.) ಹತ್ತಿದ/ಹತ್ತಿರ ಸಮ್ಮಂದಿ ಕವ್ಪುಂಬಿಕ ನುಡಿಜೋಡುಗಳು

(ಹತ್ತಿರ) ಮಾನವ ಸಮ್ಮಂದಿ ನೆಲೆಯ ವಿಂಗಡನೆ. ೨.೧.೨.

(೨.೧.೧.) ಈ ಹತ್ತಿದ ಕಳ್ಳು-ಬಳ್ಳಿಯ ಜೋಡುನುಡಿಗಳನ್ನು ಮತ್ತೆ ಎರಡು ಬಾಗವಾಗಿ ಗುರುತಿಸಿಕೊಳ್ಳುವ ಹಾಗೆ ನಚ್ಚಳವಾಗಿ ಕಂಡುಕೊಳ್ಳಬೇಕಿದೆ.

ಸಹಜ ನೆಲೆಯ ವಿಂಗಡಣೆ ೨.೧.೧.೧.

ಕಳ್ಳು-ಬಳ್ಳಿ ನೆಲೆಯ ವಿಂಗಡಣೆ :

ತಿರುಳಿನ ನೆಲೆಯ ವಿಂಗಡಣೆ ೨.೧.೧.೨.

**೨.೧.೧.೧. ಸಹಜ ನೆಲೆಯ (ಕಳ್ಳು-ಬಳ್ಳಿ ನೆಲೆಯ) ನುಡಿಜೋಡುಗಳು :** ಇವು ಮಾತ್ರ ಇನ್ನಸ್ಟು 'ಸಾತಿದಾರಿ'ಗಳೆನ್ನುವ ಹಾಗೆ ಬಳಕೆಯಾಗುವ ನುಡಿಜೋಡುಗಳು.

| | | | |
|---|---|---|---|
| ೧. ಅಕ್ಕ-ತಂಗಿ | : | -U/-U | ಅಚ್ಚಗನ್ನಡ |
| ೨. ಅಣ್ಣ-ತಮ್ಮ | : | -U/-U | |
| ೩. ಅಪ್ಪ-ಅವ್ವ | : | -U/-U | |
| ಅಪ್ಪ-ಅಮ್ಮ | : | -U/-U | |
| ತಂದಿ-ತಾಯಿ | : | -U/-U | |
| ೪. ಗಂಡ – ಹೆಂತಿ. | : | -U/-U | |
| ೫. ಅಜ್ಜ-ಅಜ್ಜಿ | : | -U/-U | |
| ೬. ಅಪ್ಪ-ಮಗ | : | ಎರಡಕ್ಕರ/ಎರಡಕ್ಕರ | |
| ಅಚ್ಚಗನ್ನಡ | | | |
| ಅಪ್ಪ-ಮಕ್ಳು | : | -U/-U | |
| ೭. ಅತ್ತಿ-ಮಾಂವ | : | -U/-U | |
| ೮. ಅತ್ತಿ-ಸೊಸಿ | : | ಎರಡಕ್ಕರ/ಎರಡಕ್ಕರ | |

**ವಾಕ್ಯದ ಉದಾಹರಣೆಗಳು**

೧. 'ಮಾಡಾ ಕತ್ತರ್ಸಗೊಂಡು (ಹಗಲಿ-ರಾತ್ರಿಯೆಲ್ಲಾ) ಬೀಳುವಾಂಗ ಮಳೀ ಆದಾಗ, ಬಾದಾಮ್ಯಾಗ ಅದ್ರಾಗೂ ಬೂತನಾತ್ನ ಗುಡಿ ಹೊಂಡದ್ದಂಡ್ಯಾಗ ಅಕ್ಕ-ತಂಗಿ ದಿಡಗನ್ನ ನಿಂತ ನೋಡೀದ್ರ, ಯಾಡ್ಡ ಕಣ್ ಸಾಲಾಂಗಿಲ್ಲಾ ಅನ್ಸುತ್ತ ನೋಡ್ರೆವಾ!!'.

(ಇಡೀ ಬೂಮಿ ಆಕಾಶ ಒಂದಾಗಿದೆ ಎನ್ನುವಂತೆ ರಾತ್ರಿಯೆಲ್ಲಾ ಮಳೆಯಾದರೆ, ಪೂರ್ವದಂಚಿನ ಹೊಂಡದ್ದಂಡೆಯಲ್ಲಿ ಅಂದರೆ ಬೂತನಾತ ಗುಡಿಗಳ ಹಿಂಬಾಗದ ಹತ್ತಿರ ಗುಡ್ಡದ ಮೇಲಿಂದ ಬೀಳುವ ಅಕ್ಕ-ತಂಗಿ ದಿಡಗನ್ನ ಕಣ್ಣು ಹಾಯಿಸಿ ನೋಡಿದ್ದೆ ಆದರೆ, ಮಯ್ಯೆಲ್ಲಾ ಪುಳಕಗೊಳ್ಳತ್ತದೆ, ನೋಡ್ರೆವ್ವಾ!)

(ಮೋಡ>ಮಾಡಾ, ಮಾಡಾ ಕತ್ತರ್ಸಗೊಂಡು ಬೀಳು-(ನುಡಿಗಟ್ಟು) ಭೂಮಿ ಆಕಾಶ ಒಂದಾಗಿದೆ ಎನ್ನುವಂತೆ ಮಳೆಯಾಗು, ಹೊಂಡದ್ದಂಡ್ಯಾಗ=ಕೆರೆಯ ದಡದಲ್ಲಿ, ಅನ್ಸುತ್ತ ನೋಡ್ರೆವ್ವಾ<ಅನ್ನಿಸುತ್ತದೆ ನೋಡಿರವ್ವಾ!, ದಿಡಗನ್ನ= ಜಲಪಾತವನ್ನು, ಯಾಡ್ಡ<ಎರಡು.)

೨. 'ಅವರಿಬ್ರ ಆಕಾರ, ಬಣ್ಣ ನೋಡೀದ್ರ, ಅಣ್ಣ-ತಮ್ಮ ಅನ್ನು ಹೋಲ್ಕಿ ಕಾಣಸ್ತಯ್ತಿ'.

(ಅವರಿಬ್ರ<ಅವರಿಬ್ಬರ, ಅನ್ನು<ಅನ್ನುವಂತಹ, ಹೋಲಿಕೆ>ಹೋಲಿಕಿ>ಹೋಲ್ಕಿ.)

೩. 'ನನಗಿನ್ನೂ ಅರು ಬರುದ್ರಾಗ, ನಮ್ಮಪ್ಪಾ-ಅವ್ವ ರಜಕಾರರ ಹಾವಳಿಗೆ ಸಿಕ್ಕೊಂಡು, ಕಣ್ಮುಚ್ಚಿದರೆಂದು ಸಣ್ಣಜ್ಜ ಹೇಳಿದ್ದು, ನನಗಿನ್ನೂ ನೆನಪಯ್ತಿ'.

(ನನಗೆ ಜಗತ್ತಿನ ಪರಿವೆ ಮೂಡುವಸ್ವರಲ್ಲಿ ನಮ್ಮಪ್ಪ-ಅವ್ವ ನಿಜಾಮ ರಾಜ್ಯದ ರಜಕಾರರ ದಾಳಿಗೆ ಸಿಕ್ಕಿಕೊಂಡು ಸಾವನ್ನಪ್ಪಿದರೆಂದು ನಮ್ಮ ಸಣ್ಣಜ್ಜ ಹೇಳಿದ್ದು ಇನ್ನೂ ನೆನಪಿದೆ.)

(ಅರು<ಅರಿವು, ಕಣ್ಮುಚ್ಚು (ನುಡಿಗಟ್ಟು)=ಸಾವನ್ನಪ್ಪು, ಹಾವಳಿ=ದಾಳಿ.)

೪. 'ಮುಪ್ಪಿನ ಕಾಲಕ್ಕು ಗಂಡ-ಹೆಂತಿ ಒಬ್ಬರ್ನೊಬ್ರು ಬಿಟ್ಟ ಇರ್ತಿದ್ದಿಲ್ಲಾ ನೋಡು; ಹೊರಗ ಹೋದ್ರ ಸಾಕು ಅವನ ಹಿಂದ ಇಕಿ, ಇಲ್ಲಾ ಇಕಿ ಹಿಂದ ಅಂವಾ, ಕೂಡೇ ಅಡ್ಡ್ಯಾಡ್ತಿದ್ರು!'

(ಒಬ್ಬರನ್ನ+ಒಬ್ರು>ಒಬ್ಬರ್ನೊಬ್ರು, ಇಲ್ಲಾ>ಇಲ್ಲವೆ, ಈಕೆ>ಇಕಿ.)

೫. 'ಹಿಂದ್ಕ, ಒಂದ ಮನ್ಯಾಗ ಅಕ್ಕ-ತಂಗಿಗೋಳು, ಅಣ್ಣ-ತಮ್ರು, ಸೊಸ್ತೇರು, ಅವರ್ ಮಕ್ಳು, ಮೊಮ್ಮಕ್ಳು ಅವರ್ಗೆಲ್ಲಾ ಬಯ್ದು ಬುದ್ದಿ ಹೇಳೊ, ಮುಪ್ಪಾನ ಮುಪ್ಪಿನ ಅಜ್ಜ-ಅಜ್ಜಿಗಳು/ಅಜ್ಜಿ-ಅಜ್ಜಂದ್ರು ಇರು ಒಂದೇ ಕುಟುಂಬ ಇರ್ತಿತ್ತಂತ!'

(ಹಿಂದ್ಕ=ಪ್ರಾಚೀನ ಕಾಲ, ಅಂದರೆ ಹಲವು ದಶಕಗಳ ಹಿಂದೆ, ಶತಮಾನದ ಹಿಂದೆ ಎನ್ನಬಹುದು, ಅಣ್ಣ-ತಮ್ಮರು>ಅಣ್ಣ-ತಮ್ರು, ಮುಪ್ಪಾನ ಮುಪ್ಪಿನ=ಮುಪ್ಪನ್ನೆ ಹಾಸಿಕೊಂಡು, ಮುಪ್ಪನ್ನೆ ಹೊದ್ದುಕೊಂಡು.)

೬ 'ಅಪ್ಪ-ಮಕ್ಳು, 'ಕಸ್ಟಕ್ಕ ಕರಿಬ್ಯಾಡ್ರಿ, ಊಟಕ್ಕ ಮರಿಬ್ಯಾಡ್ರಿ' ಅನ್ನೊ ಪಯ್ಕಿ, ಅವ್ರು!'
(ಕಷ್ಟಕ್ಕೆ>ಕಸ್ಟಕ್ಕ, ಮರೆಯಬೇಡಿರಿ>ಮರಿಬ್ಯಾಡ್ರೀ, ಅನ್ನುವ>ಅನ್ನೋ, ಪಯ್ಕಿ-ಜಾತಿ, ಕುಲ, ಪಂಗಡ.)

೭ 'ಇಡೀ ಮನಿಗಿ ಇರುವಾಕಿ ಒಬ್ಬಕಿ ಸೊಸಿ, ಮುದ್ದ ಮಾಡು ಗಂಡ ಸಿಕ್ಕಾನಾ, ತಿಳುವಳ್ಕಿ ಇರೊ ಅತ್ತಿ-ಮಾಂವ ಅದಾರಾ, ಇನ್ನೇನ ಬೇಕ ನಿನಗ.....?!'

(ಒಟ್ಟಾರೆ ತಿರುಳು: ಬಯಸಿದ್ದೆಲ್ಲವೂ ಅಂಗಯ್ ಮೇಲಿದೆ; ತುತ್ತಿನೊಂದಿಗೆ ಉಣ್ಣುವುದೊಂದೇ......!)

೮. 'ಒಂದ ಮನ್ಯಾಗಿದ್ರು, ಕಡೀತನಕ ಅತ್ತಿ-ಸೊಸಿ ಇಬ್ರು ಹಾಂವು-ಮುಂಗಲಿ ಹಾಂಗ, ಗುದ್ದ್ಯಾಡ್ತಿದ್ರು!'

(ಒಂದ<ಒಂದೇ, ಮನ್ಯಾಗ+ಇದ್ದರೂ>ಮನ್ಯಾಗಿದ್ರು, ಹಾಂಗ<ಹಾಗೆ, ಕಡೆಯತನಕ>ಕಡೇತನಕ>ಕಡೀತನಕ=ಬದುಕಿನುದ್ದಕ್ಕೂ. ಗುದ್ದು+ಆಡು> ಗುದ್ದಾಡು>ಗುದ್ದ್ಯಾಡು (ಕೂಡುಪದ)=ಜಗಳಾಡು, ಕಚ್ಚಾಡು.)

೨.೧.೧.೨ ತಿರುಳಿನ ನೆಲೆಯ ಏಂಗಡಣೆ : ಇಲ್ಲಿ ಬಳಕೆಯ ಅರ್ತ ಮುಂಚೂಣಿಯಲ್ಲಿರುತ್ತದೆ.

ಅಪ್ಪ–ಅವ್ವ ┐
ಅಪ್ಪ–ಅಮ್ಮ ├ ಹಡೆದವರು.
ತಂದೆ–ತಾಯಿ ┘

ಅಕ್ಕ–ತಂಗಿ ┐ ಬೆನ್ನಿಗೆ ಬಿದ್ದವರು.
ಅಣ್ಣ–ತಮ್ಮ ┘

ಗಂಡ/ಡಾ–ಹೆಂತಿ – ಜೀವನ ಸಂಗಾತಿಗಳು.

ಅತ್ತಿ–ಸೊಸಿ ┐ ಗಂಡನ ಮನೆಯಲ್ಲಿ ಗುರುತಿಸುವಿಕೆ/ಗುರುತಿಸಿಕೊಳ್ಳುವಿಕೆ.
ಅತ್ತಿ–ಮಾಂವ ┘

ಅಪ್ಪ–ಮಗ/ಮಕ್ಳು – ತಂದೆ, ಮಕ್ಕಳು.

ಅಜ್ಜ–ಅಜ್ಜಿ – ಮನೆತನದ ಹಿರಿಯರು.

೨.೧.೨. ಮಾನವ ಸಮ್ಮಂದಿ ನೆಲೆಯ ಜೋಡುನುಡಿಗಳು

ಇನ್ನು ಕೆಲವು ಜೋಡುನುಡಿಗಳು ಒಮ್ಮೆ ನೇರವಾಗಿ ಮಗದೊಮ್ಮೆ ಪರೋಕ್ಶವಾಗಿ (ಹಾಗೆಂದರೆ ಕೆಲವು ಅಲ್ಲಗಳೆವ ಜೋಡುನುಡಿಗಳ ಮೂಲಕ) (ಸಂಬಂಧ>)ಸಮ್ಮಂದದ ಬಂದವನ್ನು ಒಂದಿಲ್ಲ ಒಂದು ರೀತಿ ತಿಳಿಸುವಂತವೇ ಆಗಿವೆ. ಅವುಗಳೆಂದರೆ,

೧. ಕಳ್ಳು–ಬಳ್ಳಿ – ಹತ್ತಿ(ರ)ದ ರಕ್ತ ಸಮ್ಮಂದ.

೨. ಕಳ್ಳು–ಕಕಲಾತಿ – ಹತ್ತಿರ/ದೂರ ಸಮ್ಮಂದದ ಸೆಳೆತದ ಪ್ರೀತಿ.

೩. ಹತ್ತಿಲ್ಲ–ಹೊಂದಿಲ್ಲ – ಸಮ್ಮಂದವನ್ನು ಅಲ್ಲಗಳೆಯುವಿಕೆ.

೪. ಹಿಂದಿಲ್ಲ–ಮುಂದಿಲ್ಲ – ಸಮ್ಮಂದವನ್ನು ಅಲ್ಲಗಳೆಯುವ ಮೂಲಕ 'ಒಬ್ಬಂಟಿ' (=ದಿಕ್ಕೇಡಿ.)
ದಿಕ್ಕಿಲ್ಲ–ದೆಸೆಯಿಲ್ಲ ಆದವನು ಎನ್ನುವ ಸೂಚನೆ.

೫. ಸಮ್ಮಂದಿಲ್ಲ – ಸೂತ್ರಿಲ್ಲ – ಯಾವುದೇ ಸಮ್ಮಂದದ ಎಳೆಯುನ್ನು ಅಲ್ಲಗಳೆಯುವಿಕೆ, ಇಲ್ಲವೆ ಸಮ್ಮಂದ ಇದ್ದರೂ ಇಲ್ಲವೆಂಬ (ಖಾರ>)ಕಾರವಾದ ನುಡಿಬಳಕೆ.

೬. ಬಂದು–ಬಳಗ – ದೂರದ ಸಮ್ಮಂದಿಗಳ ಕುಟುಂಬ.

೭. ಮಕ್ಳು–ಮರಿ ┐
ಕೂಸು–ಕುನ್ನಿ ┘ – ತನಗೆ ಪರರಿಗೆ ಹುಟ್ಟಿದ ಪುಟ್ಟ ಪುಟ್ಟ ಕಂದಮ್ಮಗಳು.

೮. ಹೆಂಡ್ರು–ಮಕ್ಳು – ಕಟ್ಟಿಕೊಂಡ ಸಾಂಸಾರಿಕ ನೆಲೆಯ ಸಮ್ಮಂದ.

**ವಿಶಾಲ ಅರ್ಥದ ನೆಲೆಯಲ್ಲಿ ಹುಟ್ಟುವ ಜೋಡುನುಡಿಗಳು**

೧. ಹಿರೆರು–ಕಿರೆರು[೪]
೨. ಹುಡ್ರು–ಹುಪ್ಪಡಿ
೩. ಮಂದಿ–ಮಕ್ಳು
೪. ನನ್ನವ್ರು–ತನ್ನವ್ರು
ನಮ್ಮವ್ರು–ತಮ್ಮವ್ರು

–ಮನುಶ್ಯತ್ವದ ನೆಲೆಯುಳ್ಳ ನುಡಿಜೋಡುಗಳು

**೩.೧. ರಾಚನಿಕ ಸಮ್ಮಂದದ ಕವ್ವಂಬಿಕ ಜೋಡುನುಡಿಗಳು**

ಈಗಾಗಲೇ ರಾಚನಿಕ ಸಮ್ಮಂದದ ಕವ್ವಂಬಿಕ ಜೋಡುನುಡಿಯ ಬಗೆಗೆ ಒಂದಿಸ್ಟು (ನೋಡಿ.೧.೧) ಗಮನ ಹರಿಸಲಾಗಿದೆ. ಇಲ್ಲಿ ಬೇರುಮಟ್ಟದಲ್ಲಿ ಕ್ರಿಯಾದಾತುಗಳೆ ಮುಕ್ಯ ಅವುಗಳಿಂದ ವಿಶೇಶವಾಗಿ ಚಿಗುರುವ ಪದರೂಪಗಳೇ ಗಮನ ಸೆಳೆಯುತ್ತವೆ. ಎರಡ್ಮೂರು ಉದಾಹರಣೆಗಳನ್ನೇ ಮಾದರಿಯಾಗಿ ನೋಡಬಹುದು.

೧. ತೊಳಿ–ಬಳಿ. ೨. ಹೇಳು–ಕೇಳು. ೩. ಅನ್ನು–ಆಡು.

**೧) ಪದರೂಪಗಳು**

ತೊಳಿಯುದು–ಬಳಿಯುದು = ಒಪ್ಪ–ಓರಣಗೊಳಿಸುವ ಮನೆಗೆಲಸ.
ತೊಳಿಯಾಂಗಿಲ್ಲ–ಬಳಿಯಾಂಗಿಲ್ಲ = ಅರೆ ಮನಸಿನ ಕಾರ್‍ಯ ಚಟುವಟಿಕೆ.
ತೊಳಿಯಾಕ–ಬಳಿಯಾಕ = ಗಟ್ಟಿತನದಿಂದ ಕೂಡಿದ.
೨) ಹೇಳುದು–ಕೇಳುದು = ಜೊತೆಗೂಡಿದ ವಿಶಯ ಚರ್‍ಚೆ, ಪರಿಶೀಲನೆ.
ಹೇಳುವಾಂಗಿಲ್ಲ–ಕೇಳುವಾಂಗಿಲ್ಲ = ದರ್‍ಪ, ಅಹಮಿಕೆಯ ನಡೆ.
ಹೇಳಾಕ–ಕೇಳಾಕ = ಚರ್‍ಚೆಯಲ್ಲಿ ಸಮತೆಯ ಬಾವ ಉಳ್ಳ.
ಹೇಳೋರು–ಕೇಳೋರು = ಹಿರಿಯರು, ದಾರಿ ತೋರುವವರು.
ಹೇಳ್ಳಿಲ್ಲ–ಕೇಳ್ಳಿಲ್ಲ = ಮನಸ್ಸಿಗೆ ತೋಚಿದಂತೆ.
೩) ಅನ್ನುದು–ಆಡುದು = ಆರೋಪಣೆ ಮಾಡುವಿಕೆ.
ಅಂದಾಂಗ–ಆಡದಾಂಗ = 'ಸೋ'ಗೂಡುವಿಕೆ/ಕಾರಣ ಇರದೆ ಆರೋಪಣೆ. ಮಾಡುವಿಕೆ.
ಅನ್ನುವಾಂಗಿಲ್ಲ–ಆಡುವಾಂಗಿಲ್ಲ = ಎಡಬಿಡಂಗಿ ಸ್ತಿತಿಯ ತೊಳಲಾಟ.

ಅನ್ನಾಕ–ಆಡಾಕ = ಆರೋಪಣೆ ಚಟುವಟಿಕೆ.

ಅನ್ನಿಲ್ಲ–ಆಡ್ಲಿಲ್ಲ = ಅಲ್ಲಗಳೆವ ಆರೋಪಣೆ.

ಅನಬೇಕು–ಆಡಬೇಕು = ತಯಾರಿಗೊಂಡ ಆರೋಪಣೆ.

**೩.೨. ಸಾಮಾಜಿಕ (ದೇಸಿ) ನೆಲೆಯಲ್ಲಿ ಕನ್ನಡ ಬಾಶೆ**

ಕನ್ನಡ ಬಾಶೆಗಂತು ಎರಡು ಸಾವಿರ ವರುಶಗಳಸ್ಟು ಹಳಮೆ ಇದೆ. ಇದಕ್ಕೆ ತನ್ನದೆ ಆದ ಇತಿಹಾಸವೂ ಇದೆ. ಈ ಪಾರಂಪರಿಕ ಇತಿಹಾಸದಲ್ಲಿ ಹಲವು ರೀತಿಯ ಸವಾಲುಗಳ ಏಳು–ಬೀಳುಗಳನ್ನು ಅನುಬವಿಸುತ್ತ ಇಂದಿಗೂ ಎಲ್ಲ ಜನಾಂಗಗಳ ನುಡಿಯಾಗಿ ಉಳಕೊಂಡು ಬಂದಿದೆ. ಈ ತರಹದ ಜನಪದ ಬಾಶೆಗೆ ಆಡುನುಡಿಯೇ ಒಂದು ರೀತಿ ತಳಪಾಯ ಇದ್ದಂತೆ.

ಹಾಗೇಯೇ ಓದು–ಬರಹವುಳ್ಳ ಶಿಸ್ಟ ಸಾಹಿತ್ಯದ ಪರಂಪರೆಯೂ ಜತೆಗೂಡಿ [(ಜೊತೆ>)ಜತೆ+ಕೂಡಿ>ಜತೆಗೂಡಿ] ಇವತ್ತಿಗೂ ಉಳಿದು, ಬೆಳೆದು, ಬರುತ್ತಲೆ ಇದೆ. ಇದರೊಂದಿಗೆ ಸದ್ಯ ಕನ್ನಡಕ್ಕೆ ಸಮ್ರುದ್ದ ಜಾನಪದ ಪರಂಪರೆಯಂತು ಇದೆ. ಒಟ್ಟಾರೆ ಕನ್ನಡ ಸಂಸ್ಕೃತಿಯ ಜೀವನಾಡಿ ಮಿಡಿತದ ಒಂದಂಶವಾಗಿ ಇಂದಿಗೂ ಗಾದೆ. ಒಗಟು, ಒಡಪುಗಳೊಂದಿಗೆ ವಿಶಿಸ್ಟ ಪದಗಳಾದ ಜೋಡುನುಡಿ, ನುಡಿಗಟ್ಟುಗಳು ನಳನಳಿಸುತ್ತಲೇ ಇದೆ. ಇವುಗಳಲ್ಲೆಲ್ಲಾ ಕನ್ನಡದ ಸಹಜ ಉಸಿರಾಟವನ್ನು ಕಾಣುತ್ತೇವೆ.[೫]

ಇದನ್ನರಿಯುವ ಒಂದು ಬಾಗವಾಗಿ ಹಲವು ಸಮ್ಮಂದಿ ಪದಗಳನ್ನೂ ಜಾಲಾಡುವ, ಅವುಗಳ ಒಳಪದರುಗಳನ್ನೆಲ್ಲ ಇಣುಕಿ ನೋಡುವ ಒಂದು ಸಣ್ಣ ಪ್ರಯತ್ನ ಇಲ್ಲಿದೆ.

**೩.೨.೧. ಸಂಬೋದಿತ ನೆಲೆಯಲ್ಲಿ (ಅಂಗಪದಗಳ) ಉಲಿ ಉಚ್ಚಾರಣೆಯ ಸ್ವರೂಪ**

ಸಂಬೋದನೆಗೆ ಒಳಗಾಗುವ ಅಂದರೆ ಆಡುಗನೊಬ್ಬ ವ್ಯಕ್ತಿಯನ್ನು ನೇರವಾಗಿ ಕರೆಯುವ ಸಂದರ್ಬದಲ್ಲಿ 'ಅ' ಕಾರದ ನಾಮಗಳು 'ಯ' ಕಾರ ಹೊಂದುವುದು, ಈ ಒಳನುಡಿಯ ವಿಶಿಸ್ಟತೆ ಆಗಿದೆ.

| | | |
|---|---|---|
| ಅಪ್ಪ > ಯಪ್ಪ | : | 'ಯಪ್ಪಾ, ಹಾಂವ ಅಯ್ತಿ ಅಲ್ಲೆ, ಇತ್ತಾಗ ಬಾ'. |
| ಅವ್ವ > ಯವ್ವ | : | 'ಬೇ ಯವ್ವಾ, ಜಳಕಾ ಮಾಡಾಕ ಹೊಂಡಕ್ಕ ಹೊಂಟೀನಿ' (ಹೊಂಡ=ಕೆರೆ.) |
| ಅಣ್ಣ > ಯಣ್ಣ | : | 'ಯಣ್ಣಾ, ಅಲ್ಲೆ ಡೊಕ್ಕೊ! ಅವ್ರು ಓಡಿ ಬರಾಕ ಹತ್ತ್ಯಾರ!!' (ಡೊಕ್ಕೊ=ಅಡಗಿಕೊ.) |
| ಅಜ್ಜ > ಯಜ್ಜ | : | 'ಅಲ್ಲೆ ಅಯ್ತಿ ನಿನ್ನ ಬಡಿಗಿ, ಯಜ್ಜಾ! ಕೊಡ್ತೀನಿ ತಡಿ.' |

| | | |
|---|---|---|
| ಅತ್ತಿ > ಯತ್ತಿ | : | 'ಯತ್ತಿ, ಯಲಿ–ಅಡಕಿ ಅಯ್ತಿ; ಸುಣ್ಣಾ ಇದ್ರ ಕೊಡು'. |
| ಅಕ್ಕ > ಯಕ್ಕ | : | 'ಗುದಗ ಮಂಗ್ಯಾ ಬರಾಕ ಹತ್ತೇತಿ: ಪುಟಾಣಿ ಚೀಲಾ ನನ್ನ ಉಡಿಯಾಗ ಹಾಕು'. (ವ್ಂಂಗ್ – ಕಂಗ್ ತುಂಬಿಕೊಂಡ ಗಂಡುಮಂಗ=ಗುದಗ ಮಂಗ. ಉಡಿ= ಮಡಿಲು.) |
| ಅಮ್ಮ > ಯಮ್ಮ: | | 'ಆ, ಕಲ್ಲಚಪ್ಪಡಿ ಅಳಗ್ಯಾಡತ್ತ, ಕಯ್ ಹಿಡಿದೀನಿ, ಸವಕಾಶ ದಾಟಿ ಬಾ ಯಮ್ಮಾ!' [ಅಲುಗು+ಆಡು>ಅಲುಗಾಡು (ಕೂಡುಪದ)>ಅಳುಗಾಡು >(ಬಾದಾಮಿ ಒಳನುಡಿ) ಅಳಗ್ಯಾಡು, ಸಾವಕಾಶ>(ಬಾ.ಒ) ಸವಕಾಶ.] |

೩.೨.೨. ಬಳಕೆಯ ಇನ್ನೊಂದು ಪದರು

ಇವು (೧.೧ ರಲ್ಲಿ ಗಮನಿಸಿದ ಹಾಗೆ) ರಕ್ತ ಸಮ್ಮಂದಿ ನುಡಿಜೋಡುಗಳೇನೋ ಅಹುದು. ಆದರೆ ಈ ನುಡಿಜೋಡಿನ ಅಂಗಪದಗಳು (ರಕ್ತ ಸಮ್ಮಂದ ಅಲ್ಲದಲ್ಲಿಯೂ) ಬಿಡಿ ಬಿಡಿಯಾಗಿ ಬಳಕೆ ಆಗುವುದಂತು (ಖರೆ>) ಕರೆ. ಇಂತಹ ಸಂದರ್ಬದಲ್ಲಿ ಸಾಮಾಜಿಕ ವಲಯದ ನೆಲೆಯಲ್ಲಿ ಜಾತಿ, ಲಿಂಗ, ಅಂತಸ್ತನ್ನು (ಸ್ವಲ್ಪಮಟ್ಟಿಗೆ) ಮೀರುವ ಹಾಗೆ (ಪ್ರೀತಿ ಮತ್ತು ಪ್ರೀತಿಯ ಕಾಳಜಿಯನ್ನು ತೋರುತ್ತಲೆ) ಬಳಕೆಗೊಳ್ಳುತ್ತ ಹೋಗುವುದನ್ನು ಕಾಣುತೇವೆ. ಈ ರೀತಿ ಬಳಕೆಯ ಮಾಮೂಲಿ ತಿರುಳಿನ ಹರಹನ್ನು ಹಿಗ್ಗಿಸಿಕೊಳ್ಳುತ್ತ ಸಾಗುವುದು, ಮತ್ತೊಂದು ವಿಶಿಶ್ಟ ಅಂಶವಾಗಿದೆ. ಸಾಮಾಜಿಕ ವಲಯದ ಬಳಕೆಯ ಕೆಲವು ನುಡಿಗಳನ್ನು ಗಮನಿಸಿ ಈ ಸಂಗತಿಯನ್ನು ಮನವರಿಕೆ ಮಾಡಿ ಕೊಳ್ಳಬಹುದು.

ವಾಕ್ಯಗಳು

೧. "ಬೇ ಯಮ್ಮಾ ಇತ್ತಾಗ ಹೋಳಾಗು; ಎಮ್ಮಿ ಓಡಿ ಬರಾಕ ಹತ್ತೇತಿ!"

(ಇತ್ತ+ಆಗ>ಇತ್ತಾಗ=ಇತ್ತ(ಈ)ಕಡೆಯುಲ್ಲಿ, ಹೋಳು+ಆಗು> ಹೋಳಾಗು (ಕೂಡುಪದ)=ಪಕ್ಕಕ್ಕೆಸರಿ ಬರಾಕ ಹತ್ತೇತಿ=ಬರುತ್ತಲೆ ಇದೆ.)

೨. "ಯಪ್ಪಾ, ಈ ಕಟಗಿ ಹೊರಿ ಹೊರಸ ಬಾರೆಪ್ಪ!"

(ತನಗಿಂತಲೂ ಹಿರಿಯ ವ್ಯಕ್ತಿಯನ್ನು ಉದ್ದೇಶಿಸಿ, ನೆರವು ಕೇಳಿಕೊಳ್ಳುವ ದಾಟಿ ಇದಾಗಿದೆ.)

(ಹೊರೆ=ಭಾರವಾದುದು, ದಯ್ಹಿಕ ಶ್ರಮದ ಕೆಲಸ ನಿಜಕ್ಕೂ (ಭಾರ<) ಬಾರವಾದುದು, ತಾಕತ್ತನ್ನು ತೋರ್ಪಡಿಸುವಂತಹದ್ದು. ಕಾರಣ (ಹೊರೆ>ಹ್ವಾರೆ) 'ಹ್ವಾರೆ' ಆಡುನುಡಿಯ ಉಲಿಪದ 'ಕೆಲಸ' ಎಂಬ ತಿರುಳನ್ನ ಹೊಂದುವ ರೀತಿ ಬಳಕೆ ಇದೆ. ಹೊರೆ=ಇಸು>ಹೊರಸು=ಎತ್ತಿ ತಲೆ ಮೇಲೆ ಇರಿಸಿಕೊಳ್ಳಲು ಸಹಾಯ ಮಾಡು, ಬರ್+ಎಪ್ಪ>ಬಾರೆಪ್ಪ! – ವಿನಯದಿ ಮನವಿ.)

೩. "ಎ ತಮ್ಮಾ, ಹಾಂಗ ಹೊಲಸೊಲಸ ಬಯ್ಗಳ ಬಯ್ಬಾರ್ದು!" (ಹೊಲಸು+ಹೊಲಸು>ಹೊಲಸೊಲಸ.)

೪. "ಬೇ ಯವ್ವಾ, ಹಾಂಗ ಕಯ್ಲೆ ಬಡಿಯಾಕ ಹೊಗ್ಬ್ಯಾಡಾ; ಜಬರಿ ತೊಗೊಂಡ ನಾಕ ಲಗಾಸು; ಅಂದ್ರ ಹಾದಿಗೆ ಬರ್ತಾನಾ!!"

(ಹಾಂಗ ಕಯ್ಲೆ=ಬರಿಗಯ್ಯಿಂದಲೇ, ಜಬರಿ=ಹಿಂದೆ-ಮುಂದೆ, ಬಾಗಿ-ಬಳುಕಿದರೂ ಮುರಿಯದ ಕೋಲು, ಲಗಾಸು=ಹೊಡೆ, ನಾಲ್ಕು>ನಾಕು>ನಾಕ, ಹಾದಿಗೆ ಬರು(ನುಡಿಗಟ್ಟು)=ಸರಿದಾರಿಗೆ ಬರು.)

೫. "ಯಜ್ಜಾ, ಸವಕಾಶ ಹೆಜ್ಜಿ ಇಡು, ಇಲ್ಲೆ ಜಲ್ಲಿಕಲ್ಲು ಬಿದ್ದಾವು!"

(ಸಾವಕಾಶ>ಸವಕಾಶ(ಬಾದಾಮಿ ಒಳನುಡಿ), ಜಲ್ಲಿಕಲ್ಲು=ಚಿಕ್ಕದಾದ ಹರಿತ ಕಪ್ಪನೆಯ ನುಣುಪುಗಲ್ಲು,(ಹೆಜ್ಜೆ>) ಹೆಜ್ಜಿ ಇಡು(ನುಡಿಗಟ್ಟು)=ಸಾಗು, ಮುಂದೆ ನಡೆ.)

**೩.೨.೩. 'ಅವ್ವ, ಅಮ್ಮ'- ಪದಗಳ ಒಂದು ತಿರುಳಿನ ಯಾನ**

ಈ ಎರಡೂ ಪದಗಳನ್ನು ಗುರುತಿಸಲು ಸಾದ್ಯವಾಗುವ ಒಂದು ಇತಿಹಾಸವಂತು ಇದೆ. ಅಮ್ಮ ಅತವಾ ಅಮ್ಮನ್ ಎನ್ನುವ ರೂಪಕ್ಕೆ ೧೦ನೇ ಶತಮಾನದ ಪಂಪನ ಕಾವ್ಯದ ಒಂದು ಪ್ರಸಂಗ: ಕುಶಲ ತಂತ್ರಗಾರಿಕೆಯ ಹೆಸರುವಾಸಿ ಕ್ರುಶ್ಣ ಕರ್ಣನಿಗೆ ಹೇಳುವ ಮಾತಿದು; "ಭೇದಿಸಲೆಂದೇ ದಲ್ ನುಡಿದರ್ಎನ್ನದಿರ್,......... ನಿನ್ನ ಆದಿಯೊಳ್ ಅಬ್ಬೆ ಕುಂತಿ, ನಿನಗೆ ಅಮ್ಮನ್ ಅಹರ್ಪತಿ." ಎಂದು ಕ್ರುಶ್ಣ ತನಗೆ ಬೇಕಾದಾಗ ಬೇಕೆನಿಸಿದ ರೀತಿ, ಬಂದ ಕೆಲಸವನ್ನು ಈಡೇರಿಸಿಕೊಳ್ಳುವಂತೆ ಸಾದ್ಯವಾಗುವ ಒಳಸಂಚನ್ನು ನಡೆಸುತ್ತಾನೆ.

ಇಲ್ಲಿ ಸ್ಪಸ್ಟವಾಗಿ ಅಮ್ಮ(ನ್) ಎಂಬ ರೂಪ ತಂದೆ ಎಂಬ ತಿರುಳಿನೊಂದಿಗೆ ಬಳಕೆ ಆಗಿದ್ದನ್ನು ಕಾಣುತ್ತೇವೆ. ಈ ತೆರನಾಗಿ 'ಅಮ್ಮ' ಪದದ ಯಾನ (ಕಾವ್ಯ ಬರಹದ ದಾಕಲೆ ಆದರಿಸಿ) ಆರಂಬವಾಗುತ್ತದೆ.

ಇನ್ನು'ಅಬ್ಬೆ' ಪದದ ಬಳಕೆಯನ್ನಾದರಿಸಿ ಈ ರೀತಿ ಗುರುತಿಸಬಹುದು.

ಅಬ್ಬೆ- ಅಬ್ಬೆ>ಅವ್ವೆ>ಅವ್ವ.

'ಬೇ/ಬೆ' (ಹಿರಿಯ (?) ಮಹಿಳೆಯನ್ನು ಉದ್ದೇಶಿಸಿದ ಬಳಕೆಯ ರೂಪ.)

ಅವ್ವ

ಅಬ್ಬೆ

ಬೇ/ಬೆ(ಅಬ್ಬೆ ಪದದ ಸವಕಳಿ ರೂಪ.)

ವಾಕ್ಯ೧. 'ಬೇ, ಯವ್ವಾ! ವರತನಿ ಹಾಲ್ನ ಕೊಟ್ಟ ಬರ್ತೀನಿ'.

(ಹಾಲ್ನ>ಹಾಲನ್ನು, ವರತನಿ=(ಖಾಯಮ>) ಕಾಯಮಾಗಿ ಹಾಲು ಕೊಡುವ ಮನೆಗಳು.)

೨. 'ಬಿದ್ದೀಯ ಬೇ ಮುದಕಿ, ಬಿದ್ದೀಯ ಬೇ!' – ಎಂಬ ಶರೀಪರ ಪಲ್ಲವಿ ಹಾಡು ಪ್ರಸಿದ್ಧವಾಗಿದೆ.

**೩.೩.೧. ಇಟ್ಟ ಇಲ್ಲವೆ ಕೊಟ್ಟ ನಾಮಗಳಲ್ಲಿ (ಅಪ್ಪ/ವ್ವ/ಣ್ಣಗಳ) ಬಳಕೆ :** ಆಗ ಮೂಲ ಹೆಸರನ್ನೆ ಪತ್ತೆ ಹಿಡಿಯಲಾಗದಸ್ಟು ಬದಲು ಆಗುವುದುಂಟು.

– ವೆಂಕಟೇಶ>ವೆಂಕಪ್ಪ/ಎಂಕಪ್ಪ.

– ಪಾಂಡುರಂಗ>ಪಾಂಡಪ್ಪ/ಪಾಂಡರಂಗಪ್ಪ.

– ಶ್ರೀನಿವಾಸ>ಶೀನಪ್ಪ/ಸೀನಪ್ಪ.

– ಗಂಗಾಧರ>ಗಂಗಾದರಪ್ಪ.

– ಬಾಲಪ್ಪ/ವ್ವ/ಣ್ಣ,

– ಪಡಿಯಪ್ಪ/ವ್ವ,

– ದುರುಗಪ್ಪ/ವ್ವ

– ದೊಡ್ಡಬಸಪ್ಪ/ವ್ವ>ದೊಡಬಸಪ್ಪ/ವ್ವ/ಣ್ಣ.

– ಹನಮಪ್ಪ/ವ್ವ/ಹನಮಂತಪ್ಪ.

– ಕಳಕಪ್ಪ/ವ್ವ, – ಮಲ್ಲಪ್ಪ/ವ್ವ/ಣ್ಣ.

– ಗುಂಡಪ್ಪ/ವ್ವ – ಕಲ್ಲಪ್ಪ/ವ್ವ

– ದುಂಡಪ್ಪ/ವ್ವ

– ಸಣ್ಣಬಸಪ್ಪ/ವ್ವ>ಸಣಬಸಪ್ಪ/ವ್ವ

– ಹುಲ್ಲಪ್ಪ/ವ್ವ – ಯಲ್ಲಪ್ಪ/ವ್ವ

– ನಿಂಗಪ್ಪ/ವ್ವ/ಣ್ಣ.

– ಮರಿಯಪ್ಪ/ವ್ವ/ಣ್ಣ.

* ಒಬ್ಬನಿಗೆ ಇಬ್ಬರು ಇಲ್ಲವೆ ಮೂವರು ದೊಡ್ಡಪ್ಪಗಳು/ದೊಡ್ಡವ್ವಗಳು/ಅಣ್ಣಂದಿರು ಇದ್ದರೆ!

ದೊಡ್ಡದೊಡ್ಡಪ್ಪ/ಸಣ್ಣದೊಡ್ಡಪ್ಪ/ನಡಕಿನದೊಡ್ಡಪ್ಪ.

* ಇಬ್ಬರೆ ಅಣ್ಣಗಳಿದ್ದಾಗ– ದೊಡ್ಡಣ್ಣ/ಸಣ್ಣಣ್ಣ.

* ಪರಿಹಾಸದ ಮಾತಿನಲ್ಲಿ ಬಳಕೆ "(ಮುಸುಡಿಗೆ>)ಮಸಡಿಗೆ ಒಂದ್ (ಗುದ್ದು) ಕೊಟ್ರ (ಮುಖಾ>) ಮಕಾ ಹನಮಪ್ಪ ಆದೀತು!!"

ಉತ್ತರ ಕರ್ನಾಟಕದ ಮಾತಿನ ಶಯ್ಲಿಯಲ್ಲಿ 'ಅಣಕ'ದ ದನಿಯೊಂದಿಗೆ 'ನಗೆಚಾಟಿಕೆ'ಯಾಡುತ್ತ ಇಡೀ ವಾತಾವರಣವನ್ನೆ ನಗೆಗಡಲಲ್ಲಿ ತೇಲಾಡಿಸುವುದುಂಟು.

* ಗಾಳೆಪ್ಪ. ದೂಳೆಪ್ಪ. ಬಟಾಬಯಲ.

* ಹಾಕಪ್ಪ. ನುಂಗಪ್ಪ. ಗಪ್‌ಗಯಾ.

ಒಂದಿಷ್ಟು ಲೇವಡಿಯ ಲೇಪನದೊಂದಿಗೆ 'ಕಲಿಕೆ'ಯಲ್ಲಿ ತಿಳಿಹೇಳುವ ಒಂದು ಕ್ರಮವಿದು.

* ಮುಕಳೆಪ್ಪಾ, ಎಲ್ಲೆಪ್ಪ!
  ಕುಂಡಿ ಸೀಳಪ್ಪ!! ಇಲ್ಲಾ
  ಲಾಗ ಹಾಕಪ್ಪ, ಸಾ~ss~ಕ~ss~ಪ್ಪ!!

ಮುಸಲರ ಜನಗಳಲ್ಲಿ (ಹೆಸರಿನ ಮುಂದೆ) ಅಪ್ಪ, ಅವ್ವ :

– ಹುಸೇನಬಿ>ಹುಸನವ್ವ – ಹುಸೇನಸಾಬ್ > ಹುಸನಪ್ಪ.

– ರಾಜೇಸಾಬ್>ರಾಜಪ್ಪ. – ರಾಜಬಿ/ರಾಜಾ>ರಾಜವ್ವ

– ಲಾಲಸಾಬ್>ಲಾಲಪ್ಪ. – ಲಾಲಬಿ>ಲಾಲವ್ವ

– ಪೀರಮಾ>ಪೀರವ್ವ – ಪೀರಸಾಬ>ಪೀರಪ್ಪ.

– ಹಸನ್‌ಸಾಬ್>ಹಸನಪ್ಪ. – ಹಸನಬಿ>ಹಸನವ್ವ

– ಸಯ್ದಾಮಾ>ಸಯ್ದವ್ವ – ಸಯ್ದುಸಾಬ್>ಸಯ್ದಪ್ಪ.

ಇಟ್ಟ ಇಲ್ಲವೆ ಕೊಟ್ಟ ಹೆಸರುಳ್ಳ ನಾಮಗಳಿಗೆ ಈ ಅವ್ವ, ಅಪ್ಪ, ನುಡಿಗಳು ಸಾಮಾಜಿಕ ವಲಯದಲ್ಲಿ ದಾರಾಳತನದಿಂದ ಬಳಕೆ ಆಗುತ್ತವೆ. ಇದು ಒಂದು ರೀತಿಯಲ್ಲಿ 'ಎಲ್ಲರೂ ಎಲ್ಲರೊಟ್ಟಿಗೆ ಇದ್ದೇವೆ' ಎನ್ನುವ ಜೀವನ ಬದ್ರತೆಯೊಂದಿಗೆ, ಪ್ರೀತಿ, ಆತ್ಮೀಯತೆಯ ಚಿಗುರನ್ನೂ ಕಾಣುತ್ತೇವೆ.[2] ಇದು ಇಲ್ಲಿ ಎಲ್ಲ ತರಹದ ದುಡಿಮೆ ಜನಾಂಗಗಳಿಗೂ ಅನ್ವಯಿಸಿ ಬಳಕೆ ಆಗುವ ಮಾತು.

**೩.೩.೨. ತಿವಿತದ ತಿರುಳಿನೊಂದಿಗೆ 'ಅವ್ವ', 'ಅಪ್ಪ'ಗಳ ಬಳಕೆ**

ಕಲ್ಪಿತ ಪರಿಹಾಸದ ಧ್ವನಿಯಲ್ಲಿ.

* ಹಾಕಪ್ಪ. ನುಂಗಪ್ಪ. ಎತ್ತಿಬಡಿಯಪ್ಪ. (ಎತ್ತಿಬಡಿ=ಗುಳುಂ ಮಾಡು, ನುಂಗಿ ಹಾಕು.)

* ಹಾಕಪ್ಪ. ಎತ್ತಪ್ಪ. (ಅನಾಮತ್) ನುಂಗಣ್ಣವರ.

ಊನಾಂಗವನ್ನೆ /ವಿಶಿಷ್ಟ ಅಂಗವನ್ನೇ ಗಮನಿಸಿ ಅವನ ಬೆನ್ನ ಹಿಂದೆ ನಸುಪರಿಹಾಸವನ್ನು ಹೀಗೂ ಮಾಡುವುದುಂಟು.

* ಮೀಸೆಪ್ಪ–({ಪೊದೆ=ಪೊದೆಯಂತೆ)=ಸಣ್ಣ–ಪುಟ್ಟ ಕುರುಚಲು ಗಿಡಗಳ ಸಮೂಹ}) ಪೊದೆಯ ಹಾಗೆ ಮೀಸೆ ಬಿಟ್ಟವನು.
* ಕುಂಟಪ್ಪ/ವ್ವ–'ಕುಂಟ(ಪ್ಪ)ನಿಗೆ ಎಂಟ ಬುದ್ದಿ'–ವಾಕ್ಯ
* ಕುಡ್ಡಪ್ಪ/ವ್ವ, ಕಿವುಡ/ಕಿವಡಿ>ಕಿವಡಪ್ಪ/ವ್ವ,
* ಚಿವ್‌ಗಣ್ಣಪ್ಪ/ವ್ವ, ಮೆಳ್ಳಗಣ್ಣಪ್ಪ/ವ್ವ, ಡೊಳ್ಳು ಹೊಟ್ಟೆಪ್ಪ/ನಗಾರಿ ಹೊಟ್ಟೆಪ್ಪ,
* ಮುಕಳಿ ಸವರಪ್ಪ/ತೆವಳಪ್ಪ, ಡೊಣ್ಣೆ ಮೂಗಪ್ಪ>ಡೊಣ್ಣಿ ಮೂಗಪ್ಪ,
* ಎಬಡ, (=ಗುಕ್ಕಸಿ, ಗುಕ್ಕಸಿ ಮಾತನಾಡುವವನು,) (ಸ್ತ್ರೀ ಸೂಚಕ) ಎಬಡಿ.
* ಡುಮ್ಮ–ಡುಮ್ಮಿ, ಡುಮ್ಮಪ್ಪ–ಡುಮ್ಮವ್ವ

### ೩.೩.೩. ವಾಕ್ಯದ ಕೊನೆಯಲ್ಲಿ ಬಳಕೆ

(ಕೆಲವೊಂದು ವಾಕ್ಯ ಉದಾಹರಣೆಯಿಂದ ಇದನ್ನು ಗಮನಿಸಿ, ತಿಳಿಯಬಹುದು.)

೧. 'ಬಡಬಡ ಹೆಜ್ಜ ಇಡು, ಇನ್ನು ಯಾಡ್ಡ ಮಯ್ಲಿ ನಡೀಬೇಕವಾ!'
(ಬಡಬಡ=ಅನುಕರಣ ಪದ, ಹೆಜ್ಜೆ>ಹೆಜ್ಜ, ಎರಡು>ಯಾಡ್ಡ
ನಡೆಯಬೇಕು+ಅವ್ವಾ>ನಡಿಯಬೇಕವ್ವಾ>ನಡಿಯಬೇಕವಾ!>ನಡೀಬೇಕವಾ!
ಇಲ್ಲಿಯ 'ಅವ್ವ/ವ್ವಾ' ಎಂಬುದು ಪ್ರೀತಿ, ಆತ್ಮೀಯತೆಯ ಸೂಚಕವಾಗಿದೆ.
'ಅವ್ವ/ವ್ವಾ>ಅವ/ವಾ.')

೨. 'ಕಸ–ಮುಸರಿ ಮಾಡವಾ, ಅಂದ್ರ, ಕಡ್ಡಿ ಮುರದಾಂಗ್ ಬಿಲ್–ಕುಲ್ ಆಗಾಂಗಿಲ್ಲಾಂದ್ರ, ಎನ್ ಮಾಡಬೇಕಪಾ, ನೀನ ಹೇಳು!?'
(ಕಸ–ಮುಸರಿ, ಬಿಲ್–ಕುಲ್–ಎರಡೂ ಜೋಡುನುಡಿಗಳು, ಮಾಡು+ ಅವ್ವಾ>ಮಾಡವ್ವಾ>ಮಾಡವಾ,

ಆಗುವುದಿಲ್ಲ+ಎಂದರೆ>ಆಗಾಂಗಿಲ್ಲಾ+ಅಂದ್ರ>ಆಗಾಂಗಿಲ್ಲಾಂದ್ರ,

ಮಾಡಬೇಕು+ಅಪ್ಪಾ>ಮಾಡಬೇಕಪ್ಪಾ>ಮಾಡಬೇಕಪಾ!

ಹೊಟ್ಟ್ಯಾಗಿನ ಸಂಕಟ, ಅಸಮಾದಾನವನ್ನು ಎದುರಿನ ಹಿರಿಯ ವ್ಯಕ್ತಿಗೆ ಹೇಳಿಕೊಳ್ಳುವ ರೀತಿ ಇದು.)

೩. 'ಕಾಲ ಜಾರಿ ಹೊಂಡದಾಗ ಬೀಳುವಾಕಿನ್ನ ದಡಗ್ಗನ ಕೈ ಹಿಡದ ಜೀವಾ ಉಳಿಸಿದೆಪಾ, ನನ್ನ ಹಡದಪ್ಪ!!.'

(ಹೊಂಡ+ಅಲ್ಲಿ>ಹೊಂಡದಲ್ಲಿ=ಹೊಂಡದಾಗ, ದಡಗ್ಗನ (ಅನುಕರಣ ಪದ)= ದಿಡೀರನೆ, ಉಳಿಸಿದೆ ಯಪ್ಪಾ>ಉಳಿಸಿದೆಪಾ!

ನನ್ನ ಹಡದಪ್ಪ=ನನಗೆ ಹಡದೆಪ್ಪನಿರುವುದು ಸಹಜ, ಆದರೆ ಈ ಜೀವವನ್ನು ಮತ್ತೆ ಉಳಿಸಿದ್ದರಿಂದ ಹಡೆದಪ್ಪನಿಗೆ ಸಮಾನನು ಎನ್ನುವ, ತುಂಬಿ ಬರುವ ನೆನಕೆಯ ತೇವಗಣ್ಣಿನ ಅಪ್ಪುಗೆಯೊಂದಿಗೆ, ಹೊರ ಚಿಮ್ಮುವ ನುಡಿ ಇದು.)

'ಬುತಿರೊಟ್ಟಿ ತಂದಾರಂತವಾ! ಲಗುನ ಎಲ್ಲಾರ ಮನಿ ಮನಿಗೆ ಮುಟಿಸುನಪಾ!!'

[ಬುತ್ತಿರೊಟ್ಟಿ>ಬುತಿರೊಟ್ಟಿ-ಎಂಟು ತಿಂಗಳು ಹೊಟ್ಟಿಲೆ(=ಗರ್ಭಿಣಿ) ಆದ ಸಂದರ್ಭದಲ್ಲಿ ಮಗಳ ಮನೆಯಿಂದ ಅಂದರೆ ಹೆಣ್ಣಿನ ಕಡೆಯವರು ಗಂಡಿನ ಮನೆಗೆ ಕಟ್ಟಿ, ಕೊಟ್ಟು ಕಳಿಸಲಾಗುವ ಬುತ್ತಿ ಸ್ವರೂಪದ ರೊಟ್ಟಿ ಮತ್ತಿತರ ಸಿಹಿ ತಿನಿಸುಗಳು; (ಎರಡು ಬಗೆಯ ಚಟ್ನಿ, ಎರಡ ತರಹದ ಪಲ್ಲೆ, ಎಣ್ಣಿ ಹೋಳಿಗಿ, ಕರ್ಚಿಕಾಯಿ, ರೊಟ್ಟಿ, ಚಪಾತಿಯೊಂದಿಗೆ) ಆಗ ಎಲ್ಲ ಬಂದು-ಬಳಗದವರಿಗೆ ತಿಳಿಯುವ ಹಾಗೆ ಸಿಹಿಸುದ್ದಿ ಹಂಚಲು ನಡೆಸಲಾಗುವ ಒಂದು ಆಚರಣೆ. ಇದನ್ನೇ 'ಎಂಟು ತಿಂಗಳ (ಶ್ರೀಮಂತ>) ಸೀಮಂತ (=ಎಲ್ಲರಿಗೂ ಎಲ್ಲ ರೀತಿ ಜಾಹೀರು ಪಡಿಸುವ ಕುಬಸದ ಕಾರಣ' ಎಂದು ಕರೆಯಲಾಗುವುದು. ಇದು ಈ ಆಚರಣೆಯ ಒಂದು ತುಣುಕು ಅಷ್ಟೆ!,

(ಮುಟ್ಟು+ಇಸು>) ಮುಟ್ಟಿಸು+ಓಣ>ಮುಟ್ಟಿಸೋಣ+ಅಪ್ಪಾ> ಮುಟ್ಟಿಸೋಣಪ್ಪಾ> ಮುಟಿಸುನಪಾ.]

■

## ಅಡಿಟಿಪ್ಪಣಿ

೧. 'ಬಡವಾ ನೀ ಮಡಗಿದ ಹಾಗಿರು.' 'ಹಾಸಿಗೆ ಇದ್ದಸ್ಟು ಕಾಲು ಚಾಚು.' 'ಹಿತ್ತಲ ಗಿಡ ಮದ್ದಲ್ಲ' ಈ ನುಡಿಗಳೆಲ್ಲ ಗಾದೆಗೆ ಸಮನಾದ ಸಾರವತ್ತಾದ(?) ಅನಿಸಿಕೆಗಳು. ಹಾಗೆಂದು ಪರೋಕ್ಶವಾಗಿ ಈ ನುಡಿಯನ್ನು ಯಾರು, ಯಾರಿಗೆ ಮತ್ತು ಯಾತಕ್ಕಾಗಿ ಹೇಳಿರಬೇಕು? ನಿಜಕ್ಕೂ ಕೂತುಹಲದ ಸಂಗತಿ. ಇದು ನಮ್ಮ ಮುಂದೆ ಇನ್ನೂ ಬೂತಾಕಾರವಾಗಿ ಬೆಳೆವ ಪ್ರಶ್ನೆ! ಇಶ್ಟೆಲ್ಲ ಹೇಳಲು ಹಿನ್ನಲೆಯಾಗಿರುವ ವಿಶಯವನ್ನು ಬಿಚ್ಚಿಡುವ ಜರೂರು ಈಗಿದೆ.

ಅಂದರೆ ಬಾಶಿಕ ಹಂತದಲ್ಲೂ ಈ ನೆಲದಲ್ಲಿ ನಡೆದಾಡುವ ಬಡಜನತೆಯ ಪ್ರಶ್ನಿಸುವ ಯೋಚನಾಶಕ್ತಿ ಬೆಳೆಯಗೊಡಬಾರದು; ಈ ಒಂದು ಹುನ್ನಾರಿನ ನೆಲೆಯಲ್ಲೆ ಈ ನುಡಿಗಳು ರೂಪಗೊಂಡಿರುವ ಸಾದ್ಯತೆಗಳಿವೆ.

ಕನ್ನಡ ಬಾಶೆಯ ನಿಜವಾದ ಚಹರೆಪಟ್ಟಿಯನ್ನು ಅರಿಯಲು ನಾವು ಜನಪದ ನೆಲೆಯ ಬಾಶೆಯತ್ತ ಮುಕ ಮಾಡಬೇಕಿದೆ. ಆಗ ಮಾತ್ರ ಬಾಶೆಯ ಚಾರಿತ್ರಿಕ ಬೆಳವಣಿಗೆಯನ್ನು ಅರಿಯಲು ಸಾದ್ಯ. ಈ ಮೂಲಕ ಇಲ್ಲಿಯ ಕನ್ನಡತನದ ಪದ ಸಂಪತ್ತನ್ನು ಬಗೆದು ಕಂಡುಕೊಳ್ಳಲು ನೆರವಾಗುತ್ತದೆ.

ಇಶ್ಟೆಲ್ಲ ಹೇಳುದು-ಕೇಳುದರ ಉದ್ದೇಶ ಎಂದರೆ ಸಾಮಾನ್ಯರ ಬದುಕು, ಅವರಾಡುವ ಬಳಕೆ ಬಾಶೆ, ಎಲ್ಲವೂ ಒಂದು ರೀತಿ 'ದಾದಿಲ್ಲ-ದರಕಾರಿಲ್ಲ' ಎನ್ನುವಂತಾಗಿದೆ. ಈಗಿನ ಬಳಕೆಯ ಬರಹದ ಕನ್ನಡ ಬಹುತೇಕ ಮೇಲ್ವರ್ಗದವರಿಂದ ರೂಪಗೊಂಡಿದ್ದು, ಅವರ ಆಸೆ-ನಿರೀಕ್ಶೆ, ಬೇಕು-ಬೇಡಗಳನ್ನು ಪೂರಯಿಸಿಕೊಳ್ಳುವಶ್ಟರ ಮಟ್ಟಿಗೆ ಯಶಸ್ವಿಯಾಗಿ ಬಳಕೆಗೊಳ್ಳುತ್ತಿದೆ. ಕನ್ನಡತನದ ನಿಜವಾದ ಲಕ್ಶಣಗಳನ್ನು ಅಲ್ಲಿ ಕಾಣಲಾಗದು ಎಂಬುದೊಂದು ದುರಂತ!

೨೧ನೇ ಶತಮಾನದಲ್ಲಿ ಕಾಲಿಡುತ್ತಲಿರುವ ನಮ್ಮಿಂದ ಈ ತನಕವಾದರೂ ನಾಡು, ನುಡಿ, ಬಳಕೆ ಬಾಶೆಯ ತನ್ನತನದ (ಒಳರಚನೆಯ) ಪದಗಳ ಹುಡುಕಾಟ ಸೂಕ್ತ ರೀತಿ ನಡದೆ ಇಲ್ಲ. ಅಲ್ಪ-ಸ್ವಲ್ಪ ಅಲ್ಲಲ್ಲಿ ನಡೆದಿದೆಯಾದರೂ ಪೂರ್ತಿ (ತಾತ್ಸಾರ>) ತಾಚಾರಕ್ಕೆ ಒಳಗಾಗಿದೆ. ಈ ದಿಸೆಯಲ್ಲಿ ಬಾಶಾತಜ್ನರಾದ ಶಂಕರ ಬಟ್ಟರ ಪ್ರಯತ್ನ ಗಮನ ಸೆಳೆಯುತ್ತದೆ.

೨. ಹೆಚ್ಚು ಹೆಚ್ಚು ಸಂಸ್ಕ್ರುತ ಪದಗಳ ಬಳಕೆಗೆ ಕಡಿವಾಣ ಹಾಕಬೇಕಿದೆ. ಇದರಿಂದ ಸಂಸ್ಕ್ರುತ ಪದಗಳಿಂದ ಇಡಿಕಿರಿದ ಕನ್ನಡ ಬಾಶೆ (?) ಶ್ರೀಸಾಮಾನ್ಯ ಕನ್ನಡಿಗರನ್ನು ತಲುಪುವ ಕ್ರಿಯೆಯೇ ಜಟಿಲವಾಗುತ್ತಿದೆ. ಕನ್ನಡ ಓದುಗ ಮತ್ತು ಸಂಸ್ಕ್ರುತಮಯ ಕನ್ನಡ ಬಾಶೆಯ ನಡುವೆ ಒಂದು ಕಂದಕದ ನಿರ್ಮಾಣ ದೊಡ್ಡದಾಗುತ್ತಲೆ ಹೋಗುತ್ತಿದೆ. ಇದಾಗದಂತೆ ನೋಡಿಕೊಳ್ಳಬೇಕೆಂಬುದು ನಮ್ಮ ಆಶಯ.

(ಸಂಬಂಧ>) ಸಮ್ಮಂದ=ನಂಟು(೧), ಕಾರಣ(೨)

೧. 'ದೂರದಿಂದ ಸಮ್ಮಂದ ಅಯ್ತು'.

೨. 'ಅವನ ಸಮ್ಮಂದ ನಾ ಈ ಊರಿಗೆ ಓಡಿ ಬರಬೇಕಾತು!'

ಈ ರೀತಿ ಕನ್ನಡಕ್ಕೆ ಒಗ್ಗಿಕೊಳ್ಳುವ ತದ್ಬವ ಪದಗಳನ್ನು ಬಳಸುವುದೇ ಹೆಚ್ಚು ಸೂಕ್ತ. ಈ ದ್ರುಸ್ಟಿಯಿಂದ ಕೇಶಿರಾಜ ಕೊಡಮಾಡುವ, ಬಹು ಅಪರೂಪದ ಸಲಹೆ-ಸೂಚನೆಯೊಂದಿಗೆ ನಿರ್ದೇಶನ ನೀಡುವ ಅಪಬ್ರಂಶ ಅದ್ಯಾಯವಂತು, (ಕನ್ನಡದ ವಿಶಯ ನರೂಪಣೆಗೆ ಸಮ್ಮಂದಿಸಿದಂತೆ) ಅದ್ಬುತ! ಅಸ್ಟೇ ಗಮನಿಸಿ ಅಳವಡಿಕೊಳ್ಳುವ ಅಂಶಗಳೂ ಅಲ್ಲಿವೆ. ಆದರೆ ಈ ವಿಶಯ ಮಹಾ ಮಹಾ ಪಂಡಿತರೆನಿಸಿಕೊಂಡವರಿಂದಲೂ ಪೂರ್ತಿ (ತಾತ್ಸಾರ>) ತಾಚಾರಕ್ಕೂ ಒಳಗಾಗಿದೆ. ಈ ದ್ರುಸ್ಟಿಯಿಂದ ಎಲ್ ಬಸವರಾಜು ಅವರ ಗಮನಿಕೆಯ ವಿಚಾರಗಳು ಗಮನಾರ್ಹವಾಗಿವೆ. ಡಾ. ಎಲ್. ಬಸವರಾಜು ಅವರಿಂದ ಸಂಪಾದಿತ ಗ್ರಂತ ಕೇಶಿರಾಜನ 'ಶಬ್ದಮಣಿದರ್ಪಣ.' ಅದರಲ್ಲೂ ಅಪಬ್ರಂಶಕ್ಕೆ ಸಮ್ಮಂದಿಸಿದ ಅದ್ಯಾಯವನ್ನು ನೋಡಿ-

ಪ್ರಕಾಶಕರು : ಶ್ರೀ ಚಿನ್ಮೂಲಾದ್ರಿ ಬ್ರಹನ್ಮಠ ಸಂಸ್ಥಾನ, ಚಿತ್ರದುರ್ಗ. ಮೊ.ಮು:೧೯೮೬.

೩. (೧) ಒಬ್ಬ ವ್ಯಕ್ತಿಯನ್ನು ಗುರುತಿಸಿಕೊಳ್ಳುವುದಕ್ಕಾಗಿ ಹೆಸರಿಸುವ ಕ್ರಮ ಮಾತ್ರ ಕರ್ನಾಟಕದಲ್ಲಿ ಎರಡು ಬಗೆಯದಾಗಿದೆ. ಅಂದಾಜು ದಾವಣಗೆರೆಯಿಂದ ದಕ್ಶಿಣದತ್ತ ಒಂದು ತೆರನಾದರೆ, ಇನ್ನು ಉತ್ತರದತ್ತ ಮತ್ತೊಂದು ತೆರನಾಗಿದೆ. ಉತ್ತರ ಕರ್ನಾಟಕದಲ್ಲಿ ವ್ಯಕ್ತಿಗಿಂತ ಸಮೂಹ ಮುಕ್ಯ, ಎನಿಸುವ ಹಾಗೆ ಒಂದೊಂದು ಮನೆತನಕ್ಕೆ ಒಂದೊಂದು ಹೆಸರಿರುತ್ತದೆ. ಈ ಸಮೂಹ ಸೂಚಕವಾದ ಮನೆತನದ ಹೆಸರನ್ನೆ (ಅಡ್ಡ+ಹೆಸರು) 'ಅಡ್ಡೆಸರು' ಎಂದು ಕರೆಯಲಾಗುತ್ತದೆ. ಇಲ್ಲಿ ವ್ಯಕ್ತಿ ಹೆಸರು ಮತ್ತು ತಂದೆಯ ಹೆಸರುಗಳು ಒಂದೆ ಒಂದು ಅಕ್ಕರ ಸ್ವರೂಪದೊಂದಿಗೆ ನಿಲ್ಲುತ್ತದೆ. ಅದರ ಮುಂದೆ ಮನೆತನದ ಹೆಸರು ಅಂದರೆ 'ಅಡ್ಡೆಸರು' ಪೂರ್ತಿಯಾಗಿ ಸೂಚನೆಗೊಳ್ಳುತ್ತದೆ. ಅಡ್ಡೆಸರಿನಿಂದ ಕರೆಯಲಾಗುವ ವ್ಯಕ್ತಿ ಮತ್ತೂ ಹತ್ತಿರವಾದಾಗ ಅಡ್ಡೆಸರನ್ನು ಬಿಟ್ಟು ವ್ಯಕ್ತಿಗತ ಹೆಸರಿನಿಂದಲೇ ಕರೆಯುತ್ತೇವೆ.

(೨) ಈ ರೀತಿಯ ಅಡ್ಡೆಸರಿನ ಸೂತ್ರ ಒಂದರಿಂದಲೆ (ಅದರ ನೆರವಿನಿಂದಲೆ) ಆ ಮನೆತನದವರು 'ಯಾರ್‍ಯಾರು,' 'ಯಾವ್ಯಾವ,' ನೆಲೆಯಲ್ಲಿ ಟಿಕಾಣೆ ಹೂಡಿದ್ದಾರೆಂದು ತಿಳಿಯಲು ಸುಲಬ ಸಾದ್ಯ, ಎನಿಸುತ್ತದೆ. ಈ ಕಾರಣಕ್ಕೆ ಅಡ್ಡಹೆಸರಿನ ಕಳ್ಳಿನ ಸಮ್ಮಂದವನ್ನು ಎಲ್ಲೆಂದರ ಅಲ್ಲಿ (ಬಳಕುವ ಬಳ್ಳಿ) ಆಸರೆ ಸಿಕ್ಕಲ್ಲೆಲ್ಲ ಅಪ್ಪಿಕೊಳ್ಳುವ ಬಳಕುವ ಬಳ್ಳಿ ಎಂಬುದು ಒಂದು ಸುಂದರ ಸೊಗಸಾದ ರೂಪಕವಾಗಿ ಬಳಕೆಗೊಳ್ಳುತ್ತಿದೆ. ಈ ರೀತಿ 'ಕಳ್ಳು-ಬಳ್ಳಿ' ಎಂಬ ಅರ್ತವತ್ತಾದ ಜೋಡುನುಡಿಯಾಗಿ ಬಳಕೆ ಇದೆ. ಈ ಕಳ್ಳು-ಬಳ್ಳಿ ಯಾವ ಯಾವ ತೆರನಾಗಿ

ಇರಲು ಸಾಧ್ಯವಿದೆ ಎನ್ನಲು. ನನ್ನ ಮನೆತನದ ಒಂದು ಸಂಗತಿಯನ್ನೆ ಉದಾಹರಣೆಯಾಗಿ ಕೊಡಲು ಇಚ್ಛಿಸುತ್ತೇನೆ.

**'ವಾರಿ'ಯವರ ವಂಶವಾಹಿನಿಯ ವಿವರಣೆ :** ಮೂಲ (ಗೆಡ್ಡೆ>) ಗಡ್ಡೆ ಹೀಗಿತ್ತು. ಒಕ್ಕಲಿತನವನ್ನೆ ಮುಖ್ಯ, ಕಸುಬಾಗಿ (ಕಸಬು>ಕಸುಬು–ಸಮರೂಪಗೊಳ್ಳು) ಕರ್ನಾಟಕದ ಏಕೀಕರಣದಲ್ಲಿ ಕಳಕೊಂಡ 'ಜತ್ತ' ತಾಲೂಕಿನ 'ಶಾಲಬಿದರಿಗೌಡ್ರ' ಎಂಬ ಹೆಸರಿನಿಂದ ಬಹಳಷ್ಟು 'ಮೆರೆದವ್ರು–ಉರಿದವ್ರು'! ಅಲ್ಲಿ ಸುಮಾರು ಇನ್ನೂರು ಕೂರಿಗೆ ಹೊಂದಿದ ಜಮೀನಿನ ವತನದಾರರು; ಬಹುತೇಕ ಸುತ್ತ–ಮುತ್ತ ತಮ್ಮ ಅಟ್ಟಹಾಸ ತೋರುತ್ತ, ಮೆರೆಯುತ್ತ ಬಂದವರೆಂದು ಕಾಣುತ್ತದೆ!

**ಪಯಣಕ್ಕೆ ಕಾರಣ :** ಒಮ್ಮೆ ಕಾರಹುಣ್ಣಿಮೆಯ ದಿನ ಸಂಭ್ರಮ ಆಚರಣೆಯ ನೆಪದಲ್ಲಿ ಬಾರಿ ಗದ್ದಲ, ಗಲಾಟೆ, ತಗಲ್ಬಾಜಿ ವ್ಯವಹಾರದ ಚಟುವಟಿಕೆ ನಡೆಯಿತು. ಸದ್ದು–ಗದ್ದಲಗಳ ನಡುವೆ ಕೊಲೆ–ಸುಲಿಗೆಗಳು ಸಾಗಿದವು! ಆಂಗ್ಲರ ಸುಪರ್ದಿಯಲ್ಲಿರುವ ಪೇಶ್ವೆ ಆಡಳಿತ ವಿಚಾರಣೆ ನಡೆಸಿತು. ಆ ಅಪರಾದಿಗಳು ಎಂಬುದು ಸಾಲಬಿದರಿ ಗೌಡರ ಮನೆತನಕ್ಕೆ ಸುತ್ತಿಕೊಂಡಿತು. ಆಗ ಪೇಶ್ವೆಗಳ ಮೂಲಕ ಆಂಗ್ಲರು ಅಪರಾದಿಗಳನ್ನು ಬಂದಿಸುವಂತೆ ಪರ್ಮಾನು ಹೊರಡಿಸಲಾಯಿತು.

**ಪಯಣದ ಹಾದಿ :** ಆ ನೆಲೆಯಿಂದ ಕಾಲು ಕೀಳುವುದೆಂದು, ತೀರ್ಮಾನ ತೆಗೆದುಕೊಳ್ಳಲಾಯ್ತು. ಆವಶ್ಯಕ ಎನಿಸಿದ ಪಾತ್ರೆ–ಪಗಡಿ, ಸಾಮಾನು–ಸರಂಜಾಮು, ಕೂಸು–ಕುನ್ನಿಗಳನ್ನೆಲ್ಲ ಕಟ್ಟಿಕೊಂಡು, ಎರಡು ಚಕ್ಕಡಿ ಸಮೇತವಾಗಿ ಹೊರಟರು. ತುಂಬಿ ಹರಿಯುವ ಬೀಮಾ ತೀರ ಅಡೆ–ತಡೆಯಾಯ್ತು; ಆಗ ಆ ಮನೆಯ ಹಿರಿಯಜೀವ ನೀಲಮ್ಮ ಹರಕೆ ಹೊತ್ತಳು. ಹೊಳೆ ಇಬ್ಬಾಗವಾಯ್ತು. ಹಾದಿ ಸುಗಮವಾಯ್ತು. ಹಂತ–ಹಂತವಾಗಿ ಎರಡು ನೆಲೆಯಲ್ಲಿ ನಿಂತು, ಮೂರನೇ ನೆಲೆಯಾದ ಬಾದಾಮಿಗೆ ಬಂದು ತಲುಪಿದರು. ಮೊದಲನೆಯ ನೆಲೆ ಸುರಕ್ವಾಡ ಕೊಂಗವಾಡವಾದರೆ ಎರಡನೆಯ ನೆಲೆ ಸ್ಪಷ್ಟವಾಗಿಲ್ಲ.

**ಬಾದಾಮಿಯಲ್ಲೆ ನೆಲೆವಾಸಿಯಾಗಲು ಕಾರಣ :** ತಾವು 'ಅಪರಾದಿ' ಎಂಬ ಹಣೆಪಟ್ಟಿ ಹೊತ್ತು ಬಂದವರು; ಜೀವ ಉಳಿಸಿಕೊಂಡರೆ ಸಾಕು, ಎಂದು 'ಹಾಂವಸ್ಯಾಡುತ್ತ' ಬಂದವರು. ಉದ್ದಕ್ಕೂ ಸಾಕಷ್ಟು ಏಳು–ಬೀಳುಗಳನ್ನು ಕಾಣುತ್ತ ಕಷ್ಟ–ನಷ್ಟವನ್ನು ಅನುಬವಿಸುತ್ತ ಬಂದವರು. ಹೀಗಾಗಿ ಅಡಗಿಸಿಟ್ಟುಕೊಂಡು ಬದುಕು ಸಾಗಿಸಲು ಗಿಡ–ಮರಗಳ (ಈಗ ಅದೆಲ್ಲವೂ ಬೋಳು ಬೋಳು!) ಹಸಿರು ಹಾಸನ್ನುಳ್ಳ ಬಾದಾಮಿ ತಕ್ಕದು ಎನಿಸಿದೆ. ಮಿಗಿಲಾಗಿ ದಯ್ತ್ಯಾಕಾರದ ಏಕಶಿಲೆಯ ಬಂಡೆಗಳ ನಡುವಿನ ಕೊರಕಲು ಗುಹೆಯಂತೆ ಬಾಗಿದ ಬಂಡೆಗಳು, ಇವೆಲ್ಲ ಅಡಗುದಾಣವಾಗಿಸಿಕೊಳ್ಳಲು ಅನುಕೂಲವಾಯ್ತು. ಜೊತೆಗೆ ಈ ನೆಲೆ ಪೇಶ್ವೆ ಆಡಳಿತದಿಂದ ಮುಕ್ತವಾದ (ಸುಮಾರು ಮುನ್ನೂರು ವರುಶಗಳ ಹಿಂದಿನ ಸ್ತಿತಿ–ಗತಿ ಇದು.) ಆದಿಲ್‌ಶಾಹಿ ಆಡಳಿತಕ್ಕೆ ಸೇರಿದ್ದಾಗಿತ್ತು.

ಈ ಎಲ್ಲ ಕಾರಣದಿಂದ (ಖಾಯಮ್>) ಕಾಯಮ್ಮಾಗಿ (ಠಿಕಾಣೆ>) ಟಿಕಾಣಿ ಹೂಡಲು (ಟಿಕಾಣಿ ಹೂಡು–(ನುಡಿಗಟ್ಟು)=ನೆಲೆಯನ್ನಾಗಿ ಮಾಡಿಕೊಳ್ಳು) ಮನಸು ಮಾಡಿದರೆಂದು ತೋರುತ್ತದೆ. ಕೆಲಕಾಲ (ಅಂದರೆ ಹಲವು ವರುಶಗಳೆ?) ಗುಡ್ಡದಲ್ಲಿರುವ ಕಲ್ಲುಪಡಿಯಲ್ಲಿ ತಾತ್ಕಾಲಿಕವಾದರೂ ವಾಸವಾಗಿರಬೇಕು! ಈ ಹಿನ್ನಲೆಯಯಲ್ಲಿ ಅಡ್ಡೆಸರು ರೂಪಗೊಂಡಿದೆ.

ಬಂಡೆಗಲ್ಲಿನ 'ಒರೆ'ಯಲ್ಲಿ ಹಲವು ವರುಶ ಇದ್ದವರು>ಗುಡ್ಡದ (ಒರೆ>ವಾರೆ>ವಾರಿ) 'ವಾರಿ'ಯಲ್ಲಿ ಬದುಕು ಸವೆಸಿದವರು; (ಒರೆ+ಕಣ್ಣ>ಒರೆಕಣ್ಣು>ವಾರೆ/ರಿಗಣ್ಣು ಎಂಬಂತೆ) 'ವಾರಿಯವರು'>ಏಕವ್ಯಕ್ತಿಯನ್ನು ಸೂಚಿಸಲು ಬಳಕೆ–'ವಾರಿ'.

ಏಕ ವ್ಯಕ್ತಿ ಆದರೂ ಪ್ರೀತಿ, ಗವ್ರವ ಸೂಚಕವಾಗಿ ಮತ್ತೆ ಹಲವಚನ ಬಳಕೆ: 'ವಾರಿಯವರು' ಇದು ಅಡ್ಡೆಸರಿನ ಕತೆ ಆಯ್ತು. ಇದೀಗ ಕಳ್ಳು-ಬಳ್ಳಿಯ ಚಿತ್ರಪಟ ೧.ನೋಡಿ.

೪. **ಜಗಣ/ವಿನ್ಯಾಸದ ಪದಗಳು** : ಕಚೇರಿ, ತರಂಗ, ಹಿಲಾಲು, ವಿಶಾಲ ಉಚ್ಚಾರಣೆಯ ಬಗೆಯನ್ನಾದರಿಸಿ ಜಗಣ ವಿನ್ಯಾಸದ (U-U) ಪದಗಳು ಎನ್ನುತ್ತೇವೆ.

ಒಂದು ಕಾಲದಲ್ಲಿ ಸಂಸ್ಕ್ರುತಮಯ ತೋಳ್ತೆಕ್ಕೆಯಲ್ಲೆ ಬೆಳೆದು ಬಂತೆಂಬ ಕಾರಣಕ್ಕೆ ಕನ್ನಡ ತನ್ನದೇ ಆದ ಸ್ವಂತಿಕೆಯ ಉಸಿರಾಟದ ಕ್ರಿಯೆ ಸಾದ್ಯವಾಗಿರಲಿಲ್ಲ. ಮೆಲ್ಲ ಮೆಲ್ಲನೆ ಮಾರ್ಗ ಶಯ್ಲಿಯಿಂದ ಹೊರಬಂದು ಜನತೆಯನ್ನು ಮುಟ್ಟುವ-ತಟ್ಟುವ ಬಾಶೆಯಾಗಿ ಬಳಕೆಯ ತಿರುವನ್ನು ಪಡೆಯಲಾರಂಬಿಸಿತು. ಆಗ ಸಹಜವಾಗಿ ಜನಪದ ಬಾಶೆಯ ಸೆಳವಿಗೆ ಸಿಲುಕಿ ತನ್ನತನದ ಲಕ್ಕಣದೊಂದಿಗೆ ಉಸಿರಾಡಲು ಆರಂಬಿಸಿರಬೇಕು.

ಈ ನೆಲೆಯಲ್ಲಿ ನೋಡಿದರೆ ಮೊದಲ ಬಾರಿಗೆ ಕನ್ನಡ ಬಾಶೆ ರಾಜ ಮಹಾರಾಜರುಗಳ ಆಸ್ತಾನದಿಂದ ಹೊರಬಂದಿತು. ಇದಕ್ಕೆ ಕಾರಣರಾದ ಶರಣರು ಅಂದರೆ ವಚನಕಾರರ ದ್ರುಸ್ಟಿ, ಆಶಯಕ್ಕೆ ಅನುಸಾರ ಜನಪರ ಕಾಳಜಿ ಹೊಂದಿ (ಗ್ರಾಂಥಿಕ>) ಗ್ರಾಂತಿಕ ರೂಪದ ಕನ್ನಡವು (ಮೊದಲ ಬಾರಿಗೆ) ಹಾದಿ-ಬೀದಿಯ ಬಾಶೆಯಾಗಿ ಬಳಕೆ ಆಗಲಾರಂಬಿಸಿತು. ಆಗಲೆ ಕನ್ನಡ ಎದೆ ಉಬ್ಬಿಸಿ ಉಸಿರಾಡಲು ಶುರುವಾಯಿತೆಂದು ತೋರುತ್ತದೆ. ಆವಾಗಲೇ ಅಚ್ಚಗನ್ನಡ ಪದಗಳ- ಮಯ್ ಕೊಡವಿಕೊಂಡು (ಪೊರೆ>) ಪರೆ ಬಿಚ್ಚಿದ ಹಾವಿನ ಹಾಗೆ - ಬಳಕೆಯ ಚುರುಕುತನ ಇನ್ನೂ ಹೆಚ್ಚುವಂತಾಯಿತು.

ಈ ತರಹದ ತಿರುವು ಶರಣರ ಕ್ರಾಂತಿಯ ಕಾಲ (ಸು.೧೨ನೇ ಶತಮಾನ)ದಲ್ಲಾದರೂ ಈ ಪರಿವರ್ತನೆ ನಂತರದ ಕಾಲದಲ್ಲೂ (ಮಾರ್ಗಕಾವ್ಯ ಪರಂಪರೆಯಲ್ಲಿ) ಲಗ್ಗೆಯಿಕ್ಕಿತು. ಕಾರಣದಿಂದಲೆ ೧೩ನೇ ಶತಮಾನದಲ್ಲಿ ಬರುವ ಕೇಶಿರಾಜ ಒತ್ತುಕೊಡುವ ರೀತಿ ಉದಾಹರಣೆಗಳೊಂದಿಗೆ ದಾಕಲಿಸುವುದು ಕಂಡುಬರುತ್ತದೆ.

ನೋಡಿ : (ಶಿಥಿಲ>) ಶಿತಿಲದ್ವಿತ್ವದ ವಿಶಯ ವಿವರಣೆ - ಸೂತ್ರ :೫೨, ೫೩, ೫೪. ಕೆಲವು ಪದಗಳ ಸ್ವರೂಪ ವಿವರಣೆ - ಸೂತ್ರ ೪೬.

೫. ಕನ್ನಡದಲ್ಲಿ ಒಳರಚನೆ ಉಳ್ಳ ಹಲವು ಪದ ಪ್ರಕಾರಗಳಲ್ಲಿ (ಸಮಸ್ತ ಪದಗಳ ಕೂಡುಪದಗಳು, ಮರುದನಿ ಪದಗಳು ಮತ್ತು ನುಡಿಗಟ್ಟುಗಳು ಇತ್ಯಾದಿ) ಈ ಜೋಡು ಡಿಗಳು ಒಂದು ಗಮನೀಯ ಸ್ತಾನವನ್ನು ಪಡೆಯುತ್ತವೆ. ಈ ಕುರಿತು ನಾನೆ ಬರೆದ (ಲೇ ನ>)ಲೇಕನಗಳು, ಪುಸ್ತಕವನ್ನು ಆಸಕ್ತರು ಕಣ್ಣು ಹಾಯಿಸಬಹುದು.

೧. ಪುಸ್ತಕ : 'ಬಾದಾಮಿ ಪರಿಸರದ ಜೋಡಿನುಡಿಗಳು' - ಒಂದು ಬಾಶಿಕ ವಿಶ್ಲೇಶಣೆ. ಕ.ಸಾ.ಪ. ಪ್ರಕಟನೆ, ಬೆಂಗಳೂರು. ೨೦೧೬.

೨. ಲೇಕನ : 'ಕನ್ನಡ ಪದಗಳು ಮತ್ತು ಪದ ಪ್ರಕಾರಗಳ ಒಳರಚನೆಯ ಸ್ವರೂಪ'

ಕರ್ನಾಟಕ 'ಲೋಚನ' ಶಾಣ್ಮಾಸಿಕ ವಿದ್ವತ್ ಪತ್ರಿಕೆ. ಸಂ:೩೦, ಸಂ:೦೧.

೩. ಲೇಕನ : 'ಕನ್ನಡದಲ್ಲಿ ಕೂಡುಪದಗಳು. ಕ.ಲೋ. ಶಾ.ವಿ.ಪ. ಸಂ:೨೮, ಸಂ: ೦೨.

೬ (೧) **'ಬೇ' ಸಂಬೋದಿತವಾಗುವ ಏಕಾಕ್ಕರದ ವಿಚಾರ** : ಈ ಕುರಿತು ಕನ್ನಡ ಬಾಶಾ ಪಂಡಿತರೊಬ್ಬರ ನಿಲುವು ಹೀಗಿದೆ. "ಅಬ್ಬೆ ಎಂಬುದು ಒಂದು ಕಾಲಕ್ಕೆ ಕನ್ನಡದಲ್ಲಿ ತಾಯಿ ಎಂಬರ್ಥವನ್ನು ಕೊಡುತ್ತಿತ್ತು. ಈಗ ಅದು ಮದ್ಯ ಕರ್ನಾಟಕದಲ್ಲಿ 'ಬೇ' ಎಂದಾಗಿ ಕೆಳವರ್ಗದ ಸ್ತ್ರೀಯರನ್ನು ಸಂಬೋದಿಸುವ ಪದವಾಗಿ ಪರಿಣಮಿಸಿದೆ"

(ಎಂ ಚಿದಾನಂದಮೂರ್ತಿ. ಪುಸ್ತಕ:'ಕನ್ನಡ ಬಾಶಾ ವಿಜ್ಞಾನದ ಮೂಲ ತತ್ವಗಳು' ಪುಟ ೬೯.)

ಇಲ್ಲಿ 'ಚಿಮೂ' ಅವರು ಎದ್ದು ಕಾಣುವ ಹಾಗೆ 'ಕೆಳವರ್ಗದ ಸ್ತ್ರೀ' ಎಂದೇ ಹೆಸರಿಸಿದ್ದಾರೆ. 'ಬೇ' ಎಂಬುದು 'ಅಬ್ಬೆ' ಪದದ ಪಳಯುಳಿಕೆ ಎಂದಿದ್ದಾರೆ. ಇದು ನಿಜ. ಆದರೆ ಅವರೆ ಮುಂದುವರಿದು, 'ಕೆಳವರ್ಗ', 'ಕೀಳಾರ್ತ' ಎಂಬ ಪದಗಳನ್ನು ಬಳಸಿರುವುದು ಮಾತ್ರ ತಪ್ಪು ತಿಳಿವಿನ ವಿಶ್ಲೇಶಣೆಯೇ ಆಗಿದೆ ಎನ್ನಬೇಕು! ಶರೀಪರ 'ಬಿದ್ದಿಯ ಬೇ ಮುದುಕಿ.....!' ಎಂಬ ಸಾಲನ್ನೇ ಗಮನಿಸಿ ! ಆಮೇಲೆ ಮತ್ತೊಮ್ಮೆ ಪರಾಂಬರಿಸಿ ನೋಡಿ! 'ಹೆಬ್ಬಟ್ಟಿನ' ಮಂದಿ ಎಂಬ (ತಾತ್ಸಾರ>) ತಾಚಾರದ ಆಶಯ ಇವರಲ್ಲಿ ಮನೆ ಮಾಡಿದಂತಿದೆ.

ಸಾಮಾನ್ಯವಾಗಿ ಇಲ್ಲಿಯ ಹಳ್ಳಿ ವಲಯದಲ್ಲಿ ಜಾತಿ, ವರ್ಗ, ವರ್ಣದ ತಾರತಮ್ಯ ಇರದೆ ಸಾಂಪ್ರದಾಯಿಕ ಉಡುಗೆ–ತೊಡುಗೆ ತೊಟ್ಟ (ಅತಿ ಶ್ರೀಮಂತರಲ್ಲದ) ಮಹಿಳೆಗೆ ಅನ್ವಯಿಸಿ ಈ 'ಬೇ' ಎಂಬ ರೂಪ ಬಳಕೆ ಆಗುವುದುಂಟು. ಅಂದ ಮೇಲೆ ಈ ಬಗೆಯಾದ ತರ–ತಮದ ಕಲ್ಪನೆ ಇಲ್ಲಿ ಅಪ್ಪಿ–ತಪ್ಪಿಯೂ ನುಸುಳಲಾರದು ಎನ್ನಬೇಕು.

(೨) ಇನ್ನು 'ಅಮ್ಮ' ಎನ್ನುವುದು ಈ ವಲಯದಲ್ಲಿ (ಅಂದರೆ ಬಹುತೇಕ ಉತ್ತರ ಕರ್ನಾಟಕದಲ್ಲಿ) ಸ್ವಲ್ಪ ಬಿನ್ನ ನೆಲೆಯೊಂದಿಗೆ ಬಳಕೆ ಇದೆ. ಶಿಸ್ಟ ಜನಗಳಲ್ಲಿ 'ಅಮ್ಮ' ಪದ ತಾಯಿ ಎಂಬ ತಿರುಳಿದೆ. ಹಾಗೆಯೇ ದುಡಿಮೆ ಜನಾಂಗಗಳಲ್ಲಿ ಈ ಪದ ಕಳ್ಳು–ಬಳ್ಳಿ ನೆಲೆಯೊಂದಿಗೆ 'ತಾಯಿಯ ತಾಯಿ' ಇಲ್ಲವೆ 'ತಂದೆಯ ತಾಯಿ'ಯನ್ನು ಉದ್ದೇಶಿಸಿ ಬಳಕೆ ಇದೆ. ಎಲ್ಲ ಜನಾಂಗಳಲ್ಲಿಯೂ ವಯಸ್ಸಾದ ಮಹಿಳೆಗೆ ಅನುಸರಿಸಿ ಈ ಪದ ಬಳಕೆಯೂ ಉಂಟು.

(೩) 'ಅಮ್ಮ' ಪದ ಇನ್ನೊಂದು ನಿಟ್ಟಿನ ಬಳಕೆಯೂ ಇದೆ. "ಅಘನಾಶಿನಿಯಿಂದ ದಕ್ಷಿಣಕ್ಕೆ 'ಅಮ್ಮ' ಪದ ತಾಯಿ ಎಂಬರ್ಥವನ್ನು ಹೊಂದಿದ್ದರೆ, ಅಲ್ಲಿಂದ ಉತ್ತರಕ್ಕೆ ಅದು 'ವಿಧವೆ' ಎಂಬರ್ಥವನ್ನು ಪಡೆದಿದೆ". (ಉಪಬಾಷೆ, ಕೃ.ಪ.ಭಟ್ಟ, ಪ್ರಚಾರೋಪನ್ಯಾಸ ವಿಭಾಗ, ಬೆಂ.ವಿ.ವಿ. ೧೯೭೨.) ವಿದವೆ ಎಂಬರ್ತದ ತಿರುಳನ್ನು ಪಡೆಯಲು ಕಾರಣ, ಅಲ್ಲಿಯ ಹಾರುವ ಜನಾಂಗಗಳಲ್ಲಿ ಇರಬಹುದೆಂಬುದು ಸದ್ಯದ ನನ್ನೆಣಿಕೆ?

೭ **ಎಲ್ಲ ಗಡಿ ದಾಟದ ಕನ್ನಡಿಗರ ಶಾಂತಿ, ಸಹನೆ, ತಾಳಿಕೆ:** ಒಂದು ಕಾಲದಲ್ಲಿ ದೇಶದ ಬಹು ಬಾಗವನ್ನು ಆಳಿದವರು, ಕರ್ನಾಟಕದ ಅರಸರು; ಈ ಸಹಕಾರ, ಸವ್ಹಾರ್ದತೆಯನ್ನು (ಜಾತಿ, ಬಾವನೆ ಮೀರಿ) ಈ ಮುಂಚೆಯೇ ತೋರ್ಪಡಿಸಿದವರು ನಾವು. ೮ನೇ ಶತಮಾನದಲ್ಲೇ ಶ್ರೀವಿಜಯನು ತನ್ನ ಕವಿರಾಜಮಾರ್ಗದಲ್ಲಿ ಸ್ಪಸ್ಟ ಸುಳಿವಿನ ಹೇಳಿಕೆಯೊಂದನ್ನೇ ಕೊಟ್ಟಿದ್ದಾನೆ. ಗಮನಿಸಿ–

"ಕನ್ನಡದ ಮೊದಲ ಗ್ರಂಥವೆಂದು ಒಪ್ಪಿಕೊಳ್ಳಲಾದ 'ಕವಿರಾಜ ಮಾರ್ಗ'ದಲ್ಲಿ 'ಕಸವರಮ್'+ಎಂಬುದು, ನೆರೆ ಸೈರಿಸಲ್+ಆರ್ಪೊಡೆ ಪರ ವಿಚಾರಮುಮನ್ ಪರ ಧರ್ಮಮುಮನ್' ಎಂಬ ಚಿನ್ನದಂತಹ ಮಾತೊಂದಿದೆ. ಈ ಮಾತಿನ ಅರ್ಥ, 'ನಿಜವಾದ ಐಶ್ವರ್ಯ(ಚಿನ್ನ)ವೆಂದರೆ ಪರ ವಿಚಾರಗಳನ್ನು ಪರ ಧರ್ಮಗಳನ್ನು ಸಹಿಸತಕ್ಕದ್ದೇ' ಎನ್ನುವುದು. ಅನ್ಯರ ವಿಚಾರಗಳನ್ನು ಅನ್ಯರ ಧರ್ಮಗಳನ್ನು ಸಹಿಸುವುದೇ ನಿಜವಾದ ಸಂಪತ್ತು–ಎನ್ನುವ ಈ ಸೂಕ್ತಿ ಕನ್ನಡ ನಾಡು ಧರ್ಮಗಳ ವಿಚಾರಗಳಲ್ಲಿ ಉದ್ದಕ್ಕೂ ತಾಳಿದ ನಿಲುವಿಗೆ ವ್ಯಾಖ್ಯಾನದಂತಿದೆ. ಕರ್ನಾಟಕ ಸಂಸ್ಕೃತಿಯ ವೈಶಿಷ್ಟ್ಯವೆಂದರೆ ಅದರ ಧರ್ಮ, ಸಹಿಷ್ಣುತೆಯೇ, – ಎಂದು ಹೇಳಬಹುದು. ಕನ್ನಡನಾಡು ಅನೇಕ ಧರ್ಮಗಳಿಗೆ ನೆಲೆಮನೆಯಾದದ್ದರ ಜೊತೆಗೆ, ಈ ಎಲ್ಲ ಧರ್ಮಗಳು ಜೊತೆಗೂಡಿ ವರ್ಧಿಸುವ ಅವಕಾಶವನ್ನು ಉದ್ದಕ್ಕೂ ಕಲ್ಪಿಸಿಕೊಟ್ಟಿದೆ".

(ಜಿ.ಎಸ್. ಶಿವರುದ್ರಪ್ಪ. ಪುಸ್ತಕ: ಕನ್ನಡ ಸಾಹಿತ್ಯ ಸಮೀಕ್ಷೆ, ಬೆಂ.ವಿ.ವಿ. ಎ.ಮು–೨೦೦೦, ಪು. ೩೮–೩೯)

–ಕವಿರಾಜಮಾರ್ಗ, ೩–೧೭೭.

ಇದೇ ನಮ್ಮವರ ಹೆಗ್ಗಳಿಕೆ

# ಯಾದಗಿರಿ ಪರಿಸರದ ಮಾದಿಗರ ಸಾಂಸ್ಕೃತಿಕ ನಡವಳಿ



**ಆಜಪ್ಪ ಬಾಬು ಕಂಬಾರ**

ಭಾರತ ದೇಶ ಹಲವು ಸಮುದಾಯಗಳ ದೇಶ. ಪ್ರತಿಯೊಂದು ಸಮುದಾಯವೂ ಇಲ್ಲಿ ತನ್ನದೆ ಆದ ಸಂಸ್ಕೃತಿಯನ್ನು ಹೊಂದಿರುತ್ತದೆ. ಈ ಸಮುದಾಯಗಳ ಅಧ್ಯಯನ ಆ ಸಮುದಾಯಗಳನ್ನು ಚೆನ್ನಾಗಿ ತಿಳಿದುಕೊಳ್ಳುವುದಕ್ಕೆ ಸಹಾಯಕವಾಗುತ್ತದೆ. ಆ ಸಮುದಾಯಗಳ ಭವಿಷ್ಯವನ್ನು ರೂಪಿಸುವಲ್ಲಿಯೂ ಈ ಅಧ್ಯಯನಗಳು ಸಹಾಯಕ ವಾಗುತ್ತವೆ. ಹಾಗೆಯೇ ಯಾವ ಸಮುದಾಯವನ್ನು ಅಧ್ಯಯನ ಮಾಡುತ್ತಿವೆಯೊ ಆ ಸಮುದಾಯವನ್ನು ತಿಳಿದುಕೊಳ್ಳುವುದು ಮತ್ತು ಇತರ ಸಮುದಾಯಗಳೊಂದಿಗೆ ಅದರ ಜೀವನದ ಸಾಂಸ್ಕೃತಿಕ ಬೇರುಗಳನ್ನು ತಿಳಿಯಲು ಅನುಕೂಲವಾಗುತ್ತದೆ. ಇತರ ಸಮುದಾಯದ ಬೇರುಗಳೆಂದರೆ ಭಾರತೀಯ ಸಮಾಜದಲ್ಲಿರುವ ಬಹುಸಮಾಜದಲ್ಲಿ ಏನಾದರು ಅನುಕೂಲವಾದ ಅಂಶಗಳನ್ನು ಚರ್ಚಿಸುವುದು. ಭಾರತೀಯ ಬಹುಸಮಾಜದಲ್ಲಿ ಈ ಮೇಲು-ಕೀಳು ಸಮಾಜದಲ್ಲಿ ಮಾದಿಗ ಸಮುದಾಯ ಎಂಬುವುದು ಕೆಳವರ್ಗದ ಸಮಾಜವಾಗಿದೆ. ಹೀಗಾಗಿ ಈ ಸಮುದಾಯವನ್ನು ಅಧ್ಯಯನ ಮಾಡುವುದು ಇಂದು ಬಹಳ ಮುಖ್ಯವಾಗಿದೆ. ಏಕೆಂದರೆ ಮಾದಿಗ ಸಮುದಾಯದ ಅಭಿವೃದ್ಧಿಗಾಗಿ ಮತ್ತು ಅಭಿವೃದ್ಧಿಗೋಸ್ಕರ ನಾವು ಪ್ರಯತ್ನ ಮಾಡಬೇಕಾದರೆ ಆ ಸಮುದಾಯದ ಜೀವನ, ಬದುಕು, ಅದರ ತಾತ್ವಿಕತೆಯನ್ನು ತಿಳಿದುಕೊಳ್ಳಬೇಕು. ಅವರ ಅಧ್ಯಯನ ಇಲ್ಲದೆ ಅಷ್ಟು ಮಟ್ಟಿಗೆ ಯಶಸ್ಸು ಕಾಣುವುದಿಲ್ಲ. ನಾವು ಅಧ್ಯಯನ ಮಾಡುತ್ತಿರುವುದು ಒಂದು ಮಾದಿಗ ಸಮುದಾಯದ ಅಭಿವೃದ್ಧಿಗಾಗಿ ಮತ್ತೊಂದು ಮಾದಿಗ ಸಮುದಾಯದಲ್ಲಿ ಸಿಗಬಹುದಾದ ಸಕಾರತ್ಮಕ ಅಂಶಗಳನ್ನು ಕರ್ನಾಟಕ ಸಮಾಜದ ಬೆಳವಣಿಗೆಗೆ ಮತ್ತು ಭಾರತೀಯ ಸಮಾಜದ ಬೆಳವಣಿಗೆಗೆ ಬಳಸಿ ಕೊಳ್ಳಬಹುದು. ನಾನು ಈ ಪ್ರಸ್ತುತ ಲೇಖನದಲ್ಲಿ ಮಾದಿಗ ಸಮುದಾಯದ ಸಾಂಸ್ಕೃತಿಕ ಅಂಶಗಳನ್ನು ಪರಿಚಯ ಮಾಡುವಂತ ಪ್ರಯತ್ನವನ್ನು ಮಾಡುತ್ತಿದ್ದೇನೆ.

ಮಾದಿಗ ಸಮುದಾಯವು ಭಾರತದ ಎಲ್ಲಾ ಪ್ರದೇಶದಲ್ಲಿ ಕಂಡುಬರುತ್ತದೆ. ಈ ಸಮುದಾಯವು ಭಾರತದಲ್ಲಿ ಬೇರೆ ಬೇರೆ ಹೆಸರನಿಂದ ಕರೆಯುತ್ತಾರೆ. ದಕ್ಷಿಣ ಭಾರತದಲ್ಲಿರುವ ತಮಿಳುನಾಡು (ಚಿಕ್ಕಲಿಯರ್, ಸಿಕ್ಕಲಿಯರ್, ಪಗಡೆ, ಅರುಂದತಿಯರ್, ಮಾದಿಗ), ಕೇರಳ (ಜಾಂಬವ, ಮಾತಂಗ), ಆಂಧ್ರಪ್ರದೇಶ (ಮಾದಿಗ, ಆದಿಆಂಧ್ರ, ಜಾಂಬವಲೂ), ಮಹಾರಾಷ್ಟ್ರ (ಮಾಂಗ್) ಮತ್ತು ಕರ್ನಾಟಕದಲ್ಲಿ (ಮಾದಿಗ, ಮಾದರ, ಆದಿಕರ್ನಾಟಕ, ಆದಿಜಾಂಬವ, ಹರಿಜನರು) ಹೀಗೆ ಮಾದಿಗ ಸಮುದಾಯವನ್ನು ಈ ರಾಜ್ಯಗಳಲ್ಲಿ ವಿವಿಧ ಹೆಸರಿನಿಂದ ಕರೆಯುತ್ತಾರೆ. ಕರ್ನಾಟಕ ರಾಜ್ಯದಲ್ಲಿ ಎಲ್ಲಾ ಜಿಲ್ಲೆಗಳಲ್ಲಿ ಮಾದಿಗ ಸಮುದಾಯದವರು ವಾಸವಾಗಿದ್ದಾರೆ. ಉತ್ತರ ಕರ್ನಾಟಕದಲ್ಲಿರುವ ಯಾದಗಿರಿ ಒಂದು ಪ್ರದೇಶವಾಗಿದೆ. ಈ ಪರಿಸರದಲ್ಲಿರುವ ಮಾದಿಗ ಸಮುದಾಯದವರ ಸಾಂಸ್ಕೃತಿಕ ಬದುಕನ್ನು ಇಲ್ಲಿ ಪ್ರಸ್ತುತಪಡಿಸುತ್ತಿದ್ದೇನೆ.

ಯಾದಗಿರಿ ಪರಿಸರದ ಸುತ್ತಮುತ್ತ ಜನರು ಸಾಂಸ್ಕೃತಿಕ, ಸಾಮಾಜಿಕ, ರಾಜಕೀಯ, ಧಾರ್ಮಿಕ ಮತ್ತು ಜನಾಂಗಿಕವಾಗಿ ತನ್ನದೇ ಆದ ನೆಲೆಯಲ್ಲಿ ಬಾಳುತ್ತಿದ್ದಾರೆ. ಇಲ್ಲಿ ಸಾಮಾಜಿಕವಾಗಿ ಹಲವು ಸಮುದಾಯದ ಜನರ ಬೀಡಾಗಿದೆ. ಅದರಲ್ಲಿ ಮಾದಿಗ ಜನಾಂಗವು ಒಂದಾಗಿದೆ. ಈ ಜನಾಂಗವು ಇಲ್ಲಿ ವಾಸವಾಗಿರುವುದಕ್ಕೆ ಅನೇಕ ಐತಿಹಾಸಿಕ ಉಲ್ಲೇಖಗಳಿವೆ. ಯಾದಗಿರಿ ಬೆಟ್ಟದ ಮೇಲೆ ಒಂದು 'ಮಾತಂಗಿ ಬಾವಿ' ಇದೆ. ಯಾದಗಿರಿ ಪ್ರದೇಶದ ಗ್ರಾಮಗಳಲ್ಲಿ 'ಯಲ್ಲಮ್ಮನ ಭಕ್ತರು' ಇದ್ದಾರೆ. ಯಲ್ಲಮ್ಮ ದೇವರ ಪ್ರತಿಯೊಂದು ಕಾರ್ಯಕ್ಕೆ ಮಾದಿಗ ಜನಾಂಗದವರು ಪ್ರಮುಖ ಪಾತ್ರವಹಿಸುತ್ತಾರೆ. ಆ ಸಂದರ್ಭದಲ್ಲಿ ಮಾದಿಗರನ್ನು 'ಮಾತಂಗಿ ಮಕ್ಕಳು' ಎಂದು ಸಂಬೋಧನೆ ಮಾಡುತ್ತಾರೆ.

ಯಾದಗಿರಿ ತಾಲ್ಲೂಕಿನ ಹಳ್ಳಿಗಳಲ್ಲಿ ಮಾದಿಗ ಜನಾಂಗವು ಕನ್ನಡ ಭಾಷೆಯನ್ನು ಸಹಜವಾಗಿ ಮಾತಾನಾಡುತ್ತಾರೆ. ಆದರೆ ಕೆಲವೊಂದು ಹಳ್ಳಿಗಳಲ್ಲಿ ತೆಲುಗು ಭಾಷೆ ಮನೆ ಮಾತಾಗಿದೆ. ಇದಕ್ಕೆ ಮೂಲ ಕಾರಣವೆಂದರೆ ಆಂಧ್ರಪ್ರದೇಶಕ್ಕೆ ತೀರ ಹತ್ತಿರ ಇರುವುದು ಒಂದು ಕಾರಣವಾಗಿದೆ. ಮಾದಿಗ ಜನಾಂಗವು ಜನಸಂಖ್ಯೆಯಲ್ಲಿ ಯಾದಗಿರಿ ಪರಿಸರದಲ್ಲಿರುವ ದಲಿತ ಸಮುದಾಯದ ಜನಾಂಗಗಳಲ್ಲಿ ಬಹುಸಂಖ್ಯಾತರಾಗಿದ್ದಾರೆ. ಈ ಜನಾಂಗವು ಆರ್ಥಿಕ, ಸಾಮಾಜಿಕ, ರಾಜಿಕೀಯ, ಶೈಕ್ಷಣಿಕವಾಗಿ ಹಿಂದುಳಿದರೂ ಸಾಂಸ್ಕೃತಿಕವಾಗಿ ಶ್ರೀಮಂತವಾಗಿದೆ. ಪ್ರತಿಯೊಂದು ಸಮುದಾಯದ ಆಚರಣೆಗಳು ತಿಳಿದುಕೊಳ್ಳುವುದು ಇಂದು ಅವಶ್ಯಕವಾಗಿದೆ. ಒಂದು ಸಮುದಾಯವು ತನ್ನದೇ ಆದ ಆಚಾರ, ವಿಚಾರ, ನಂಬಿಕೆ, ಬದುಕು, ಜೀವನ ಶೈಲಿಗಳು ರೂಪಿಸಿಕೊಂಡಿರುತ್ತದೆ. ಅವುಗಳನ್ನು ಆಧುನಿಕ ಸಮಾಜದಲ್ಲಿ ಅರಿತುಕೊಳ್ಳಬೇಕಾಗಿದೆ. ಇಂತಹ ಉದ್ದೇಶಗಳಿಂದ ಮಾದಿಗ ಸಮುದಾಯದ ಸಾಂಸ್ಕೃತಿಕ ಆಚರಣೆಗಳನ್ನು ಈ ಲೇಖನದಲ್ಲಿ ವಿವರಿಸಲಾಗಿದೆ. ಈ ಸಮುದಾಯದ ಆಚರಣೆಗಳು ಕೆಲವೊಂದು ಸಂದರ್ಭದಲ್ಲಿ ಇತರ ಸಮುದಾಯದಲ್ಲಿ ಇರುವುದಕ್ಕಿಂತ ವಿಭಿನ್ನವಾಗಿವೆ. ಮಾದಿಗ ಜನಾಂಗದಲ್ಲಿರುವ ಸಾಂಸ್ಕೃತಿಕ ಆಚರಣೆಗಳು ಹೀಗಿವೆ.

**ಮದುವೆ ಕಾರಣಗಳು (ಕಾರ್ಯಕ್ರಮ)**

ಹುಡುಗ ಮತ್ತು ಹುಡುಗಿಯ ನವಜೀವನ ಮದುವೆಯಿಂದ ಆರಂಭವಾಗುತ್ತದೆ. ಮದುವೆ ಸಹಜವಾಗಿ ಹುಡುಗನ ಮನೆಯಲ್ಲಿ ಇರುತ್ತದೆ. ಅದರಿಂದ ಹುಡುಗಿಯ ಮನೆಗಿಂತ ಹುಡುಗನ ಮನೆಯಲ್ಲಿ ಹೆಚ್ಚಾಗಿ ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗುತ್ತವೆ. ಮನೆಯ ಹಿರಿಯಮಗ ಮತ್ತು ಕಿರಿಯಮಗನ ಮದುವೆ ಮಾಡುವಾಗ ಕಡ್ಡಾಯವಾಗಿ ಹುಡುಗಿಯನ್ನು ನಿಶ್ಚಯ ಮಾಡುವುದಕ್ಕಿಂತ ಮೊದಲು 'ಯಲ್ಲಮ್ಮ' ಮತ್ತು 'ಈರ್ಲ' (ಈರಲ)ದೇವರಿಗೆ ಹರಕೆಯನ್ನು ತೀರಿಸುತ್ತಾರೆ. ಹುಡುಗಿ ನಿಶ್ಚಯ ಮಾಡಿದಾಗ ಜನಾಂಗದ ಹಿರಿಯರು ಜೊತೆ ಮಾತುಕತೆ ನಡೆಸುತ್ತಾರೆ. ಹುಡುಗಿಯ ಮನೆಯವರು ಹುಡುಗನ ಊರಿಗೆ ಬಂದು ನಡೆನುಡಿ ಇತ್ಯಾದಿ ಅಂಶಗಳನ್ನು ವಿಚಾರ ಮಾಡುತ್ತಾರೆ. ಹುಡುಗನು ಕುಟಂಬದವರಿಗೆ ಇಷ್ಟವಾದ ಮೇಲೆ ಹಿರಿಯ ಮುಖಂಡರ ಸಮ್ಮುಖದಲ್ಲಿ ಮದುವೆ ದಿನಾಂಕ, ಓಲಿ (ತೆರವು), ಚಾಜ, ಗೋತ್ರ, ಬಂಗಾರ, ಬೆಳ್ಳಿ, ಬಟ್ಟೆಯ ಇತ್ಯಾದಿ ಅಂಶಗಳನ್ನು ಮಾತಾನಾಡುತ್ತಾರೆ. ಹೀಗೆ ಆಚರಣೆಯಾಗುವ ಕಾರ್ಯಕ್ರಮಗಳನ್ನು ಎರಡು ವಿಧದಲ್ಲಿ ವಿಭಾಗಿಸಲಾಗಿದೆ.

೧) ಮದುಮಗಳು ಮನೆಯಲ್ಲಿರುವ ಕಾರ್ಯಕ್ರಮಗಳು

೨) ಮದುಮಗನ ಮನೆಯಲ್ಲಿರುವ ಕಾರ್ಯಕ್ರಮಗಳು

**ಮದುಮಗಳ ಮನೆಯಲ್ಲಿರುವ ಕಾರ್ಯಕ್ರಮಗಳು**

**ಲಚ್ಚ್ಯಕಾರಣ (Engagement)**

ಈ ಕಾರ್ಯಕ್ರಮ ಹುಡುಗಿಯ ಮನೆಯಲ್ಲಿ ಹಮ್ಮಿಕೊಳ್ಳಲಾಗುತ್ತದೆ. ಹುಡುಗನ ಮನೆಯವರು, ಬೀಗರು ಮತ್ತು ಸಮುದಾಯದ ಜನರು ಎಲ್ಲಾರು ಹುಡುಗಿಯ ಊರಿಗೆ ಹೋಗುತ್ತಾರೆ. ಇವರು ನೇರವಾಗಿ ಹುಡುಗಿಯ ಮನೆಗೆ ಹೋಗುವುದಿಲ್ಲ. ಹುಡುಗಿಯ ಊರಿನ 'ಹಣಮಂದೇವರು ಗುಡಿ'ಯಲ್ಲಿ ಕುಳಿತಕೊಳ್ಳುತ್ತಾರೆ. ಇವರನ್ನು ಕರೆಯಲು ಹುಡುಗಿಯ ಮನೆಯವರು ಮತ್ತು ಸಮುದಾಯದವರು ಕೂಡಿ ಹಲಿಗೆಯ ಮೇಳದೊಂದಿಗೆ ಗುಡಿಗೆ ಬರುತ್ತಾರೆ. ಎರಡು ಊರಿನ ಜನರ ಮಧ್ಯ ಮಳೆ, ಬೆಳೆಯ ವಿಚಾರ ಮಾತನಾಡಿದ ಮೇಲೆ ಹುಡುಗ ಮತ್ತು ಹುಡುಗಿಯ ಮನೆಯ ಬೆಡಗನ್ನು ಕೇಳಿ ಅಲಾಯಿ-ಬಲಾಯಿ (ಅಲಂಗಿಸಿಕೊಳ್ಳುವುದು) ತೆಗದುಕೊಂಡು ಇಳೆ(ವಿಳೆ)ಯನ್ನು ಬದಲಾಸಿಕೊಳ್ಳುತ್ತಾರೆ. ಬೀಗರನ್ನು ಮೆರವಣಿಗೆಯ ಮುಖಾಂತರ ಮನೆಗೆ ಕರೆದುಕೊಂಡು ಬರುತ್ತಾರೆ.

ಹುಡುಗಿಯನ್ನು ಎಲ್ಲಾ ಜನರ ಸಮ್ಮುಖದಲ್ಲಿ ಕೂಡಸಿ ಚಾಜ ಮಾಡುತ್ತಾರೆ. ಗ್ರಾಮದ ಎಲ್ಲಾ ಸಮುದಾಯದವರು ಬಂದಿರುತ್ತಾರೆ. ಅವರೆಲ್ಲರಿಗೆ ಇಳೆಯನ್ನು ಕೊಟ್ಟು ಸಕ್ಕರೆಯನ್ನು ಹಂಚುತ್ತಿರುವಾಗ ಅನೇಕ ಜಾನಪದ ಹಾಡುಗಳನ್ನು ಆಡುತ್ತಾರೆ. ಇದು ಊರಿಂದ ಊರಿಗೆ ಭಿನ್ನತೆಯನ್ನು ರೂಢಿಸಿಕೊಂಡಿದೆ. ಈ ಕಾರ್ಯಕ್ರಮ

ರಾತ್ರಿಯಲ್ಲಿ ಹಮ್ಮಿಕೊಳ್ಳಲಾಗುತ್ತದೆ. ಆದರೆ ಇತ್ತೀಚಿನ ದಿನಗಳಲ್ಲಿ ಹಗಲಿನಲ್ಲಿ ಕೂಡ ಮಾಡಲಾಗುತ್ತದೆ. ಹಿಂದೆ ಹುಡುಗ ಈ ಕಾರ್ಯಕ್ರಮಕ್ಕೆ ಹೋಗುತ್ತಿರಲಿಲ್ಲ. ಇತ್ತೀಚಿನ ದಿನಗಳಲ್ಲಿ ಹುಡುಗನು ಈ ಕಾರ್ಯಕ್ರಮದಲ್ಲಿ ಭಾಗವಹಿಸಿ ಹುಡುಗಿಗೆ ಉಂಗುರ ತೋಡಿಸುತ್ತಾನೆ.

**ಬಳೆ ಹಾಕಿಸುವುದು**

ಮದುವೆ ಇನ್ನು ಎರಡು ಇಲ್ಲವೇ ಮೂರು ದಿನ ಇರುವಾಗ ಮದುವೆಯಾಗುವ ಹುಡುಗಿಗೆ, ಅವಳ ಕುಟುಂಬದವರಿಗೆ ಮತ್ತು ಕೆಲವು ಸಮುದಾಯದ ಮಹಿಳೆಯರಿಗೆ ಕಡ್ಡಾಯವಾಗಿ ಮದುವೆಯಾಗುವ ಹುಡುಗನ ಮನೆಯ ಹಣದಲ್ಲಿ ಬಳೆ ಹಾಕಿಸುತ್ತಾರೆ. ಇಲ್ಲಿ ಮುಹಿಳೆಯರಿಗೆ ಬಳೆಹಾಕಿಸುವುದರಿಂದ ಮಹಿಳೆಯರು ಒಟ್ಟಿಗೆ ಸೇರಲೆಂಬ ಪರಿಕಲ್ಪನೆ ಕಂಡು ಬರುತ್ತದೆ.

**ಮದುಮಗಳು ಮಾಡುವುದು**

ಮದುಮಗನ ಮನೆಯವರು ಮದುವೆಯ ಮೂರು ದಿನ ಇರುವಾಗ ಬಂದಿರುತ್ತಾರೆ. ಹಿರಿಯನು ಹಲಗಂಬ ತೆಗದುಕೊಂಡು ಬಾವಿಯ ಹತ್ತಿರ ಐದು ಹಲಗಂಬ ನೆಟ್ಟು ಸುರಿಗಿ ಒಳಗಡೆ ಕಂಬಳಿ ಹೊದಿಸಿಕೊಂಡು ಕೈಯಲ್ಲಿ ಕುಡುಗೋಲ ಹಿಡಿದುಕೊಂಡು ಕುಳಿತಿರುತ್ತಾನೆ. ಆಗ ಹುಡುಗಿಯನ್ನು ಮನೆಯಿಂದ ಬಾವಿಯ ಹತ್ತಿರ ಕರೆದುಕೊಂಡು ಬಂದು ಸುರುಗಿ ಒಳಗಡೆ ಕೂಡಿಸಿ ಸ್ನಾನವನ್ನು ಮಾಡಿಸುತ್ತಾರೆ. ಹುಡುಗಿಗೆ ಎಣ್ಣಿಪತ್ತಲು ಎಂಬ ಬಟ್ಟೆಯನ್ನು ಹೊದಿಸಿ ಮದುಮಗಳನ್ನಾಗಿ ಮಾಡಿ ಮನೆಗೆ ಕರೆದುಕೊಂಡು ಬರುತ್ತಾರೆ. ಮದುಮಗಳು ಮನೆಗೆ ಬಂದ ಮೇಲೆ ಹುಡುಗನ ಮನೆಯವರನ್ನು ಹಣಮಂದೇವರು ಗುಡಿಯಿಂದ ಕರೆದುಕೊಂಡು ಬರಲಾಗುತ್ತದೆ.

**ಉಡಿ ತುಂಬಾವ ಕಾರ್ಯಕ್ರಮ**

ಇದಕ್ಕೆ ಉಡಿ ತುಂಬಾವ ಕಾರಣ ಮತ್ತು ಹೆಣ್ಣು ತರಕ್ಕೆ ಹೋಗುವ ಕಾರಣ ಎಂದು ಕೂಡ ಕರೆಯುತ್ತಾರೆ. ಮದುವೆ ಇನ್ನು ಮೂರು ದಿನ ಇರುವಾಗ ಹುಡುಗನ ಮನೆಯವರು, ಸಂಬಂಧಿಕರು ಮತ್ತು ಸಮುದಾಯದ ಜನರು ಎಲ್ಲಾರು ಹುಡುಗಿಯ ಮನೆಗೆ ಹೋಗುತ್ತಾರೆ. ಹುಡುಗನ ಮನೆಯವರು ನೇರವಾಗಿ ಹುಡಗಿಯ ಮನೆಗೆ ಹೋಗದೆ ಊರ ಹಣಮಂದೇವರಗುಡಿಯಲ್ಲಿ ಕೂಡುತ್ತಾರೆ. ಇವರನ್ನು ಕರೆಯಲು ಹುಡುಗಿಯ ಮನೆಯವರು ಬರುತ್ತಾರೆ. ಬೀಗರಬಂದಿರುವ ವಿಚಾರ ತಿಳಿದುಕೊಂಡು ಮನೆಗೆ ಬಂದ ಮೇಲೆ ಆಚಾರದ ಭಾಗವಾಗಿರುವ ಕಾರ್ಯಕ್ರಮಗಳು ಜರುಗುತ್ತವೆ. ಮೆರವಣಿಗೆಯಲ್ಲಿ ಅನೇಕ ಜಾನಪದ ಕ್ರೀಡೆಗಳಾದ ಪಟ್ಟಾ ತೀರುವುದು, ಬಯಲಾಟದ ಪ್ರಸಂಗ ಹೇಳುತ್ತಾರೆ. ಬೀಗರು ಹುಡುಗಿಯ ಮನೆಗೆ ಬಂದ ಮೇಲೆ ಎಲ್ಲಾರಿಗೂ ಸತ್ಕರಿಸಿದ ಮೇಲೆ ಉಡಿ ತುಂಬಾವ ಕಾರ್ಯಕ್ರಮಕ್ಕೆ ಸಿದ್ಧವಾಗುತ್ತಾರೆ. ಈಗ ಮದುಮಗಳನ್ನು ಮನೆಯ ಅಂಗಳದಲ್ಲಿ ಕೂಡಿಸಿ ಅವಳಿಗೆ ದಂಡೆ, ಮುಗೂತಿ

(ಮುತ್ತು), ಬೆಂಡೋಲಿ, ಚೈನ ಇತ್ಯಾದಿ ಆಭರಣಗಳನ್ನು ತೊಡಿಸಿ ಉಡಿಯಲ್ಲಿ ಹಣ್ಣು ಹಂಪಲಗಳನ್ನು ಇಟ್ಟು ಮದುಮಗಳ ಉಡಿ ತುಂಬುತ್ತಾರೆ. ಇದು ಮುಗಿದ ನಂತರ ಬಂದಿರುವ ಜನರಿಗೆ ಸಕ್ಕರೆ ಹಂಚಿ, ಊರಿನ ಎಲ್ಲಾ ಸಮುದಾಯದ ಜನರಿಗೆ ಇಳೆಯನ್ನು ಕೊಡುತ್ತಾರೆ. ಹುಡುಗನ ಮನೆಯವರು ಹಾಡು, ಜೋಕ್ಸ, ಮತ್ತು ಗಂಡ ಹೆಣ್ತಿಯ ಹೆಸರನ್ನು ಒಗಟುಗಳ ಮೂಲಕ ಹೇಳತ್ತಾಲೇ ಎಲ್ಲಾರು ನಲಿಯುತ್ತಾರೆ. ಮರ್ದಿನ (ನಾಳೆ ದಿನ) ಮಧ್ಯಾಹ್ನಕ್ಕೆ ಹುಡುಗನ ಮನೆಯವರು ಊರಿಗೆ ಮರಳುತ್ತಾರೆ. ಐದು ಜನರು ಮದುಮಗಳನ್ನು ಕರೆದುಕೊಂಡು ಬರಲು ಅಲ್ಲಿಯೆ ಉಳಿಯುತ್ತಾರೆ. ಮದುಮಗಳ ಜೊತೆಯಲ್ಲಿ ಮನೆಯವರು, ಬೀಗರು, ಸಮುದಾಯದವರು ಹುಡುಗನ ಮನೆಗೆ ಮದುವೆ ಮುನ್ನ ದಿನವೇ ಬರುತ್ತಾರೆ.

**ಮದುಮಗನ ಮನೆಯಲ್ಲಿರುವ ಕಾರ್ಯಕ್ರಮ**

**ಮದುಮಗನ ಮಾಡುವುದು**

ಮದುವೆಯ ಹಿಂದಿನ ರಾತ್ರಿ ಹುಡುಗನನ್ನು ಮದುಮಗನ್ನಾಗಿ ಮಾಡುತ್ತಾರೆ. ಮದುಮಗನ ಮಾಡಬೇಕಾದರೆ ಗಂಗಸ್ನಾನಕ್ಕೆ ಹೋಗುತ್ತಾರೆ. ಗಂಗಸ್ನಾನಕ್ಕೆ ಹೋಗುವ ಪೂರ್ವದಲ್ಲಿ ಹಲಗಂಬ (ಬಸಿರಿಗಿಡದ ಸಣ್ಣ ಕೊಂಬೆ) ತೆಗದುಕೊಂಡು ಸಮುದಾಯದ ಹಿರಿಯನು ಬಾವಿಯ ಮಗ್ಗಲು ಇರುವ ಜಾಗದಲ್ಲಿ ಸುತ್ತಲು ಹಲಗಂಬ ನೆಟ್ಟು ಸುರುಗಿಯೊಳಗಡೆ ಮಾತಾನಾಡದೆ ಕಂಬಳಿಯನ್ನು ಹೊಚ್ಚಿಕೊಂಡು ಕೈಯಲ್ಲಿ ಕುಡುಗೋಲ ಹಿಡಿದುಕೊಂಡು ಕುಳಿತಿರುತ್ತಾನೆ. ಗಂಗಸ್ನಾನಕ್ಕೆ ಬಂದ ಮದುಮಗನು 'ಸುರುಗಿ'ಯನ್ನು ಪ್ರದಕ್ಷಣೆ ಮಾಡಿ ಕುಳಿತುಕೊಳ್ಳುತ್ತಾನೆ. ಗಂಗಸ್ನಾನ ಮಾಡಿದ ಮೇಲೆ ಹುಡುಗನು ಮದುಮಗನಾಗಿ ರೂಪಗೊಳ್ಳುತ್ತಾನೆ. ಅವನ ಕೈಯಲ್ಲಿ ಚಾಕು,ಕಂಬಳಿಯನ್ನು ಕೊಡುತ್ತಾರೆ. ಗಂಗಾದೇವರಿಗೆ ಪೂಜೆ ಮಾಡಿ ಸಣ್ಣಮಕ್ಕಳು ಊಟ ಮಾಡಿದ ನಂತರ ಮನೆಗೆ ಬರುತ್ತಾರೆ.

**ಹಂದರ ಹಾಕವುದು**

ಹಂದರವನ್ನು ಮದುಮಗನ ಮನೆಯ ಮುಂದೆ ಹಾಕುತ್ತಾರೆ. ಹಂದರವನ್ನು ಮದುಮಗಳು ಮದುಮಗನ ಮನೆಗೆ ಬರುವ ದಿನ ಇಲ್ಲವೇ ಮದುವೆ ಮುಂಚೆಯ ದಿನ ಬೆಳ್ಳಿಗೆ ಹಾಕುತ್ತಾರೆ. ಹಂದರವನ್ನು ನಾಲ್ಕು ಹನ್ನೊಂದು ಗೇಣಿನ ನೊಗವನ್ನು ನೆಟ್ಟು ಅದರ ಮೇಲೆ ಬಸಿರುಗಿಡದ ತಪ್ಪಲವನ್ನು ಹಾಕಿ ಸಿದ್ದಗೊಳಿಸುತ್ತಾರೆ. ಈ ಹಂದರವು ಮದುವೆಯಲ್ಲಿ ಬಹುಮುಖ್ಯ ಪಾತ್ರವಹಿಸುತ್ತದೆ. ಇದರ ಒಳಗಡೆಯಲ್ಲಿ ಮದುಮಗನು ಮದುಮಗಳಿಗೆ ತಾಳಿಕಟ್ಟುವುದು ಮತ್ತು ಯಲ್ಲಮ ಶಕೆ ತೀರುಗುವ ಕಾರ್ಯಕ್ರಮಗಳು ಜರುಗುತ್ತವೆ. ಈ ಹಂದರವನ್ನು ಇಳಿಸುವರೆಗೆ ರಾತ್ರಿಯ ಸಮಯದಾಗ ಪೂಜೆ ಮಾಡಿ ನಾಲ್ಕು ದಿಕ್ಕಿಗೆ ಇರುವ ನೊಗಗಳಿಗೆ ದೀಪ ಹಚ್ಚಿ ಇಡುವುದು ಕಂಡುಬರುತ್ತದೆ.

**ಗುಡ್ಡ್ಯಾ**

ಗುಡ್ಡ್ಯಾ ಎಂಬ ದೇವರಿಗೆ ಹೋಗುತ್ತಾರೆ. ಈ ಜನಾಂಗದಲ್ಲಿ ಗುಡ್ಡ್ಯಾ ದೇವರು ಇರುವ ಕುಟುಂಬಗಳು ಮತ್ತು ಗುಡ್ಡ್ಯಾ ದೇವರು ಇಲ್ಲದ ಕುಟುಂಬಗಳು ಇವೆ. ಗುಡ್ಡ್ಯಾ ಇದ್ದವರು ಮಾತ್ರ ಈ ದೆವರನ್ನು ಮಾಡುತ್ತಾರೆ. ಗುಡ್ಡ್ಯಾಕ್ಕೆ ಹೋಗುವಾಗ ಬಡಿಗಿ, ಕೊಡಲಿ, ಸೂರಾಯಿ, ಜಂಬ್ಯ ಮುಂತಾದ ಆಯುಧಗಳನ್ನು ತೆಗದುಕೊಂಡು ಅತ್ಯಂತ ಸಡಗರದಿಂದ ಹಲಗೆವಾದ್ಯದೊಂದಿಗೆ ಅಕಾರ ಹೊಡಕಾಂತ ಗಂಗಾಳ ಆಡುತ್ತಲೇ ಗುಡ್ಡ್ಯಾದೇವರು ಗುರುತು ಮಾಡಿದ ಬನ್ನಿಗಿಡಕ್ಕೆ (ಶಮಿವೃಕ್ಷ) ಬರುತ್ತಾರೆ. ಗಂಗಾಳ ಆಡುವರಿಗೆ ಮದುಮಗನು ಹೊತ್ತಕೊಂಡಿರುವ ಮಗಿಯಿಂದ ನೀರನ್ನು ಇಳೆದೆಲಿಯಿಂದ ಸಿಂಪಡಿಸುತ್ತಾನೆ. ಈ ಮೆರವಣಿಗೆಗೆ ಹೋಗುವ ಸಮಯದಲ್ಲಿ ದೆವ್ವಗಳ ಕಾಟ ಬಂದಾಗ ನಿಂಬೆಹಣ್ಣು ಮತ್ತು ಉಳ್ಳಿಗಡ್ಡಿಯನ್ನು ಕಡಿದು ಒಗಿಯುತ್ತಾರೆ. ಬನ್ನಿಗಿಡಕ್ಕೆ ಪೂಜೆ ಮತ್ತು ಚಾಜ ಮಾಡುತ್ತಾರೆ. ಅಲ್ಲಿ ವಿಶೇಷವಾಗಿ ಮನೆಯಲ್ಲಿ ಮರಣವನ್ನು ಹೊಂದಿದ ಹಿರಿಯರಿಗೆ ಅನ್ನದ ಮುದ್ದೆ ಕಟ್ಟಿ, ಒಂದು ಕಂಬಳಿಯನ್ನು ಹೊದ್ದುಕೊಂಡು ಕೂಡಲಾಗಿರುವ ಯುವಕನಿಗೆ ಮುದ್ದ್ಯಾ ಬಂತಪ್ಪ ಮುದ್ದ್ಯಾ ಎಂದು ಕೂಗುತ್ತಾರೆ. ಆ ಯುವಕನು ಯಾರದಪ್ಪಯೆಂದಾಗ ಸತ್ತ ಹಿರಿಯರ ಹೆಸರು ಹೇಳುತ್ತಾರೆ. ಯುವಕನು ಬರಲಪ್ಪಯೆಂದು ಅಪ್ಪಣೆ ಕೊಟ್ಟಮೇಲೆ ಮುದ್ದ್ಯಾಯನ್ನು ಯುವಕನ ಕಡಿಗೆ ಒಗಿಯುತ್ತಾರೆ. ಹೀಗೆ ಗೊತ್ತಿರುವ ಎಲ್ಲಾ ಸತ್ತ ಹಿರಿಯರ ಹೆಸರಿನ ಮೇಲೆ ಮುದ್ದ್ಯಾಯ ಒಗಿಯುತ್ತಾರೆ. ಇಲ್ಲಿ ಸತ್ತ ಹಿರಿಯ ಹೆಣ್ಣಮಕ್ಕಳ ಹೆಸರಿನ ಮೇಲೆ ಮಾತ್ರ ಮುದ್ದ್ಯಾಯ ಒಗಿಯುವುದ್ದಿಲ್ಲ ಎಂಬವುದು ಗಮನಿಸಬೇಕಾದ ಸಂಗತಿಯಾಗಿದೆ. ಎಲ್ಲಾರು ಮುದ್ದ್ಯಾ ಮುಗಿದ ಮೇಲೆ ಯುವಕ ಡೇಗಿ ಸಂತೃಪ್ತಿಯನ್ನು ಸೂಚಿಸುತ್ತಾನೆ. ಎಲ್ಲಾರು ಮನೆಗೆ ಬರುತ್ತಾರೆ. ಈ ಕಾರ್ಯಕ್ರಮ ಮದುಮಗಳು ಮದುಮಗನ ಊರಿಗೆ ಬಂದ ಮೇಲೆ ನೆರವೇರುತ್ತದೆ.

ಮದುಮಗಳು ಮತ್ತು ಅವಳ ಊರಿನ ಜನರು ಮತ್ತು ಹಿರಿಯರು ಹಣಮಂದೇವರ ಗುಡಿಯ ಹತ್ತಿರ ಕುಂತಿರುತ್ತಾರೆ. ಮದುಮಗಳ ಊರಿನವರು ಬರುವಾಗ ಅಳಿಯನ ಬುತ್ತಿ ತಂದಿರುತ್ತಾರೆ, ಅದನ್ನು ಸಣ್ಣಮಕ್ಕಳ ಜೊತೆಯಲ್ಲಿ ಮದುಮಗನ ಮನೆಗೆ ತೆಗದುಕೊಂಡು ಬರುತ್ತಾರೆ. ಆ ಸಂದರ್ಭದಲ್ಲಿ ಹಾಸ್ಯಕ್ಕಾಗಿ ಮುಸಿರಿ ನೀರನ್ನು ಕುಡಿಯಲು ನೀಡುತ್ತಾರೆ. ಮದುಮಗನ ಮನೆಯವರು ಹೋಗಿ ಜಾಜ ಮಾಡಿ ಅಲಾಯಿ–ಬಲಾಯಿ ತೆಗದುಕೊಂಡು ಮೆರವಣಿಗೆಯ ಮೂಲಕ ಮನೆಗೆ ಕರೆದುಕೊಂಡು ಬರುತ್ತಾರೆ. ಮದುಮಗಳನ್ನು ಮನೆಯಾಗ ಕರೆದುಕೊಳ್ಳುವುದಿಲ್ಲ, ಏಕೆಂದರೆ ಅವಳು ಇನ್ನು ಮದುಮಗನ ಮನೆಯ ಭಂಡಾರಕ್ಕೆ ಬಿದ್ದಿರುವುದಿಲ್ಲ.

**ಯಲ್ಲಮ್ಮ ಶೆಕೆ**

ಈ ಕಾರ್ಯಕ್ರಮ ಹಂದರದ ಒಳಗಡೆ ನಡೆಯುತ್ತದೆ. ಅಲ್ಲಿ ಯಲ್ಲಮ್ಮನ ಮಂಡಲ ಬರೆದು ಮಂಡಲದೊಳಗೆ ದೀಪಗಳನ್ನು ಇಡುತ್ತಾರೆ. ಅದರ ಒಳಗಡೆ ಘಟ್ಟದ ಮಗಿ (ಇದು ಈಳಿಗೆ ಸಮುದಾಯದವರು ತೆಗದುಕೊಂಡು ಬರುತ್ತಾರೆ) ಮತ್ತು ಯಲ್ಲಮ್ಮನ

ಪ್ರತಿರೂಪವಾದ ಅಡಲಿಗೆ ಎರಡು ಜೊತೆಯಲ್ಲಿ ಇಟ್ಟು ಪೂಜೆ ಮಾಡುತ್ತಾರೆ. ಮಾತಂಗಿ ಮಕ್ಕಳು ಅಡಲಿಗಿಗೆ ಪೂಜೆ ಮಾಡಿದರೆ, ಈಳಿಗೆಯರು ಘಟ್ಟದ ಮಗಿಗೆ ಪೂಜೆ ಮಾಡುತ್ತಾರೆ. ಪೂಜೆ ಮಾಡಿದ ಮದುಮಗನ ಮನೆಯ ಹಿರಿಯ ಮಹಿಳೆಗೆ ಪಾದ (ಪಾದಗಳು ಚರ್ಮದಿಂದ ಮಾಡಿರುತ್ತಾರೆ) ಕಟ್ಟುತ್ತಾರೆ. ಪಾದ ಕಟ್ಟಿಕೊಂಡಿರುವ ಹಿರಿಯ ಮಹಿಳೆ ಮರಣಹೊಂದಿದ ಸುದ್ದಿ ತಿಳಿದ ಮೇಲೆ ಅಂತ್ಯಸಂಸ್ಕಾರದವರಿಗೆ ಊಟಮಾಡುವುದಿಲ್ಲ. ಇದು ಇತ್ತೀಚಿಗೆ ಕಟ್ಟುನಿಟ್ಟಿನ ನಿಯಮವಾಗಿ ಕಾಣುತ್ತಿಲ್ಲ.

ಮದುಮಗ ಮತ್ತು ಮದುಮಗಳು ಮದುಮಗನ ಮನೆಯ ಮತ್ತು ಕುಟುಂಬದ ಅಣ್ಣ ತಮ್ಮಂದಿರು ಎಲ್ಲಾರು ಹಂದರದ ಸುತ್ತ ತಿರುಗುತ್ತಿರುವಾಗ ಉದೋ ಉದೋ ಯಲ್ಲಮ್ಮ ಅಂತ ಮಾತಂಗಿ ಮಕ್ಕಳು ಎಲ್ಲಾರ ಬೆನ್ನಿಗೆ ಬೇವಿನ ತಪ್ಪಲದಿಂದ ಹೊಡಿಯುತ್ತಾರೆ. ಎಲ್ಲಾರು ಸಾಲಾಗಿ ನಿಂತುಕೊಂಡು ತಕ್ಷಣ ಎಲ್ಲಾರ ಕೈಯಲ್ಲಿ ಚಿಲ್ಲರ ಹಣವನ್ನು ಮನೆಯ ಯಜಮಾನ ನೀಡಿರುತ್ತಾನೆ. ಮಾತಂಗಿ ಮಕ್ಕಳು ಉಸಿರು ಬಿಡದೆ ಎಲ್ಲಾರಿಗೆ ಉದೋ ಉದೋ ಎಂದು ತಲಿಯ ಮೇಲೆ ಬೇವಿನ ತಪ್ಪಲದಿಂದ ಹೊಡಿಯುವುದರ ಮೂಲಕಎಲ್ಲಾರಲ್ಲಿ ಹಣವನ್ನು ತೆಗದುಕೊಂಡು ಈ ಕಾರ್ಯ ಮುಗಿದ ಮೇಲೆ ಮದುಮಗಳನ್ನು ಮನೆಯೊಳಗೆ ಕರೆದುಕೊಳ್ಳುತ್ತಾರೆ.

**ಸ್ಯಾಸಿ ಕಟ್ಟೆ ಮತ್ತು ಬೆಳ್ಳಿ ಬಂಗಾರ ಕೊಡಕ್ಕೆ ಚಿತ್ರ ಬರೆಯುವದು**

ಇದನ್ನು ಬರೆಯುವುದು ಯಾರು ನೋಡಬಾರದು ಎಂಬ ಕಲ್ಪನೆ ಇರುವುದರಿಂದ ಎಲ್ಲರೂ ಮಲಗಿದ ಮೇಲೆ ಬರೆಯುತ್ತಾರೆ. ಇಲ್ಲಿ ಪ್ರಮುಖವಾಗಿ ಮದುಮಕ್ಕಳು (ಮದುಮಗಮತ್ತು ಮದುಮಗಳು) ಅವರ ಜೊತೆಯಲ್ಲಿ ನೀರಮಿನದವರು ಕೂಡವಷ್ಟು ಜಾಗದ ಅಳತೆಯಲ್ಲಿ ೨" ಕಟ್ಟೆಯನ್ನು ಕಟ್ಟಿ ಗೋಡೆಗೆ ಚಿತ್ರ ಬರೆಯುತ್ತಾರೆ. ಸ್ಯಾಸಿ ಕಟ್ಟೆ ಪಕ್ಕದಲ್ಲಿ 'ಮಕ್ಕಳಕುಂಪಿ' ಕೆಸರನಿಂದ ನಿರ್ಮಾಣ ಮಾಡುತ್ತಾರೆ. ಅದರಲ್ಲಿ ಮದುಮಕ್ಕಳು ಬಿಳಿಜೋಳ ಮತ್ತು ಗೋಧಿಯನ್ನು ಬಿತ್ತುತ್ತಾರೆ. ಆ ಬಿತ್ತಿದ ಬೆಳೆ ಚೆನ್ನಾಗಿ ಸಂರಕ್ಷಣೆ ಮಾಡುತ್ತಾರೆ. ಬಿತ್ತಿದ ಬೆಳೆ ಎಲ್ಲಾವು ಜಲ್ದಿ ಸಸಿ ಬಂದರೆ ಜಲ್ದಿ ಮಕ್ಕಳು ಹುಟ್ಟುತ್ತಾವೆಂಬ ನಂಬಿಕೆಯ ಪರಿಕಲ್ಪನೆ ಇದೆ. ಬೆಳ್ಳಿ ಬಂಗಾರ ಕೊಡಕ್ಕೆ (ಕುಂಬಾರ ಮನೆಯಿಂದ ಮಣ್ಣಿನ ೫ ಕೊಡಗಳನ್ನು ತಂದಿರುತ್ತಾರೆ. ಅವುಗಳನ್ನು ನೀರುಮೀನಿಯಲು ಬಳಸುತ್ತಾರೆ) ಚಿತ್ರ ಬರೆಯುತ್ತಾರೆ.

**ಮದುವೆ ದಿನದ ಕಾರ್ಯಕ್ರಮಗಳು**

ಹೊತ್ತಿಗೆ (ಜೋತಿಷ್ಯ) ಕೇಳಿದ ಸಮಯಕ್ಕೆ ಎಲ್ಲಾ ಕಾರ್ಯಕ್ರಮಗಳನ್ನು ಮಾಡಲು ಎಲ್ಲಾ ರೀತಿಯಿಂದ ಪ್ರಯತ್ನಿಸುತ್ತಾರೆ. ಮದುಮಗನಿಗೆ ಪಟ್ಟಕ ಇಲ್ಲವೇ ಭಂಡಾರಕಕ್ಕೆ (ಇದು ಎಲ್ಲಾ ಕುಟಂಬಗಳಿಗೆ ಇಲ್ಲ ಇದನ್ನು ಮಲ್ಲಯ್ಯನ ಭಕ್ತರಿಗೆ ಮಾತ್ರ) ಹಾಕುತ್ತಾರೆ. ಇದನ್ನು ಸಿದ್ಧಪಡಿಸಲು ಹಿರಿಯರು ಮನೆಯ ಅಂಗಳದಲ್ಲಿ ಯಾರಿಗೆ ಕಾಣದಾಗೆ ಬಟ್ಟೆ ಮಾರೆಮಾಡಿಕೊಂಡು ಭಂಡಾರ ಮತ್ತು ಹಿಟ್ಟಿನಿಂದ ಮಂಡಲ ಬರೆಯುತ್ತಾರೆ. ಇದರ ಒಳಗಡಗೆ ಮದುಮಗನ್ನು ಕೂಡಿಸಿ ಪೂಜೆ ಮಾಡಿ ತಲೆ ಮೇಲೆ ಮಲ್ಲಯ್ಯನ

ಮೂರ್ತಿ ಕಟ್ಟಿ ಮದುಮಗನನ್ನು ಮಲ್ಲಯ್ಯ ದೇವರ ದಿಕ್ಕಿಗೆ ಮೆರವಣಿಗೆಯ ಮೂಲ ಕರೆದುಕೊಂಡು ಹೋಗುತ್ತಾರೆ. ಈ ಸಮಯದಲ್ಲಿ ಮದುಮಗನು ಒಂದು ರೀತಿಯಿಂದ ದೇವರು ಮೈಯಲ್ಲಿ ಬಂದಿರುವುದರಿಂದ ಕಾರಣ ಯಾರು ಎಷ್ಟೇ ಗಟ್ಟಿಯಾಗಿ ಹಿಡಿದರು ಮುಂದೆ ಹೋಗಲು ಪ್ರಯತ್ನಿಸುತ್ತಾನೆ. ಅಂತಿಮದಲ್ಲಿ ಪೂಜೆ ಮಾಡಿ ಮನೆಗೆ ಬರುತ್ತಾರೆ

## ನೀರಮೀನಿಯುವುದು

ಮದುಮಕ್ಕಳಿಗೆ ಸ್ನಾನ ಮಾಡಿಸುವ ಕಾರ್ಯಕ್ಕೆ ನೀರಮೀನಿಯುವುದು ಎಂದು ಕರೆಯುತ್ತಾರೆ. ಇಲ್ಲಿ ಕೆಲವೊಂದು ನಿಯಮಗಳಿವೆ. ಅಂದರೆ ಹಲ್ಲು ಮುರಿದಿರುವ ಇತರ ಅಂಗಗಳು ಊನವಾದ ಮದುಮಗ ಮತ್ತು ಮದುಮಗಳಿಗೆ ಮನೆಯಲ್ಲಿ ಸ್ನಾನ ಮಾಡಿಸುತ್ತಾರೆ. ಮುತ್ತೈದೆಯರು ಐದು ಮಂದಿ ಬೆಳ್ಳಿ ಬಂಗಾರ ಕೊಡದಲ್ಲಿ ನೀರನ್ನು ನಾಲ್ಕು ದಿಕ್ಕಿಗೆ ಇಟ್ಟು ಸುರುಗಿ ಸುತ್ತಿರುತ್ತಾರೆ. ಅದರ ಸುತ್ತ ಮದುಮಕ್ಕಳ ನೀರಮೀನಿಯ ಮಡಿಕೆಯರು ಐದು ಸುತ್ತ ಪ್ರದಕ್ಷಿಣೆ ಮಾಡಿದ ನಂತರದಲ್ಲಿ ಸುರುಗಿ ಒಳಗಡೆ ಹೋಗಿ ಎಣ್ಣೆ ಹಚ್ಚಿ ಸ್ನಾನ ಮಾಡಿಸುತ್ತಾರೆ ಮದುಮಕ್ಕಳಿಗೆ. ಅಲ್ಲಿಸ್ನಾನ ಬಟ್ಟೆಯನ್ನು ಮದುಮಕ್ಕಳಿಗೆ ತೊಡಿಸುತ್ತಿರುವಾಗ ಜಾನಪದ ಹಾಡುಗಳನ್ನು ಅನುತ್ತಾರೆ ಸ್ನಾನ ಮಾಡಿದ ಮದುಮಕ್ಕಳನ್ನು ಸರಿಯಾದ ಸಮಯಕ್ಕೆ ಹಂದರದ ಒಳಗಡೆ ಕರೆದುಕೊಂಡು ಬರುತ್ತಾರೆ. ಹಿರಿಯರು ಮದುಮಕ್ಕಳಿಗೆ ಮತ್ತು ಮಂಗಳಸೂತ್ರ ಪೂಜೆ ಮಾಡಿ ಎಲ್ಲಾ ಜನರಿಗೆ ತೋರಿಸಿ ಆಶೀರ್ವಾದ ಪಡೆದುಕೊಂಡ ಮೇಲೆ ಮಂಗಳಸೂತ್ರ ಮದುಮಗನ ಕೈಯಲ್ಲಿ ಕೊಡುತ್ತಾರೆ. ಎಲ್ಲರಿಗೂ ಅಕ್ಕಿಕಾಳನ್ನು ಹಂಚಲಾಗುತ್ತದೆ. ಮದುಮಗನಿಗೂ ಮತ್ತು ಮದುಮಗಳಿಗೂ ತೊಂಡಪ್ಪಿ ಮತ್ತು ಬಾಣಿ ಮೇಲೆ ನಿಲ್ಲಿಸಿ ತಾಳಿಕಟ್ಟಿದ ಮೇಲೆ ಎಲ್ಲಾರು ಅಕ್ಕಿಕಾಳನ್ನು ಮದುಮಕ್ಕಳ ಮೇಲೆ ಹಾಕುತ್ತಾರೆ. ಮದುಮಕ್ಕಳು ಊರಿನ ಹನುಮಂದೇವರ ಗುಡಿಗೆ ಹೋಗಿ ಆಶೀರ್ವಾದ ಪಡೆದುಕೊಂಡು ಬರುತ್ತಾರೆ.

## ದೈಯಸ್ವಾಸಿ

ಇದು ಎಲ್ಲಾರು ಭೋಜನ ಮಾಡಿದ ಮೇಲೆ ಈ ಕಾರ್ಯಕ್ರಮ ಮಾಡುತ್ತಾರೆ ಮದುಮಕ್ಕಳು ಮತ್ತು ನೀರಮೀನಿದವರು ಸ್ವಾಸಿ ಕಟ್ಟಿ ಮೇಲೆ ಕೂಡಿಸುತ್ತಾರೆ. ಎಲ್ಲ ಬೀಗರು ಆಯೇರ (ಮುಯ್ಯಿ) ಮಾಡುವಾಗ ದಾಸರಾಯನಿಂದ (ಉದಾ ದಾಸರಾಯನು ದಕ್ಷಿಣ ಕೊಟ್ಟು ಮದುಮಗನಿಗೆ ೧೦೧ ಆಯೇರ ಮಾಡಿದರೊ ಎಂದು ಗೋವಿಂದ) ಹೊಗಳುತ್ತಾರೆ. ಇಲ್ಲಿ ಮೊದಲಿಗೆ ಸ್ವಾದರವಾದವನ ಆಯೇರ ಮಾಡಿದ ಮೇಲೆ ಬೇರೆಯವರ ಆಯೇರ ಸ್ವೀಕರ ಮಾಡುತ್ತಾರೆ.

## ಮೆರವಣಿಗೆ

ಮದುಮಕ್ಕಳನ್ನು ಊರಿನ ಬೀದಿಗಳಲ್ಲಿ ಮೆರವಣಿಗೆ ಮಾಡುತ್ತಾರೆ (ಪೂರ್ವಕಾಲದಲ್ಲಿ ಮದುಮಕ್ಕಳನ್ನು ಊರಿನ ಗೌಡ, ಕುಲಕರ್ಣಿ ಮನೆಗೆ ಕರೆದುಕೊಂಡು

ಹೋಗುವ ಸಂಪ್ರದಾಯವಿತ್ತು ಆದರೆ ಅದು ಇಂದು ಕಾಣಸಿಗುತ್ತಿಲ್ಲ). ಮೆರವಣಿಗೆಯಲ್ಲಿ ಅನೇಕ ಜಾನಪದ ಕ್ರೀಡೆಗಳಾದ ಪಟ್ಟಾ ತಿರುವುದು, ಬಯಲಾಟ ಪ್ರಸಂಗ, ಡಾನ್ಸ ಯುವಕರು ಮಾಡುತ್ತಲೇ ಮದುಮಕ್ಕಳನ್ನು ಮನೆಗೆ ಕರೆದುಕೊಂಡು ಬರುತ್ತಾರೆ. ಬಂದ ಮೇಲೆ ಮಂಚ ಹೊತ್ತುಕೊಂಡವರು, ಹಲಿಗೆಯವರು, ಬಾಜಿಯವರು ಮತ್ತು ಡಾನ್ಸ ಮಾಡಿದ ಯುವಕರು ಹಿಡಿ ಕೇಳುತ್ತಾರೆ. ಮನೆಯ ಯಜಮಾನ ಒಂದು ಎಲ್ಲರಿಗೆ ಹಿಡಿ ಕೊಟ್ಟ ಮೇಲೆ ಮದುಮಕ್ಕಳಿಗೆ ನೆದರು ತೆಗೆದು ಮನೆಯೊಳಗೆ ಬರಮಾಡಿಕೊಳ್ಳುತ್ತಾರೆ.

**ಮನೆ ತುಂಬಿಸುವ ಕಾರ್ಯ**

ಮದುಮಗನು ಅತ್ತೆಮಾವನ ಮನೆಗೆ ಮದುವೆಯಾದ ಮೇಲೆ ಬರುವುದಕ್ಕೆ ಮೇಲಿನ ನಾಮಪದದಿಂದ ಕರೆಯುತ್ತಾರೆ. ಇವನ ಜೊತೆಯಲ್ಲಿ ನೀರಮೀನದ ಮಹಿಳೆಯರು ಮತ್ತು ಐದು ಇಲ್ಲವೇ ಒಂಭತ್ತು ಜನರು ಹೋಗುತ್ತಾರೆ. ಅಲ್ಲಿ ಮದುಮಕ್ಕಳಿಗೆ ಸುರುಗಿ ಸುತ್ತಿ ಜಾನಪದ ಹಾಡುಗಳನ್ನು ಹೇಳಿ ಸ್ನಾನ ಮಾಡಿಸುತ್ತಾರೆ. ಅಲ್ಲಿ ಮದುಮಕ್ಕಳಿಗೆ ಇತರ ಬೀಗರು ವಾರದೀಂಗೆ (ಸ್ನಾನ ಮಾಡಿ ಅವರ ಮನೆಯಲ್ಲಿ ಊಟ ಮಾಡಿ ಬರುವದು) ಕರೆದರೆ ಹೋಗುತ್ತಾರೆ. ಎರಡು ದಿನದ ನಂತರದ ಮೇಲೆ ಮದುಮಕ್ಕಳು ಮದುಮಗನ ಮನೆಗೆ ಬರುತ್ತಾರೆ.

**ಹಂದರ ಇಳಿಸುವುದು**

ಮನೆಯ ಮುಂದೆ ಹಾಕಿರುವ ಹಂದರ ತೆಗೆಯುವುದಕ್ಕೆ ಹಂದರ ಇಳಿಸುವುದು ಎನ್ನುತ್ತಾರೆ. ಈ ಕಾರ್ಯ ಮದುವೆಯಾಗಿ ಐದು ಇಲ್ಲವೇ ಒಂಭತ್ತು ದಿನಗಳಲ್ಲಿ ಮಾಡುತ್ತಾರೆ. ಹಂದರ ಇಳಿಸುವಾಗ ಮದುವೆಯಾಗಿರುವ ಮದುಮಕ್ಕಳು ಮತ್ತು ನೀರಮೀನವಿರುವ ಮಹಿಳೆಯರು ಕಡ್ಡಾಯವಾಗಿ ಇರಬೇಕಾಗುತ್ತದೆ. ಇವರೆಲ್ಲರು ಸೇರಿ ಮನೆಯ ಮುಂದೆ ಹಾಕಿರುವ ಹಂದರವನ್ನು ಇಳಿಸುತ್ತಾರೆ.

**ಮನೆದೇವರಿಗೆ ಹೋಗುವ ಕಾರ್ಯ**

ಮದುಮಕ್ಕಳು ಮನೆದೇವರಿಗೆ ಹೋಗುವುದು ಈ ಭಾಗದಲ್ಲಿ ಕಡ್ಡಾಯವಾಗಿದೆ. ಮನೆದೇವರಿಗೆ ನೀರಮೀನದ ಮಹಿಳೆಯರು ಮತ್ತು ಕುಟುಂಬ ಸದಸ್ಯರು ಹೋಗಿ ದರ್ಶನ ಪಡೆದುಕೊಂಡು ಬರುತ್ತಾರೆ. ಯಾದಗಿರಿ ಸುತ್ತಲಿನ ಮಾದಿಗ ಜನಾಂಗದ ಮದುಮಕ್ಕಳು ಕಡ್ಡಾಯವಾಗಿ ಮೈಲಾಪುರದ ಮಲ್ಲಯ್ಯನ ದರ್ಶನ ಮಾಡಿಕೊಂಡು ಬರುತ್ತಾರೆ. ಈ ಎಲ್ಲಾ ಕಾರ್ಯಕ್ರಮಗಳು ಪೂರ್ಣಗೊಂಡ ಮೇಲೆ ಮದುಮಕ್ಕಳು ನವಜೀವನಕ್ಕೆ ಮತ್ತು ನವ ಬದುಕಿಗೆ ಕಾಲು ಇಡುತ್ತಾರೆ.

## ಇತರ ಸಾಂಸ್ಕೃತಿಕ ಕಾರ್ಯಕ್ರಮಗಳು

### ತೊಟ್ಟಿಲು ಕಾರ್ಯಕ್ರಮ

ತೌರಮನಿಯವರು ಮಗಳು ಪ್ರಥಮ ಮಗುವಿಗ ಜನ್ಮ ನೀಡಿದಾಗ ಕಡ್ಡಾಯವಾಗಿ ತೊಟ್ಟಿಲು ಬಟ್ಟ, ಮುರುವು ಕಾಲ್ಗಡಗ (ಇದು ಆರ್ಥಿಕ ಆಧಾರದ ಮೇಲೆ ನಿಂತಿದೆ, ತೊಟ್ಟಿಲು ಮಾತ್ರ ಕಡ್ಡಾಯವಾಗಿ ಕೊಡಲಾಗುತ್ತದೆ) ತರಲಾಗುತ್ತದೆ. ಮಗುವಿನ ತಂದೆಯ ಮನೆಯವರು ಅತ್ಯಂತ ಸಂಭ್ರಮದಿಂದ ಈ ಕಾರ್ಯವನ್ನು ಮಾಡುತ್ತಾರೆ. ತೊಟ್ಟಿಲು ತೆಗದುಕೊಂಡು ಬರುವಾಗ ಯುವತಿಯ ಅಣ್ಣ ಇಲ್ಲವೇ ತಮ್ಮ ಬಂದಿರುತ್ತಾನೆ. ಅವನಿಗೆ ಮರಳಿ ಹೋಗುವ ಸಮಯದಲ್ಲಿ ಕಡ್ಡಾಯವಾಗಿ ಹೊಸ ಬಟ್ಟೆಯನ್ನು ಮಾಡಿ ಕಳಿಸುತ್ತಾರೆ. ಮಗುವಿಗೆ ಐದು ಜನ ಮುತ್ತೈದೆಯರು ತೊಟ್ಟಿಲದಲ್ಲಿ ಹಾಕುತ್ತಲೇ ಐದು ಹೆಸರನ್ನು ಸೂಚಿಸುತ್ತಾರೆ. ಅದರಲ್ಲಿ ಒಂದನ್ನು ಆಯ್ಕೆ ಮಾಡಿಕೊಂಡು ಮನೆಯವರು ಕರೆಯುತ್ತಾರೆ. ಮಗುವಿಗೆ ತೊಟ್ಟಿಲದಲ್ಲಿ ಹಾಕುವಾಗ ಜೋಗುಳದ ಹಾಡುಗಳನ್ನು ಹಾಡುತ್ತಾರೆ. ಜೋಗುಳದ ಹಾಡಿನಲ್ಲಿ ಈ ಭಾಗದ ಶರಣರಾದ ಬಸವ, ಅಲ್ಲಮಪ್ರಭು, ಕಲ್ಬುರ್ಗಿ ಶರಣ ಬಸಪ್ಪ, ಕಡಕೋಳ ಮಡಿವಾಳಪ್ಪ, ಕೂಡಲೂರು ಬಸವಲಿಂಗ, ಅಬ್ಬೆತುಮಕೂರು ವಿಶ್ವರಾಧ್ಯ, ಖಾಜಾ ಬಂದೇ ನವಾಜ್, ಚಟಗೇರಿ ಹಳ್ಳೆರಾಯ ಇತ್ಯಾದಿ ಶರಣರನ್ನು ಜೋಗುಳದ ಹಾಡಿನಲ್ಲಿ ಆಡುತ್ತಾರೆ.

ಉದಾ: ತೂಗಿರೀ ನಮ್ಮ ಕಂದಾನ
ತೂಗಿರೀ ನಮ್ಮ ಕಲ್ಯಾಣ ಬಸವಾನ

### ಜವಳ ತೆಗಸಾದು

ಇದು ಮಗುವಿನ ಜನನವಾದಐದು ತಿಂಗಳು ಇಲ್ಲವೇ ಅವರಿಗೆ ಆರ್ಥಿಕ ಅನುಕೂಲವಾದಾಗ ಈ ಕಾರ್ಯಕ್ರಮ ಮಾಡುತ್ತಾರೆ. ಈ ಕಾರ್ಯಕ್ರಮವನ್ನು ಮನೆಯಲ್ಲಿ ಇಲವೇ ಮನೆದೇವರ ಗುಡಿಯಲ್ಲಿ ಈ ಕಾರ್ಯ ಹಮ್ಮಿಕೊಳ್ಳಲಾಗುತ್ತದೆ. ಇದು ಮಾದಿಗರಲ್ಲಿ ಊರಿಂದ ಊರಿಗೆ ಭಿನ್ನತೆಯನ್ನು ರೂಢಿಸಿಕೊಂಡಿದ್ದಾರೆ. ಮಗುವಿನ ಕೂದಲನ್ನು ಮನೆಯ ಯಜಮಾನ ಚಾಜ, ಪೂಜೆಯ ಮಾಡಿ ಕುರಿಯ ಕೂದಲು ಕತ್ತರಿಸು ಕತ್ತರಿಂದ ಮಗುವಿನ ಜವಳ ತೆಗಿಯುತ್ತಾರೆ.

### ಹಿರೆಮನಿಸ್ಯಾಕಿ (ಮೈನೆರಿಯುವುದು)

ಸಮಾಜದಲ್ಲಿರುವ ಮಹಿಳೆಯರ ಜೀವನದಲ್ಲಿ ಹಲವಾರು ಸ್ತರಗಳಿವೆ. ಅವುಗಳಲ್ಲಿ ಇದು ಒಂದಾಗಿದೆ. ಹಿರೆಮನಿಸ್ಯಾಕಿಯಾದ ಹುಡುಗಿಯನ್ನು ಸುಮಾರು ಒಂಬತ್ತು ದಿನಗಳ ಕಾಲದವರಿಗೆ ರಾತ್ರಿ ಕೂಡಿಸಿ ಜಾನಪದ ಹಾಡಗಳನ್ನು ಆಡುತ್ತಾರೆ. ಕೊನೆಯ ದಿನದಲ್ಲಿ ಮಾತ್ರ ವಿಶೇಷವಾಗಿ ಎಲ್ಲಾ ಬೀಗರು, ಸಮುದಾಯದ ಜನರು ಮತ್ತು ಊರಿನ ಜನರು ಬಂದು ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುತ್ತಾರೆ.

**ಕುಬಸ ಮಾಡದು (ಸೀಮಂತ)**

ಇದು ಮಹಿಳೆಯರ ಜೀವನದಲ್ಲಿ ಸಂತೋಷದ ದಿನಗಳಲ್ಲಿ ಮಾಡುವ ಕಾರ್ಯಕ್ರಮವಾಗಿದೆ. ಇದು ಮೊದಲ ಮಗುವಿಗೆ ಜನ್ಮ ನೀಡಲು ತಯಾರಾದಾಗ ಎಲ್ಲಾ ಕುಟುಂಬ ಸದಸ್ಯರು ಸೇರಿ ತೌರಮನೆಯಲ್ಲಿ ಐದು ತಿಂಗಳಲ್ಲಿ ಮಾಡುತ್ತಾರೆ. ಹಾಗೆಯೆ ತೌರಮನೆಯವರು ಬಂಕೆ ಊಟ ಅಥವಾ ಬಂಕೆ ಬುತ್ತಿವನ್ನು ಕೂಡ ತರುತ್ತಾರೆ. ಎರಡನೆಯ ಮಗುವಿನ ಜನ್ಮದಲ್ಲಿ ಈ ಕಾರ್ಯಕ್ರಮ ಕಾಣುವುದಿಲ್ಲ.

**ಬಾಣಿತನ**

ಈ ಸಂದರ್ಭದಲ್ಲಿ ಕುಟಂಬದಲ್ಲಿ ಸಂತೋಷದ ಸಂಗತಿಯಾಗಿರುತ್ತದೆ. ಮೊದಲ ಬಾಣಿತನ ತೌರಮನಿಯಲ್ಲಿ ಆಗುತ್ತದೆ. ಬಾಣಿತನವಾದ ಮೂರು ದಿನಕ್ಕೆ ಚಟಿಗಿ ಹಣೆಬರ ಬರಿಯುತ್ತಾಳೆಂದು ಮನೆಯಲ್ಲಿ ಚಟಿಗೆ ಪೂಜೆ ಮಾಡುತ್ತಾರೆ. ಈ ಕಾರ್ಯಕ್ಕೆ ಮಗುವಿನ ಮನೆಯವರು ನಿಯಮದ ಪ್ರಕಾರ ಕೆಲವು ದವಸ ಧಾನ್ಯಗಳನ್ನು ತೆಗದುಕೊಂಡು ಬರುತ್ತಾರೆ. ಸುಮಾರು ಹದಿನೈದು ದಿನಗಳವರಿಗೆ ಬಾಣಿತನವಾದ ಮಹಿಳೆ ತಣ್ಣೀರು ಸೇವಿಸಿರುವಿದಿಲ್ಲ, ಈ ಸಂದರ್ಭದಲ್ಲಿ ಮಹಿಳೆಗೆ ಯಾವುದೇ ರೀತಿಯಿಂದ ಅನಾನುಕೂಲವಾಗದಂತೆ ನೋಡಿಕೊಳ್ಳುತ್ತಾರೆ. ಸಂದು (ಬಾಣಿತನವಾದ ಕೆಲವು ದಿನಗಳಿಗೆ ಕರೆಯುತ್ತಾರೆ)ಹೋಗುವರಿಗೆ ಮಹಿಳೆಯ ಪಕ್ಕದಲ್ಲಿ ಮಗುವಿನ ತಾಯಿಯ ಕಳ್ಳು ಬಳ್ಳಿ ಕೊಯ್ದ ಕುಡುಗೋಲನ್ನು ಇಡಲಾಗುತ್ತದೆ.

**ಮರಣ**

ಇದು ಮಾನವ ಜೀವನದಲ್ಲಿ ಕೊನೆಯ ಘಟ್ಟವಾಗಿದೆ. ಜೀವಬಿಟ್ಟು ತಕ್ಷಣವೇ ಬೀಗರಿಗೆ ಸುದ್ದಿ ಮುಟ್ಟಿಸಲು ಪ್ರಯತ್ನಿಸುತ್ತಾರೆ. ಎಲ್ಲಾ ಬೀಗರು ಬಂದ ನಂತರವೆ ಹೆಣಕ್ಕೆ ಸ್ನಾನ ಮಾಡಿಸಿ ಗೂಟಕ್ಕೆ (ಮದುವೆಯಾಗದ ಯುವಕ/ಯುವತಿಗೆ ಗೂಟಕ್ಕೆ ಬಡಿಯವದಿಲ್ಲ) ಬಡಿಯುತ್ತಾರೆ. ಹೆಣವನ್ನು ಹೊಯಿಲು ಒಂದು ಗಳಿಗೆ ಇರುವಾಗ ರೊಕ್ಕ(ಹಣ)ವನ್ನು ಎಗರಿಸುತ್ತಾರೆ. ಕುಟುಂಬದ ಸದಸ್ಯರೆಲ್ಲರು ಸತ್ತಹೆಣಕ್ಕೆ ಆರತಿ ಬೆಳಗಿ ಹೆಣವನ್ನು ತೆಗದುಕೊಂಡು ಹೋಗಲು ಮಾಡಿದ ಮಂಟಪದಲ್ಲಿ ಇಟ್ಟುಕೊಂಡು ಮೆರವಣಿಗೆಯಲ್ಲಿ ಮಸಂಟಿಗಿಗೆ (ಸ್ಮಶಾನ) ಬರುತ್ತಾರೆ. ಹೆಣವನ್ನು ಕುಣಿಯ ಹತ್ತಿರದಲ್ಲಿ ಇಳಿಸಿ ಹೊತ್ತಕೊಂಡು ವ್ಯಕ್ತಿಗಳು ಅದಲು-ಬದಲು ಆಗುತ್ತಾರೆ. ಹೆಣವನ್ನು ಕುಣೆಯಲ್ಲಿಟ್ಟ ಮೇಲೆ ಪೂಜೆ ಮಾಡಿ, ಬಾಯಿಯಲ್ಲಿ ಬಂಗಾರ ಇಟ್ಟು ಮಣ್ಣು ಹಾಕುತ್ತಾರೆ. ಗಂಡ ಸತ್ತಿದ್ದರೆ ಅವನ ಹೆಂಡತಿಯ ಬಳೆ ತಾಳಿಯನ್ನು ಕುಣಿಯ ಹತ್ತಿರವೇ ಬಿಚ್ಚಿಕೊಂಡು ಬರುತ್ತಾರೆ. ಮದುವೆಯಾಗದ ಯುವಕ/ಯುವತಿಯಾಗಿದ್ದರೆ ಗೂಟಕ್ಕೆ ಬಡಿಯುವುದಿಲ್ಲ, ಹಲಿಗೆ ವಾದ್ಯ ಭಾರಿಸುವುದಿಲ್ಲ ಗೋಣಿಚೀಲದಲ್ಲಿ ಹೆಣವನ್ನು ಮಸಂಟಿಗಿಗೆ ತರುತ್ತಾರೆ. ಮನೆಗೆ ಬಂದ ಮೇಲೆ ಸತ್ತ ಕಟುಂಬದ ಸದಸ್ಯರಿಗೆ ಇಸಬಾಯಿ (ಹೆಂಡ/ಮದ್ಯಪಾನ) ತೊಳುಸುತ್ತಾರೆ.

**ಮೂರ್ಕುಳ ಹಾಕದು**

ಸತ್ತ ಮೂರದಿನಕ್ಕೆ ಸತ್ತ ವ್ಯಕ್ತಿ ಜೀವ ಇರುವಾಗ ಏನೇನು ಊಟ ಮಾಡಿರುತ್ತಾನೆ ಅದೆಲ್ಲವನ್ನು ಅವನ ಕುಣಿಯ ಮೇಲೆ ಇಟ್ಟು ಕಾಗೆ ಮುಟ್ಟವರಿಗೆ ನೋಡಿಕೊಳ್ಳುವುದಕ್ಕೆ ಮೂರ್ಕುಳ ಕಾರ್ಯ ಮಾಡವುದು ಎಂದು ಕರೆಯುತ್ತಾರೆ.

**ದಿವಸ ಮಾಡದು (ತಿಥಿ)**

ಇದು ಹೊತ್ತಿಗೆ (ಪಂಚಾಂಗ) ಯಲ್ಲಿ ಹೇಳಿದ ಪ್ರಕಾರವಾಗಿ ಮಾಡುತ್ತಾರೆ. ದಿವಸ ಮಾಡುವ ದಿನದಂದು ಹತ್ತಿರದ ಬಾವಿ, ಕೆರೆ, ನದಿಗೆ ಹೋಗುತ್ತಾರೆ. ಇಲ್ಲಿ ಒಂದು ತೆಪ್ಪವನ್ನು ಕಟ್ಟಿ, ಅದರಲ್ಲಿ ದೀಪ ಹಚ್ಚಿ ನೈವೇದ್ಯ ಇಟ್ಟು ನೀರಿನಲ್ಲಿ ಬಿಡುತ್ತಾರೆ. ಹಾಗೆಯೆ ನೀರಿನಲ್ಲಿ ಹೂಗಳು ಸತ್ತ ವ್ಯಕ್ತಿಯ ಪ್ರತಿರೂಪವೆಂದು ಭಾವಿಸಿ ನೀರಿನಲ್ಲಿ ಹೂಗಳನ್ನು ಹಾಕಿ ಬಾ ಎಂದು ಕರೆಯುತ್ತಾರೆ. ಯಾರ ಹತ್ತಿರ ಹೂಗಳು ಹೋಗುತ್ತವೆ, ಅವರಿಗೆ ಸತ್ತ ವ್ಯಕ್ತಿ ಜೀವ (ಪ್ರೀತಿ) ಇಟ್ಟರೆಂದು ಭಾವಿಸುತ್ತಾರೆ. ಮನೆಗೆ ಬರುವ ಕಾಲಕ್ಕೆ ಇಬ್ಬರು ಬಡಿಗೆಯನ್ನು ಹೆಗಲ ಮೇಲೆ ಹೊತ್ತುಕೊಂಡಿರುತ್ತಾರೆ. ಅದಕ್ಕೆ ಹೋಳಿಗೆಯನ್ನು ಸಿಕ್ಕಿಸಿಕೊಂಡಿರುತ್ತಾರೆ. ಒಬ್ಬರು ಹೊಸ ಕೊಡಹೊತ್ತಿರುತ್ತಾನೆ. ಇವರೆಲ್ಲರು ಮನೆಯೊಳಗೆ ಹೋಗುವಾಗ ಹಿಂಬ್ದುಕ್ಕಿ ಹೋಗುತ್ತಾರೆ. ಎಲ್ಲಾರು ಪೂಜೆ ಮಾಡಿ ಸತ್ತ ವ್ಯಕ್ತಿಯನ್ನು ಮನದಲ್ಲಿ ಸ್ಮರಣೆ ಮಾಡುತ್ತಾರೆ. ಪ್ರಮುಖವಾಗಿ ಹೊತ್ತಿಗೆಯಲ್ಲಿ ಮನೆಯ ಬಿಡಬೇಕು ಎಂದು ಹೇಳಿದಾಗ ಸುಮಾರು ಮೂರು ತಿಂಗಳವರೆಗೆ ಮನೆ ಬಿಡುತ್ತಾರೆ. ಸತ್ತ ಮನೆಯವರು ಮತ್ತು ಅಣ್ಣ ತಮ್ಮರು ಎಲ್ಲಾರು ಮನೆಯಲ್ಲಿ ಹೆಂಬಲಕೊಡ ತೆಗದು, ಹೊಸ ಹೆಂಬಲಕೊಡ ಇಡುತ್ತಾರೆ.

**ಹಬ್ಬಗಳ ಆಚರಣೆಗಳು**

ಮಾದಿಗ ಜನಾಂಗವು ಗ್ರಾಮೀಣ ಪ್ರದೇಶದಲ್ಲಿ ಆಚರಿಸುವ ಎಲ್ಲಾ ಹಬ್ಬಗಳನ್ನು ಆಚರಣೆ ಮಾಡುತ್ತಾರೆ. ಇದು ಊರಿಂದ ಊರಿಗೆ ಭಿನ್ನತೆಯನ್ನು ರೂಢಿಸಿಕೊಂಡಿದೆ. ಹಾಗೆಯೇ ಆರ್ಥಿಕ ಆಧಾರದ ಮೇಲೆ ಸಿಹಿ ಆಹಾರ ಪದರ್ಥಾಗಳನ್ನು ತಯಾರಿಸಿಕೊಂಡು ಆನಂದ ಪಟ್ಟುಕೊಳ್ಳುತ್ತಾರೆ. ಯುಗಾದಿ, ಎಳ್ಳಾಮಾಸಿ, ದೀಪವಾಳಿ, ಸಂಕ್ರಾಂತಿ ಮತ್ತುಮೊಹರಂ ಹಬ್ಬಗಳನ್ನು ಆಚರಣೆ ಮಾಡುತ್ತಾರೆ. ಕೆಲವೊಮ್ಮೆ ದೇವರಿಗೆ ಬಲಿಯನ್ನು (ಬ್ಯಾಟಿ, ಕೋಣ) ಕೂಡ ನೀಡುತ್ತಾರೆ. ಊರಿನಲ್ಲಿ ನಡೆಯುವ ಪ್ರತಿಯೊಂದು ಹಬ್ಬಗಳನ್ನು ಆಚರಣೆಯನ್ನು ಮಾದಿಗರು ಆಚರಿಸುತ್ತಾರೆ.

**ಮಾದಿಗ ಸಮುದಾಯವು ಸಮಾಜಕ್ಕೆ ನೀಡುವ ಕೊಡುಗೆ**

ಈ ಸಮುದಾಯವು ಪ್ರಾಚೀನ ಕಾಲದಿಂದಲ್ಲೂ ಸಮಾಜಕ್ಕೆ ತನ್ನದೆಯಾದ ಶೈಲಿಯಲ್ಲಿ ಸಾಂಸ್ಕೃತಿಕ ಕೊಡುಗೆಗಳನ್ನು ನೀಡುತ್ತಲೇ ಬಂದಿದೆ. ಅವುಗಳಲ್ಲಿ ಮುಖ್ಯವಾಗಿ ಹಲಿಗೆ ವಾದ್ಯವನ್ನು ನುಡಿಸುವುದು, ಶವಸಂಸ್ಕಾರದಲ್ಲಿ ಸಹಾಯ ಮಾಡುವುದು, ರೈತರಿಗೆ ಉಪಯುಕ್ತವಾಗುವ ವಸ್ತುಗಳನ್ನು ಮಾಡುವುದು, ಊರಿನ ಪ್ರತಿಯೊಂದು

ಹಬ್ಬದಲ್ಲಿ ಸಹಾಯಮನೋಭಾವದಿಂದ ಸ್ವಚ್ಛತೆ ಕಾರ್ಯ ಮಾಡುತ್ತಲೇ ಸಮಾಜಕ್ಕೆ ನೆರವಾಗುತ್ತಾರೆ.

**ಹಲಿಗೆ ವಾದ್ಯ ನುಡಿಸುವುದು**

ಇದು ಮಾದಿಗ ಸಮಾಜವು ಸಮುದಾಯಕ್ಕೆ ನೀಡಿರುವ ಅದ್ಭುತವಾದ ಕೊಡುಗೆಯಾಗಿದೆ. ಈ ವಾದ್ಯವನ್ನು ಮಾನವ ಜೀವಿಯ ಜನನದಿಂದ ಮರಣದವರೆಗೆ ಇದರ ಬಳಕೆಯನ್ನು ಕಾಣುತ್ತವೆ. ಊರಿನ ಪ್ರತಿಯೊಂದು ಸಮಸ್ಯೆಯನ್ನು ಪರಿಹರಿಸಿಕೊಳ್ಳಲು ಡಂಗೂರ ಸಾರಲು ಬಳಸುತ್ತಾರೆ. ಮದುವೆ, ಜಾತ್ರೆ, ಹಬ್ಬಗಳಲ್ಲಿ ಹಲವು ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯಲೇಬೇಕಾದರೆ ಅಲ್ಲಿ ಹಲಿಗೆ ವಾದ್ಯ ತನ್ನ ಪಾತ್ರವನ್ನು ನಿರ್ವಹಿಸುತ್ತದೆ. ಸಂತೋಷದ ಎಲ್ಲಾ ಸಂಗತಿಯಲ್ಲಿ ಮಾತ್ರ ಇತರ ವಾದ್ಯಗಳು ಪಾಲನ್ನು ಹಂಚಿಕೊಂಡರೆ, ಹಲಿಗೆ ವಾದ್ಯ ಮಾತ್ರ ದುಃಖದ ಸಂದರ್ಭದಲ್ಲಿ ಪಾಲನ್ನು ಹಂಚಿಕೊಂಡು ಬಳಕೆಯಾಗುತ್ತದೆ. ಈ ವಾದ್ಯಕ್ಕೆ ಯಾವುದೇ ಮಡಿ ಮೈಲಿಗೆ ಇಲ್ಲ. ಒಬ್ಬ ಸಾಮಾನ್ಯನಿಂದ ಹಿಡಿದು ಊರಿನ ಶ್ರೀಮಂತನವರಿಗೆ ಯಾವುದೇ ವ್ಯತ್ಯಾಸ ಮಾಡದೆ ಬಳಕೆಯಾಗುವ ಏಕೈಕ ಜಾನಪದ ವಾಧ್ಯವಾಗಿದೆ. ಈ ಭಾಗದಲ್ಲಿ ಬಿತ್ತುವ ಸಂದರ್ಭದಲ್ಲಿ ಹೊಲಗಳಲ್ಲಿ ಹೋಗಿ ಹಲಿಗೆಯನ್ನು ಬಾರಿಸುತ್ತಾರೆ.

ಯಾದಗಿರಿ ತಾಲ್ಲೂಕಿನಲ್ಲಿ ಮೊಹರಂ ಹಬ್ಬವನ್ನು ವಿಶೇಷವಾಗಿ ಆಚರಣೆ ಮಾಡುತ್ತಾರೆ. ಹಲಿಗೆ ವಾದ್ಯ ಮಾತ್ರ ತನ್ನ ಗತ್ತು ಗಮ್ಮಾತದಿಂದ ಆಲಾಯಿ ಕುಣಿಯಲ್ಲಿ ಕುಣಿತಕ್ಕೆ ಬಳಕೆಯಾಗುತ್ತದೆ. ಹಲಿಗೆ ಮೊಹರಂ ಹಬ್ಬದಲ್ಲಿ ಪ್ರಾಮುಖ್ಯತೆ ಗ್ರಹಿಸಿ 'ನೂರು ಜನಕ್ಕೆ ಒಬ್ಬ ಮಾದಿಗ ಮುಖ್ಯನಂತೆ ನೂರು ಮನೆಗೆ ಒಬ್ಬ ಗೌಡ ಮುಖ್ಯನಂತೆ' ಎಂಬ ಗಾದೆ ಜನ್ಮ ತಾಳಿದೆ. ಅಂದರೆ ಅಲಾಯಿ ಕುಣಿವಾಗ ಒಬ್ಬ ಹಲಿಗೆ ಭಾರಿಸುವ ನೈಪುಣ್ಯದಿಂದ ಮಾದಿಗ ವ್ಯಕ್ತಿ ಎಲ್ಲಾರನ್ನು ತಲ್ಲೀನರಾಗಿ ಕುಣಿಯುವಂತೆ ಪ್ರೇರಿಪಿಸಿ ಕ್ಷಣ ಹೊತ್ತು ಹಲಿಗೆ ಭಾರಿಸದೆ ಹೋದರೆ ಕುಣಿಯುವರು ಸ್ತಬ್ದವಾಗಿ ನಿಂತು ಬಿಡುತ್ತಾರೆ. ಇದನ್ನು ಮನಗಂಡು ಈ ಗಾದೆ ಯಾದಗಿರಿ ಪರಿಸರದಲ್ಲಿ ಚಾಲ್ತಿಯಲ್ಲಿದೆ.

**ಮದುವೆ ಸಂದರ್ಭ**

ಯಾವುದೇ ಜಾತಿಯ ಸಮುದಾಯದವರು ಮದುವೆಯಲ್ಲಿ ಮಾದಿಗರು ಭಾಗವಹಿಸುತ್ತಾರೆ. ಮದುವೆ ಕಾರ್ಯಗಳು ರಾತ್ರಿಯಲ್ಲಿ ಜರುಗುವುದರಿಂದ ಬೆಳುಕಿಗಾಗಿ ಬಿಜಲಿಯನ್ನು ಹೊತ್ತುಕೊಂಡು ಸಹಾಯ ಮಾಡುತ್ತಾರೆ. ಯಲ್ಲಮ್ಮ ಶಕೆ ಮಾದಿಗರು ಇಲ್ಲದೆ ಮಾಡುವುದಿಲ್ಲವಾದ್ದರಿಂದ ಊರಿನ ಮದುವೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ.

**ಮರಣ ಸಮಯದಾಗ**

ಯಾವುದೇ ಜಾತಿಯ ವ್ಯಕ್ತಿ ಮರಣಹೊಂದಿದಾಗ ಮಾದಿಗರು ಸತ್ತ ಸುದ್ದಿಯನ್ನು ಅವರ ಬೀಗರಿಗೆ ತಲಿಪಿಸುವ ಕಾರ್ಯವನ್ನು ಮಾಡುತ್ತಾರೆ. ಈ ಸಮಯದಾಗ ಮಾದಿಗರ ಮನೆಯಲ್ಲಿ ಮುಖ್ಯವಾದ ಕಾರ್ಯವಿದ್ದರೂ ಕೂಡ ಬಿಟ್ಟು ಸತ್ತ ಸುದ್ದಿಯನ್ನು

ಸತ್ತವರ ಬೀಗರಿಗೆ ತಿಳಿಸುತ್ತಾರೆ. ಇದು ಯಾದಗಿರಿ ತಾಲ್ಲೂಕಿನ ಪ್ರತಿಯೊಂದು ಊರಿನಲ್ಲಿ ಮಾದಿಗ ಜನಾಂಗದವರು ಮಾಡುತ್ತಾರೆ. ಅಂದರೆ ಪ್ರತಿಯೊಬ್ಬ ವ್ಯಕ್ತಿಯ ಸುಖದ ಸಂಗತಿಯನ್ನು ಅವನ ಸಂಬಂಧಿಕರಿಗೆ ದಾಯದಿಗಳ ಮೂಲಕ ತಿಳಿಸುತ್ತಾರೆ. ಆದರೆ ವ್ಯಕ್ತಿಯ ದುಃಖದ ಸಂಗತಿಯನ್ನು ಅವನ ದಾಯದಿಗಳು ಅವನ ಸಂಬಂಧಿಕರಿಗೆ ತಿಳಿಸಲು ಹಿಂಜರಿಕೆಯುಂಟಾದಾಗ ಮಾದಿಗರು ಸತ್ತ ಸುದ್ದಿಯನ್ನು ಬೀಗರಿಗೆ ತಿಳಿಸುತ್ತಾರೆ.

ಇನ್ನೊಂದು ಪ್ರಮುಖವಾದ ಅಂಶ ಈ ಭಾಗದಲ್ಲಿ ಹೊಲೆಯ ಸಮುದಾಯದ ಜನರು ಯಾವುದೇ ಜಾತಿಯ ವ್ಯಕ್ತಿ ಸತ್ತಾಗ ಕುಣಿಯನ್ನು ತೊಡುವ ಕಾರ್ಯ ಮಾಡುತ್ತಾರೆ. ಈ ಕಾರ್ಯವನ್ನು ಹೊಲೆಯ ಸಮುದಾಯದ ಜನರು ಮಾಡುತ್ತಾರೆ. ಆಧುನಿಕ ಶಿಕ್ಷಣದಿಂದ ಈ ಎರಡು ಸಮುದಾಯದ ಯುವಕರು ಮಾಡಲು ನಿರಾಕರಿಸುತ್ತಿರುವ ಹಿನ್ನೆಲೆಯಲ್ಲಿ ಹಲವಾರು ರೀತಿಯಿಂದ ಕಲಹಗಳು ಸಂಭವಿಸುತ್ತಿವೆ.

**ಊರು ದೇವರು**

ಇದನ್ನು ಗ್ರಾಮದೇವತೆ ಎಂದು ಕರೆಯುತ್ತಾರೆ. ಈ ಹಬ್ಬದಲ್ಲಿ ಮಾದಿಗರು ಇಲ್ಲದೆ ನಡೆಯುವುದಿಲ್ಲ. ಇದು ಊರಿಂದ ಊರಿಗೆ ಭಿನ್ನವಾಗಿದೆ. ಊರು ದೇವರ ಹಬ್ಬ ಮಾಡುವುದು ಇನ್ನೂ ಹದಿನೈದು ದಿನ ಇರುವಾಗ ಊರಾಡುತ್ತಾರೆ. ಊರು ದೇವರು ಮಾಡುವಾಗ ಕೋಣ ಕಡಿಯುತ್ತಾರೆ. ಕೋಣವನ್ನು ಹಿಡಿದುಕೊಂಡು ಬರುವುದೊಂದು ದೊಡ್ಡ ಸಾಹಸ, ಕೋಣವನ್ನು ಅಲ್ಲಿಂದ ದೇವರ ಭಂಡಾರ ಹಚ್ಚಿ ಹಿಡಿದುಕೊಂಡು ಬರುವಾಗ ಹರಸಹಾಸ ಮಾಡುವುದನ್ನು ನೋಡುವುದಕ್ಕೆ ಕಣ್ಣಿಗೆ ರೊಮಾಂಚನವಾಗಿ ಕಾಣುತ್ತದೆ.

ಕೋಣವನ್ನು ಕಡಿಯುವ ಮುನ್ನ ದಿನವೇ ಕೋಣಕ್ಕೆ ಮೈತೊಳಿದು ಗ್ರಾಮದೇವತೆ ಗುಡಿಯಲ್ಲಿ ಇಲ್ಲವೇ ಮಾದಿಗರ ಮನೆಯಲ್ಲಿ ಕಟ್ಟುತ್ತಾರೆ. ಅದನ್ನು ಹಲಿಗೆ, ಡೊಳ್ಳು, ಬಾಜಂತ್ರಿಯೊಂದಿಗೆ ಊರಿನ ಜನರು ಮಾದಿಗರ ಮನೆಗೆ ಬಂದು ಆ ಕೋಣವನ್ನು ಮಾದಿಗರು ಹಿಡುದುಕೊಂಡು, ಕುಂಭ ಹೊತ್ತುಕೊಂಡು ಗ್ರಾಮದೇವತೆ ಗುಡಿಗೆ ಬರುತ್ತಾರೆ. 'ಸೊಕ್ಕಿನ ಮಾದಿಗನೆ ಜೋಡು ಮೀಣಿ ಹಚ್ಚಿ ಕೋಣವನ್ನು ಹಿಡದುಕೊಂಡು ಬಾ' ಎಂಬ ಜಾನಪದ ಹಾಡನ್ನು ಆಡುವಾಗ ಮಾದಿಗರನ್ನು ಕುರಿತು ಆಡುತ್ತಾರೆ. ಕೆಲವೊಂದು ಊರುಗಳಲ್ಲಿ ಮಾದಿಗರ ಕೋಣವನ್ನು ಕಡಿದರೆ, ಇನ್ನೂ ಕೆಲವೊಂದು ಊರುಗಳಲ್ಲಿ ಬೇರೆ ಸಮುದಾಯದವರು ಕಡಿಯುತ್ತಾರೆ. ಮಾದಿಗರು ಅದರ ಆಹಾರವನ್ನು ಸಿದ್ದಪಡಿಸಿ ಊರಿನ ಸುತ್ತ ಸರಗ ಹೊಡಿಯುವ ಪುಟ್ಟಿಯಲ್ಲಿ ಮಿಶ್ರ ಮಾಡಿ ಸರಗ ಹೊಡಿಯುತ್ತಾರೆ. ಮಿಶ್ರಮಾಡಿಕೊಂಡು ಊರಿನ ಸುತ್ತ ಸರಗ ಹೊಡಿಯಲು ಬಳಸುತ್ತಾರೆ. ಸರಗ ಹೊಡದ ಮೇಲೆ ಆಹಾರವನ್ನು ಮಾದಿಗ ಸಮುದಾಯದವರು ಸೇವಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಆಹಾರವನ್ನು ತಿನ್ನಲು ಮಾದಿಗರು ಹಿಂಜರಿಯುತ್ತಿದ್ದಾರೆ.

## ದರ್ಗಾ ಜಾತ್ರೆ

ಯಾದಗಿರಿಯಲ್ಲಿ ಸೂಫಿ ಸಂತರ ಹೆಸರಿನ ದರ್ಗಾಗಳಿವೆ. ಸೂಫಿ ಸಂತರ ಸ್ಮರಣೆಗಾಗಿ ಪ್ರತಿ ವರ್ಷ ಜಾತ್ರೆ ಮಾಡುತ್ತಾರೆ. ಸೂಫಿ ಸಂತರ ಜಾತ್ರೆ ಮುನ್ನ ದಿನವೇ ದರ್ಗಾದ ಸುತ್ತ ಮುತ್ತ ಸ್ವಚ್ಛ ಮಾಡುತ್ತಾರೆ. ಜಾತ್ರೆ ಮುನ್ನ ದಿನ ರಾತ್ರಿ ಗಂಧ ಹೋಗುವಾಗ ಬೆಳಕಿಗಾಗಿ ಮಾದಿಗರು ಬಿಜಲಿಯನ್ನು ಹೊತ್ತುಕೊಂಡು ಜನರ ಮತ್ತು ದೇವರ ಹೊತ್ತುಕೊಂಡ ಮೌಲ್ವಿಗೆ ದಾರಿ ಕಾಣಲು ಸಹಾಯಕವಾಗುತ್ತಾರೆ. ರಂಜಾನ ಮತ್ತು ಬಕ್ರೀದ ಹಬ್ಬಗಳಲ್ಲಿ ಊರಿನಲ್ಲಿ ಮಸೀದಿ ಇರುವುದಿಲ್ಲವಾದರಿಂದ ಪೂರ್ವದಿನವೇ ಮುಸುಲ್ಮಾನರು ತೋರಿಸಿದ ಜಾಗದಲ್ಲಿ ನಮಾಜ ಮಾಡಲು ತಾತ್ಕಾಲಿಕ ಜಾಗ ನಿರ್ಮಾಣ ಮಾಡುತ್ತಾರೆ. ಮರ್ದಿನ ನಮಾಜ ಮಾಡಲು ಹಲಿಗೆ ಮೂಲಕ ಮೆರವಣಿಗೆಯಿಂದ ಕರೆದುಕೊಂಡು ಹೋಗುತ್ತಾರೆ. ನಮಾಜ ಮಾಡಿದ ಮೇಲೆ ಅವರನ್ನು ಪುನಃ ಅವರನ್ನು ಮೆರವಣಿಗೆ ಮುಖಾಂತರ ಕರೆದುಕೊಂಡು ಬರುತ್ತಾರೆ. ಮುಸಲ್ಮಾನರ ಮುಂಜಿ (ಸುನಿತ) ಮದುವೆ ಕಾರ್ಯದಲ್ಲಿ ಇತರ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಮಾದಿಗರು ಸಹಾಯಮಾಡುತ್ತಾರೆ.

## ಕೃಷಿಕಾರ್ಯಕ್ಕೆ ನೆರವಾಗುವುದು

ಮಾದಿಗ ಸಮುದಾಯದ ಗಂಡಾಳು ಮತ್ತು ಹೆಣ್ಣಾಳು ಕೃಷಿ ಕಾರ್ಯಗಳಾದ ಬಿತ್ತುವ, ಸೆದೆ, ನಾಟಿ, ರಾಶಿ, ಕಾರ್ಯದಲ್ಲಿ ರೈತರಿಗೆ ಕೂಲಿ ರೂಪದಲ್ಲಿ ನೆರವಾಗುತ್ತಾರೆ. ಇಲ್ಲಿ ಮೇಲ್ವರ್ಗದವರ ಹೊಲದಲ್ಲಿ ಕೆಲಸ ಮಾಡಲು ಹೋದಾಗ ಕೆಲವೊಂದು ಸಂಗತಿಗಳು ಕಾಣುತ್ತವೆ. ಇವರು ಕೆಲಸ ನಿಷ್ಠೆಯಿಂದ ತಮ್ಮ ಕೈಯಲ್ಲಿ ಆದಷ್ಟು ಮಾಡಿದರು ರೈತರು ಇವರನ್ನು ಮಾನವರಾಗಿ ಕಾಣುವುದು ಇಲ್ಲ. ಇವರಿಗೆ ಮೇಲ್ವರ್ಗದವರ ಹೊಲದಲ್ಲಿರುವ ಬಾವಿಗಳ ನೀರು ತೆಗದುಕೊಂಡು ಕುಡಿಯಲು ಬಿಡುವುದಿಲ್ಲ, ಮಾಲಿಕರೇ ನೀರು ತಂದು ಕೊಡುತ್ತಾರೆ. ಇದು ಯಾವುದೆ ಕಾನೂನಿನ ಭಯವಿಲ್ಲದೆ ಯಾದಗಿರಿ ಸುತ್ತಮುತ್ತ ದಿನನಿತ್ಯ ಮಾದಿಗರ ಜೊತೆ ಚೆಲ್ಲಾಟವಾಡುತ್ತಿರುವುದು ಕಾಣುತ್ತದೆ. ರೈತರಿಗೆ ಬೇಕಾಗುವ ಬಾಣಿ, ಬಾರ್ಕೊಲ, ಜತ್ತಿಗೆ ಮತ್ತು ಇತರ ವಸ್ತುಗಳನ್ನು ಚರ್ಮದಿಂದ ಸಿದ್ಧಪಡಸಿಕೊಡುತ್ತಾರೆ. ಇದಕ್ಕೆ ಮಾದುಗತನ ಎಂದು ಕರೆಯುತ್ತಾರೆ. ಇವರಿಗೆ ವರ್ಷಕ್ಕೆ ಇಂತಿಷ್ಟು ದವಸ ಧಾನ್ಯಗಳನ್ನು ನೀಡುತ್ತಾರೆ.

## ಹಬ್ಬಗಳ ಕಾರ್ಯ

ಯಾವುದೇ ಹಬ್ಬಗಳು ಮಾಡುವ ಪೂರ್ವದಲ್ಲಿ ಊರಿನ ಜನರಿಗೆ ಡಂಗೂರ ಸಾರಿ ಮಾದಿಗರು ತಿಳಿಸುತ್ತಾರೆ. ಹಬ್ಬದ ದಿನಗಳಲ್ಲಿ ದೇವರ ಗುಡಿಯ ಅಂಗಳವನ್ನು ಸ್ವಚ್ಛತೆಯನ್ನು ಮಾಡುತ್ತಾರೆ. ಎಲ್ಲಾರ ಮನೆಯ ಜ್ಯೋತಿಯನ್ನು ತೆಗದುಕೊಂಡು ಬರುವಾಗ ಹಲಿಗೆ ಬಾರಿಸುತ್ತಾರೆ. ಮಾದಿಗರ ದೇವರ ಗುಡಿಯಲ್ಲಿರುವ ಪ್ರತಿಯೊಂದು ಕಾರ್ಯದಲ್ಲಿ ಸಹಾಯ ಮಾಡಿದರು ಕೂಡ ಅವರಿಗೆ ಗುಡಿಯಲ್ಲಿ ಪ್ರವೇಶವಿಲ್ಲ ಮತ್ತು

ಇವರು ಊರಿನ ಎಲ್ಲಾ ಸಮುದಾಯದವರು ಪೂಜೆ ಮಾಡಿದ ಮೇಲೆ ಮಾದಿಗರು ಹರಕೆ ತೀರಿಸಬೇಕೆಂಬ ಅಲಿಖಿತ ನಿಯಮವಿದೆ.

**ಜಾನಪದ ಕ್ರೀಡೆಗಳು**

ಯಾದಗಿರಿ ಸುತ್ತಮುತ್ತ ಗ್ರಾಮಗಳಲ್ಲಿ ಹಲವಾರು ಜಾತ್ರೆಗಳಲ್ಲಿ ಯುವಕರಿಗೆ ಸಾಹಸ ಪ್ರದರ್ಶನ ಮಾಡಲು ಕೈಕುಸ್ತಿ, ಉಸುಕಿನ ಚೀಲ ಎತ್ತವುದು, ಗುಂಡು ಎತ್ತುವುದು ಇತ್ಯಾದಿ ಕಾರ್ಯಕ್ರಮದಲ್ಲಿ ಮಾದಿಗ ಜನಾಂಗದ ಯುವಕರು ಪಾಲುಗೊಳ್ಳುತ್ತಾರೆ.ಆ ಸಂದರ್ಭದಲ್ಲಿ ಇವರು ಮಾದಿಗ ಸಮುದಾಯವನ್ನು ಪ್ರತಿನಿಧಿಸುವುದಿಲ್ಲ, ಊರನ್ನು ಪ್ರತಿನಿಧಿಸುತ್ತಾರೆಂದು ಜನರು ಭಾವಿಸಿಕೊಳ್ಳುತ್ತಾರೆ.

**ಕಪ್ಪೆಕಾರಂಗ**

ಮುಂಗಾರು ಮಳೆ ಬಹಳ ದಿನದವರಿಗೆ ಬರದ ಸಂದರ್ಭದಲ್ಲಿ ಮಾದಿಗ ಸಮುದಾಯದ ಸಣ್ಣ ಮಕ್ಕಳು ಕೆರೆಗೆ ಹೋಗಿ ಎರಡು ಕಪ್ಪೆಯನ್ನು ತೆಗದುಕೊಂಡು ಬರುತ್ತಾರೆ. ಆ ಕಪ್ಪೆಗಳನ್ನು ಒಂದು ಕೋಲಿನ ಎರಡು ತುದಿಗೆ ಕಟ್ಟುತ್ತಾರೆ. ಅದನ್ನು ಹೊತ್ತುಕೊಳ್ಳುವ ಮಕ್ಕಳು ನಗ್ನವಾಗಿ ಊರಿನ ಎಲ್ಲಾ ಸಮುದಾಯದವರು ಮನೆಯ ಬಾಗಿಲಿಗೆ ಹೋಗಿ ಕಾಲಿಗೆ ನೀರನ್ನು ನೀಡಿಸಿಕೊಂಡು ಬರುತ್ತಾರೆ. ಆ ಸಣ್ಣಮಕ್ಕಳಿಗೆ ಎಲ್ಲಾ ಸಮುದಾಯದವರು ಯಾವುದೇ ಭೇದವಿಲ್ಲದೆ ಕಾಲುಗೆ ಬಿಳುವುದು ಕಾಣುತ್ತವೆ. ಸಣ್ಣ ಮಕ್ಕಳನ್ನು ಅತ್ಯಂತ ಗೌರವ ಭಾವದಿಂದ ಕಾಣುತ್ತಾರೆ. ಇದನ್ನು ಊರಿನ ಎಲ್ಲಾ ಜನರು ಒಪ್ಪಿಮಾಡಿಸುತ್ತಾರೆ. ಈ ಕಾರ್ಯಕ್ರಮ ಮಾಡಿದ ಮೇಲೆ ಎರಡು ಮೂರು ದಿನದಲ್ಲಿ ಮಳೆ ಬರುವ ನಂಬಿಕೆಯ ಪರಿಕಲ್ಪನೆ ಇದೆ. ಮಾದಿಗ ಜನಾಂಗದ ಮುತ್ತೈದೆಯರಿಗೆ ಕೆಲವು ಊರುಗಳಲ್ಲಿ ಊರಿನ ಹಣಮಂದೇವರ ಗುಡಿಯ ಕಟ್ಟಿ ಮೇಲೆ ನೀರನ್ನು ಹಾಕಲು ಊರಿನ ಮುಖಂಡರು ಹೇಳುತ್ತಾರೆ. ಆ ಸಂದರ್ಭದಲ್ಲಿ ಮಳೆ ಬರುತ್ತದೆಂಬ ನಂಬಿಕೆ ಸಹ ಇದೆ.

**ಜಾನಪದ ವೈದ್ಯರು**

ಕೆಲವೊಂದು ಊರುಗಳಲ್ಲಿ ಮಾದಿಗ ಸಮುದಾಯದ ಜನರು ಜನಪದ ವೈದ್ಯ ವೃತ್ತಿಯನ್ನು ಮಾಡುತ್ತಾರೆ. ಇವರು ದನಕರಗಳ ಕಾಲು ಮುರಿದಾಗ, ರೋಗ ಬಂದಾಗ, ಜನರಿಗೆ ಕೈಕಾಲು ಮುರಿದಾಗ ಹಲವು ಗಿಡಮೂಲಿಕೆ ಔಷಧವನ್ನು ನೀಡಿ ರೋಗವನ್ನು ಸರಿಪಡಿಸುತ್ತಾರೆ.

**ಯಲ್ಲಮ್ಮ ದೇವರು ಮಾಡುವುದು**

ಯಾದಗಿರಿ ಪರಿಸರದಲ್ಲಿ ಯಾವುದೇ ಸಮುದಾಯದವರು ಯಲ್ಲಮ್ಮ ದೇವರು ಮಾಡುವಾಗ ಮಾದಿಗರು ಭಾಗವಹಿಸುತ್ತಾರೆ. ದೇವರ ಮಾಡುವ ವ್ಯಕ್ತಿಗೆ 'ಉಟ್ಟಿಗೆ' ತೊಡಿಸುತ್ತಾರೆ ಮತ್ತು ಜೋಗ ಹಾಕುತ್ತಾರೆ. ಅಲ್ಲಿ ಓತುಬಲಿ ನೀಡುವುದು ಇದ್ದರೆ.

ಓತು ಜೋಗು ಹಾಕಿ ಮಲಗಿಸುತ್ತಾರೆ. ಮಾದಿಗರು ಮಾತಂಗಿ ಮಕ್ಕಳಾಗಿ ಈ ಕಾರ್ಯದಲ್ಲಿ ಪಾಲ್ಗೊಳ್ಳುತ್ತಾರೆ.

ಶೈಕ್ಷಣಿಕ ಸಾಧನೆಗಳು ಯಾದಗಿರಿ ಪರಿಸರದ ಗ್ರಾಮಗಳಲ್ಲಿ ಮಾದಿಗ ಸಮುದಾಯದ ಯುವಕ ಮತ್ತು ಯುವತಿಯರು ಅಭ್ಯಾಸ ಮಾಡಿ ಸರ್ಕಾರಿ ನೌಕರಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಕಿಲಾನಕೇರಿ ಗ್ರಾಮದಲ್ಲಿ ಜಿಲ್ಲಾ ಮುಖ್ಯನ್ಯಾಯಮೂರ್ತಿಗಳಾಗಿ, ಕೌಳೂರು ಗ್ರಾಮದಲ್ಲಿ ಮುಖ್ಯ ಕಾರ್ಯನಿರ್ವಹಕರಾಗಿ, ಮುದ್ನಾಳ ಗ್ರಾಮದಲ್ಲಿ ತಸಿಲ್ದಾರರಾಗಿ, ಇತರ ಗ್ರಾಮಗಳಲ್ಲಿ ಶಿಕ್ಷಕರಾಗಿ, ಸೈನಿಕರಾಗಿ, ಪೋಲಿಸರಾಗಿ, ಇತ್ಯಾದಿ ವೃತ್ತಿಯಲ್ಲಿ ಮಾದಿಗರು ಜನರು ಕಾರ್ಯವನ್ನು ಮಾಡುತ್ತಿದ್ದಾರೆ.

**ಚಳುವಳಿಗಳು**

ಮಾದಿಗರ ತಮ್ಮ ಹಕ್ಕಿಗಾಗಿ ಹೋರಾಟಗಳು ಚಳುವಳಿಗಳು ಡಿ.ಎಸ್.ಎಸ್ ಮತ್ತು ಮಾದಿಗರ ಮೀಸಲಾತಿ ಹೋರಾಟ ಸಮಿತಿಗಳು ಮಾಡಿವೆ. ಕೆಲವು ಸಂದರ್ಭದಲ್ಲಿ ಹೋರಾಟಕ್ಕೆ ಜಯ ಲಭಿಸಿದರೆ, ಇನ್ನೂ ಉಳಿದ ಸಂದರ್ಭದಲ್ಲಿ ಹೋರಾಟಕ್ಕೆ ಜಯ ದೊರತಿಲ್ಲವೆಂದು ಕಾಣುತ್ತವೆ.

**ಉಪಸಂಹಾರ**

ಕರ್ನಾಟಕದ ಎಲ್ಲಾ ಪ್ರದೇಶಗಳಿಗೆ ಹೋಲಿಸಿಕೊಂಡರೆ ಯಾದಗಿರಿ ಪರಿಸರದಲ್ಲಿರುವ ಮಾದಿಗ ಜನಾಂಗವು ಸಾಂಸ್ಕೃತಿಕವಾಗಿ ಶ್ರೀಮಂತವಾಗಿದೆಯೇ ಹೊರತು, ರಾಜಕೀಯ, ಆರ್ಥಿಕ, ಸಾಮಾಜಿಕವಾಗಿ ಅತ್ಯಂತ ನಿಕೃಷ್ಟ ಸ್ಥಿತಿಯಲ್ಲಿ ಬದುಕುತ್ತಿದ್ದಾರೆ. ಇಲ್ಲಿ ದಲಿತ ಸಂಘದ ನಾಯಕರು ರಾಜ್ಯ ಮಟ್ಟದ ನಾಯಕರಾಗಿ ಬೆಳೆಯದೆ ಇರುವುದಕ್ಕೆ ಮಾದಿಗರು ಸಾಮಾಜಿಕ, ರಾಜಕೀಯ, ಆರ್ಥಿಕವಾಗಿ ಹಿಂದುಳಿಯಲು ಪ್ರಮುಖ ಕಾರಣವಾಗಿದೆ. ಇದನ್ನು ಅರಿತು ಎಲ್ಲಾ ದಲಿತ ಮುಖಂಡರು ಯಾದಗಿರಿ ಪರಿಸರದಲ್ಲಿ ಅಂಬೇಡ್ಕರ ಮತ್ತು ಜಗಜೀವನರಾಮ್‌ರ ವಿಚಾರಗಳನ್ನು ಬೆಳಸುವಂತೆ ಮಾಡಬೇಕಾಗಿ ರುವುದು ಜರೂರಿದೆ.

■

**ಆಕರ ಗ್ರಂಥಗಳು**

೧. Edgar Thurston.1909. Volume II. Castes and Tribes of Southern India. Government Press, Madras (Release Date: June 21, 2013 [EBook # 42992]).

೨. https://joshuaproject.net/people_groups/17397/IN 3.https://en.wikipedia.org/wiki/Madiga.

# ವಚನಕಾರರು ಮತ್ತು ಪಾಂಚಾಳ ಕುಲಕಸುಬುಗಳು



ಡಾ. ವೀರೇಶ ಬಡಿಗೇರ

ಮನುಷ್ಯ ನಿರ್ಮಿತ ಸಾಮಾಜಿಕ ಹಾಗೂ ಆರ್ಥಿಕ ಅಸಮಾನತೆಗಳನ್ನು ಮೀರಿ ಬೆಳೆದದ್ದು ವಚನ ಚಳುವಳಿ. ಜೀವ ವಿರೋಧಿ ನೆಲೆಗಳಿಗೆ ಮುಖಾಮುಖಿಯಾಗುತ್ತಲೇ ಜೀವಪರ ದಾರಿ ಹಾಗೂ ಬದುಕಿನ ಕ್ರಮಗಳನ್ನು ನಿರ್ಮಿಸಿದ್ದು ಈ ಚಳುವಳಿಯ ವಿಶೇಷತೆಯಾಗಿದೆ. ಕಾಯಕದ ಪರಿಕಲ್ಪನೆಯಿಂದ ಉದ್ಯೋಗ ಭದ್ರತೆ, ದಾಸೋಹದ ಪರಿಕಲ್ಪನೆಯಿಂದ ಆಹಾರ ಭದ್ರತೆಯನ್ನು ಪ್ರತಿಪಾದಿಸುವ ಮೂಲಕ ಪ್ರತಿಯೊಬ್ಬರಲ್ಲೂ ಸ್ವಾವಲಂಬಿ ಹಾಗು ಸ್ವವಿವೇಕದ ಎಚ್ಚರವನ್ನು ಮೂಡಿಸಿತು. ಆ ಮೂಲಕ ಮನುಷ್ಯ ಮತ್ತು ವೃತ್ತಿಗಳ ನಡುವೆ ಇದ್ದ ಮೇಲು ಕೀಳನ್ನು ಮೀರಿ ನಿಲ್ಲಿಸಿತು. ವಿಶೇಷವೆಂದರೆ ವಚನಕಾರರಲ್ಲಿ ಪಾಂಚಾಳ ವೃತ್ತಿ ಕೌಶಲ ಹಾಗೂ ಪರಿಕರಗಳು ಜ್ಞಾನ ಹಾಗೂ ಆಧ್ಯಾತ್ಮಿಕ ಅರ್ಥಗಳೊಂದಿಗೆ ಕ್ರಿಯಾಶೀಲಗೊಂಡಿದ್ದು ಅಭ್ಯಾಸಾರ್ಹವಾದುದು.

## ಕಮ್ಮಾರ

ಕಮ್ಮಾರರ ಕುಲ ಹಾಗೂ ವೃತ್ತಿ ಕುರಿತು ಅನೇಕ ವಚನಗಳಲ್ಲಿ ಉಲ್ಲೇಖಗಳಿವೆ. ಬಸವಣ್ಣನವರಲ್ಲಿ ಮರ್ತ್ಯಲೋಕವೆಂಬುದು ಕರ್ತಾರನ 'ಕಮ್ಮಟ'ವಯ್ಯ (ಬ.ವ.೧೫೫; ೪೫) 'ಕಾಶೀ ಕಮ್ಮಾರನಾದ...' ಅಗ್ನಿಯಾಧಾರದಲ್ಲಿ ಕಬ್ಬುಣ ನೀರುಂಬುದಯ್ಯಾ...' 'ಕಮ್ಮರನ ಕೆಲಸದ ಇಕ್ಕಳ...' (ಬ.ವ.೧೨೫;೫೮) 'ಪರುಷವನರಸುವುದೇ ಕಬ್ಬಿಣದಲ್ಲಿ' ಎನ್ನುವ ವಚನದ ಸಾಲುಗಳು ಕಂಬಾರ ಕುಲ, ವೃತ್ತಿ ಹಾಗೂ ವೃತ್ತಿ ಸಂಬಂಧಿ ಪರಿಕರಗಳ ಸ್ವಭಾವ ಹಾಗೂ ಕ್ರಿಯಾರೂಪವನ್ನು ಹೇಳುತ್ತವೆ. ಲೋಕ ಎಂಬುದು ಕರ್ತಾರನ ಕಮ್ಮಟ ಎನ್ನುವ ಪದ ಬಡಿಗ ಕಮ್ಮಾರರು ಸೃಷ್ಟಿಗಧಿಕರ್ತರು ಎನ್ನುವ ಮೌನೇಶ್ವರ ವಚನದಂತೆ ಈ ಸೃಷ್ಟಿ ನಿರ್ಮಾಣದಲ್ಲಿ, ನಾಗರೀಕತೆಯ ಬೆಳವಣಿಗೆಯಲ್ಲಿ ಕಮ್ಮಾರ ಹಾಗು ಆತನ ಕಮ್ಮಟ (ಕುಲುಮೆ)ಕ್ಕಿದ್ದ ವಿಶಿಷ್ಟತೆಯನ್ನು ಹೇಳುತ್ತವೆ.

ಚನ್ನಬಸವಣ್ಣನವರ ವಚನದಲ್ಲಿ 'ಕಬ್ಬುಣವ ಮಾಡುವವ ಕಮ್ಮಾರ' 'ಕಬ್ಬುನವ ಕಮ್ಮಾರ ಮಾಡುವವನೆಂದರೆ ಆ ಕಬ್ಬುಣತಾ ಕಮ್ಮಾರನೆ' ಎನ್ನುವಲ್ಲಿ ಕಮ್ಮಾರರು

ಕಬ್ಬಿಣವನ್ನು ಅದಿರಿನಿಂದ ಸೋಸಿ ಕಾಶಿ ಗಟ್ಟಿಗಳನ್ನಾಗಿ ಮಾಡುವುದಲ್ಲದೆ ಬಳಕೆ ಯೋಗ್ಯ ವಸ್ತುಗಳನ್ನು ತಯಾರಿಸಿ ಮಾರುವವರೂ ಆಗಿದ್ದರು ಎನ್ನುವುದನ್ನು ವಚನದ ಸಾಲುಗಳು ಧ್ವನಿಸುತ್ತವೆ. ಅವರದೇ ಇನ್ನೊಂದು ವಚನದಲ್ಲಿ

'ಲಿಂಗ ಬಿದ್ದಿತ್ತೆಂಬರಯ್ಯಾ। ಲಿಂಗ ಬೀಳಲು ಬಲ್ಲುದೆ
ಭೂಮಿ ತಾಳಲು ಬಲ್ಲುದೆ। ಕಮ್ಮಾರ ಕಡೆದು ಮಾಚಿದ
ಭೋಗಾರ ತಂದು ಮಾಚಿದ.......'

ಎನ್ನುವ ಸಾಲುಗಳು ಕಂಬಾರರ ಉತ್ಪಾದಕ ಹಾಗೂ ವಿನಿಮಯ ಶಕ್ತಿಯನ್ನು ಹೇಳುತ್ತವೆ. ಪಂಚಾಳರ ಪಂಚಕಸುಬುಗಳನ್ನು ಕೇವಲ ಮುಖ್ಯ ವೃತ್ತಿಗಳ ಉಪವೃತ್ತಿಗಳನ್ನಾಗಿ ಅಥವಾ ಸೇವಾ ವರ್ಗಗಳನ್ನಾಗಿ, ಆಯಗಾರರನ್ನಾಗಿಸಿ ಕೀಳೀಕರಿಸಿದ ನೆಲೆಗಳನ್ನು ದಾಟಿ ಕಂಬಾರರಿಗಿದ್ದ ಉದ್ಯಮಶೀಲತೆಯ ಗುಣವನ್ನು ಅರಿವಿಗೆ ತರುತ್ತವೆ.

ಸಿದ್ಧರಾಮನಲ್ಲೂ 'ಅಯ್ಯಾ ಕಬ್ಬುಣ ನೀರನೊಳಕೊಂಬಂತೆ' 'ಕಾಯ್ದ ಕರ್ಬುಣ ನೀರನೊಳಕೊಂಬಂತೆ' ನಗೆಯ ಮಾರಿ ತಂದೆ ವಚನದಲ್ಲಿ 'ಉದಯದಲಿ ಕಮ್ಮಱನ ಮನೆಗೆ ಬಂದು ಬೇಸತ್ತೆ' ಎನ್ನುವಲ್ಲಿ ಕಬ್ಬಿಣದ ಗುಣ ಸ್ವಭಾವ ಹಾಗೂ ಕಮ್ಮಾರರ ಕೆಲಸದ ಸ್ವರೂಪವನ್ನು ಕಾಣಬಹುದಾಗಿದೆ.

**ಬಡಿಗ**

ಒಕ್ಕಲಿಗ ಮುದ್ದಣನ ವಚನದಲ್ಲಿ ಬರುವ 'ಕಾರುಕನ ಕೈಲಿ ಸುಬುದ್ದಿಸಿ ಶುದ್ಧೈಸಿ' ಎನ್ನುವ ಮಾತು ಬಿದ್ದ ಮರನ ತಂದು ವ್ಯವಸಾಯೋಪಕರಣಗಳನ್ನು ಮಾಡಿಸುವ ಕ್ರಿಯೆಯನ್ನು ಹೇಳುತ್ತವೆ. ಬಾಚಿಕಾಯಕದ ಬಸವಯ್ಯ ಕಾಮಾಟದ ಭೀಮಣ್ಣ, ಇವರಲ್ಲಿ ಬಡಿಗ ವೃತ್ತಿ ಹಾಗೂ ಅದರ ಪರಿಕರಗಳು ತತ್ತ್ವಮೀಮಾಂಸೆಯ ಭಾಗಗಳಾಗಿ ಬರುವುದು ವಿಶೇಷ.

ಘಟಸ್ಥಾವರದೊಳಗನೊಡೆದು ಕಿಚ್ಚಿನ ಹೊರೆಯಂ ಕಂಡೆ
ಕಾಣಿಸಿ ಮಿಕ್ಕಾದ ಹೊರಗಣ ಹೊರೆಯ ತಿಗುಡ ಕೆತ್ತಿ
ಕಂಬ ಶುದ್ಧೈಶಿ ನೆಲಮಟ್ಟಕ್ಕೆ ಚದುರಸವನಿಂಬುಗೊಳಿಸಿ
ಮೇಲಣ ವಟ್ಟಕ್ಕೆ ಎಂಟು ಧಾರೆಯ ಏಣಂ ಮುರಿದು

ಎನ್ನುವ ಸಂಗತಿಗಳಾಗಲೀ

ಆರು ದರುಶನವೆಲ್ಲ ಎನ್ನ ಬಾಚಿಯ ಕಲೆ
ಮಿಕ್ಕಾದ ಮೀರಿದ ಅವಧೂತರುಗಳೆಲ್ಲ
ಎನ್ನ ಉಳಿಯೊಳಗಣ ಒಡಮು
ಇಂತಿಹ ಮೀರಿ ವೇಧಿಸಿ ಭೇದಿಸಿಹೆನೆಂಬವರೆಲ್ಲ
ಎನ್ನ ಕೊಡತಿಯಲ್ಲಿ ಬಡೆಯಿಸಿ ಕೊಂಬುವ ಬಡಿಹೋರಿಗಳು

ಈ ಮಾತುಗಳು ಉಳಿ, ಬಾಚಿ, ಕೊಡತಿಯ ಕಲಾತ್ಮಕ ಬಳಕೆಯನ್ನು ಹೇಳಿದಂತೆ ಅದರ ಅನುಭಾವಿಕ ಅರ್ಥವನ್ನು ಹೇಳುತ್ತವೆ.

ಆಶೆಯರಿತ ಬಾಚಿಯಲಿ ಭವಪಾಶವಿಲ್ಲದ ಜಂಗಮಕೆ ತೆತ್ತ
ರೋಷವಿಲ್ಲದ ಉಳಿಯಲಿ ನಿಜವಾಸವ ನೋಡಿ ಹುಗಿಲುದೆಗೆವುತ್ತ

ಎನ್ನುವಲ್ಲಿ ಉಳಿ, ಬಾಚಿಯ ಹರಿತತೆ ಹಾಗೂ ಕೊಡತಿಗಿರುವ ಶಕ್ತಿಯನ್ನು ಕಾಣಬಹುದು.

ಬಾಚಿಯ ದೈತ್ಯ ಶಕ್ತಿಯನ್ನು ತನು ವಿಕಾರಗಳ ಸ್ವಚ್ಚತೆಗೂ ಉಳಿಯ ತೀಕ್ಷ್ಣತೆಯನ್ನು ಮನವಿಕಾರಗಳ ಸ್ವಚ್ಚತೆಗೂ ಬಸವಣ್ಣ ಬಳಸುತ್ತಾನೆ. ತನುಮನಗಳ ಸಾತತ್ಯತೆ ಶ್ರಮದ ಮುಖ್ಯಗುಣ. ಸಾತತ್ಯವಿಲ್ಲದಿದ್ದರೆ 'ಕೈತಪ್ಪಿ ಕೆತ್ತಲು ಕಾಲಿಂಗೆ' ಮೂಲ ಎನ್ನುವ ಬಾಚಿಕಾಯಕದ ಬಸವಯ್ಯನ ಸತಿ ಕಾಳವ್ವೆಯ ವಚನದಂತೆ ಅಪಾಯ ಕಟ್ಟಿಟ್ಟದ್ದು. ಬಸವಯ್ಯನ ವಚನಗಳುದ್ದಕ್ಕೂ ಇಂತಹ ಸತ್ಕರ್ಮ ಹಾಗೂ ಜೀವನದ ತಾತ್ವಿಕತೆಯನ್ನು ಕಾಣುತ್ತೇವೆ.

**ಅಕ್ಕಸಾಲಿಗ**

'ಚಿನ್ನಗೆಯ್ಕಯವ' ಎಂದು ಬಸವಣ್ಣ ಅಕ್ಕಸಾಲಿಗರನ್ನು ಕರೆಯುತ್ತಾನೆ. ಅವರದೇ ಒಂದು ವಚನದಲ್ಲಿ 'ಕಲ್ಲೊಳಗೆ ಹೊನ್ನುಂಟು ಮರದೊಳಗೆ ಅಗ್ನಿಯುಂಟು' ಹಾಗೆ ಚೆನ್ನಬಸವಣ್ಣನವರು 'ಭೂಮಿಯ ಜಲಗುಗರ್ಚಿ ಹೇಮವನರಸುವಂತೆ' ಈ ಮಾತುಗಳು ಭೂಮಿಯಲ್ಲಿ ನಿಕ್ಷೇಪವಾಗಿದ್ದ ಹೇಮವನ್ನು ಅರಸಿ, ಸೋಸಿ, ಹೊರತೆಗೆದು ಚಿನ್ನವಾಗಿಸುವ ಪ್ರಕ್ರಿಯೆಯನ್ನು ಹೇಳುತ್ತವೆ. ಕಂಬಾರರು, ಅಕ್ಕಸಾಲಿಗರು ಭೂಮಿಯಿಂದ ಕಬ್ಬಿಣ ಹಾಗೂ ಚಿನ್ನದಂತಹ ಲೋಹಗಳನ್ನು ಹೊರತೆಗೆಯುವಲ್ಲಿ ನಿಷ್ಣಾತರಾಗಿದ್ದರೆಂಬುದು ಗಮನಾರ್ಹ. ಲೋಹಗಳನ್ನು ಶೋಧಿಸುವ, ಕರಗಿಸುವ, ಘನೀಕರಿಸುವ ಹಾಗೂ ಲೋಕೋಪಯೋಗಿ ವಸ್ತುಗಳಾಗಿಸುವ ಪಾಂಚಾಳರ ಕೌಶಲ್ಯದ ಪ್ರಾಚೀನತೆಯನ್ನು ಇಲ್ಲಿ ಮುಖ್ಯವಾಗಿ ಗಮನಿಸಬಹುದಾಗಿದೆ. ಅಂದರೆ ಇಂದಿನ ಗಣಿಗಾರಿಕೆ ಹಾಗು ಲೋಹೋದ್ಯಮದ ಮೂಲವನ್ನು ಪಾಂಚಾಳರಲ್ಲಿ ಹುಡುಕಬಹುದಾಗಿದೆ. ಬಸವಣ್ಣನವರಲ್ಲಿ

ಕರಗಿಸಿ ಎನ್ನ ಮನದ ಕಾಳಿಕೆಯ ಕಳಿಯಯ್ಯಾ
ಒರೆಗೆ ಬಣ್ಣಕ್ಕೆ ಬಂದೆನ್ನ ಪುಟವನಿಕ್ಕಿಸಿ ನೋಡಯ್ಯ
ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡೆಯಾಣಿಯ ಮಾಡಿ
ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು
ಕೂಡಲ ಸಂಗಮದೇವ (ಬ.ಪಸಂ.ವ.೨೫೧ಲ ೬೨)

ಲೋಹವನ್ನು ಕಡಿದು, ಬಡಿದು, ಕಾಸಿ ಕರಗಿಸಿ, ಒರಗೆ ಹಚ್ಚಿ, ಪುಟವಿಕ್ಕಿ, ಒಂದು ಸುಂದರ ಆಭರಣವಾಗಿಸುವ ಅಕ್ಕಸಾಲೆಯ ಕೌಶಲ್ಯವನ್ನು ಬಸವಣ್ಣನವರು ಒಂದು ಆಧ್ಯಾತ್ಮಿಕ ಪರಿಭಾಷೆಯಾಗಿ ಬಳಸುತ್ತಾರೆ. ಪ್ರಾಕೃತಿಕವಾಗಿದ್ದ ವಸ್ತು ವಿವಿಧ ಸಂಸ್ಕಾರಗಳ ಬಲದಿಂದ ಪರಿಷ್ಕೃತಗೊಂಡು ಸುಂದರ ಆಭರಣವಾಗುವಂತೆ ಮನುಷ್ಯ

ತನ್ನ ದೇಹ ಹಾಗೂ ಮನಸ್ಸನ್ನು ಅಂತ ಸಂಸ್ಕಾರ ಬಲದಿಂದ ಪುಟಕ್ಕಿಟ್ಟ ಚಿನ್ನವಾಗಿಸಿಕೊಳ್ಳಬೇಕೆಂಬುದು ವಚನದ ಆಶಯವಾಗಿದೆ. ದೇವರದಾಸಿಮಯ್ಯ ವಚನವೊಂದರಲ್ಲಿ 'ಲಿಂಗವ ಮಾರಿ ಉಂಬರೆ ಭಂಗಾಜಿರು' 'ಒರೆದು ನೋಡುವ ಸುವರ್ಣದಂತೆ' ಚನ್ನಬಸವಣ್ಣನವರ 'ಅಕ್ಕಸಾಲೆಯ ಭಕ್ತಿ ಅಗ್ಗಿಷ್ಟಿಕೆಯಲ್ಲಿ ಹೋಯಿತು' 'ಅವಂಗೆ ಇಕ್ಕುಳ, ಅಡಿಗಲ್ಲು, ಚೆಮ್ಮಟಿಗೆ, ಮೊದಲಾದ ಸಂಪಾದನೆಗಳ ಕೊಟ್ಟವರ್ಯಾರು' (ಚೆಬವ.೩೫೭; ೧೬೨) 'ಚಿನಿವಾರ ಅಕ್ಕಸಾಲಿಗ ವಿಶ್ವಕರ್ಮರು' ಎನ್ನುವ ಹಲವು ಸಾಲುಗಳು ಪತ್ತಾರಿಕೆಯ ವಿವಿಧ ಹಂತಗಳನ್ನು ಹಾಗೂ ಪರಿಕರಗಳನ್ನು ಆಧ್ಯಾತ್ಮಿಕ ಎತ್ತರಕ್ಕೇರಿಸಿದ್ದು ಗಮನಾರ್ಹ.

**ಕಂಚುಗಾರರು**

ಹಿತ್ತಾಳೆ, ತಾಮ್ರ, ಸೀಸ ಈ ಮೂರರ ಮಿಶ್ರಣದಿಂದ ಕಂಚನ್ನು ತಯಾರಿಸುವವರು ಕಂಚುಗಾರರು. ಕಂಚಿನಿಂದ ಕಳಸ, ಕಹಳೆ, ಕೈದೀಪ, ಊಟದ ತಟ್ಟೆ, ದೇವತಾ ಮೂರ್ತಿಗಳಲ್ಲದೆ, ತಾಮ್ರ, ಹಿತ್ತಾಳೆ ಪಾತ್ರೆಗಳನ್ನು ಮಾಡುವುದು ಇವರ ವೃತ್ತಿ, ಬಸವಣ್ಣನವರ ವಚನವೊಂದರಲ್ಲಿ 'ಎನ್ನ ಹೆಣದ ಮೇಲೆ ಕಂಚಿಟ್ಟುಂಡಡೆಯೂ ಮಾಣೆ' 'ಉಂಬ ಬಟ್ಟಲು ಬೇರೆ ಕಂಚಲ್ಲ, ನೋಡುವ ದರ್ಪಣ ಬೇರೆ ಕಂಚಲ್ಲ, ಭಾಂಡೆ ಒಂದೆ ಭಾಜನ ಒಂದೆ, ಬೆಳಗೆ ಕನ್ನಡಿ ಎನಿಸಿತ್ತಯ್ಯ (ವ.೮೬೧:೨೨೪) ಕಂಚಿನ ಕನ್ನಡಿಯಲ್ಲಿ ನೋಡುವುದು, ತಟ್ಟೆ, ಬಟ್ಟಲಿನಲ್ಲಿ ಉಣ್ಣುವುದು ಒಂದು ಕಾಲದ ಸಾಮಾಜಿಕ ಬದುಕಿನ ಕ್ರಮಗಳಾಗಿದ್ದವು. ಇವುಗಳ ರೂಪ ಬೇರೆ ಬೇರೆಯಾದರೂ ಮೂಲ ಲೋಹ ಒಂದೆ. ಕಂಚು ಹಾಗೂ ಕಂಚಿನ ಪಾತ್ರೆಗಳನ್ನು ತಯಾರಿಸುವುದಲ್ಲದೆ ಅವುಗಳನ್ನು ಮನಸ್ಸಿನಂತೆ ಥಳಥಳ ಬೆಳಗುವ ವಿವರಗಳು ಗಮನಾರ್ಹವಾದಂಥವು. ದೇವರ ದಾಸಿಮಯ್ಯನ ವಚನದಲ್ಲಿ

ನೆರೆದರೆ ಗುಣಂಗಳು, ಹರೆದರೆ ಕಂಚುಗಾರರು
ಲಿಂಗವಮಾಜಿ ಉಂಬರೆ ಭಂಗಾಜಿರು
ತಮ್ಮ ತಳಿಗೆಯ ಕೊಂಡು ಹೋಗಿ
ಅನ್ಯರ ಮನೆಯಲುಂಬು ಕುನ್ನಿಗಳ ನಾನೇನೆಂಬೆ ರಾಮನಾಥ
(ದೇ.ದಾ.ವ,ಸಂ.ಎಲ್.ಬಿ. ವ.ಸಂ.೧೨೮, ಪುಟ.೯೫; ೧೯೮೫)

ಕಂಚುಗಾರರ ವಿಭಿನ್ನ ಗುಣವೊಂದನ್ನು ವಚನ ಹೇಳುತ್ತದೆ. ಕಂಚುಗಾರರರು ತಮ್ಮ ವೃತ್ತಿ ನಿಷ್ಠೆಯೊಂದಿಗೆ ವಿಭಿನ್ನ ಸಾತ್ವಿಕ ಗುಣಧರ್ಮಗಳನ್ನು ರೂಢಿಸಿಕೊಂಡಿದ್ದನ್ನು ವಚನ ಧ್ವನಿಸುತ್ತದೆ.

**ಶಿಲ್ಪಿ**

ಸ್ಥಾವರ ಜಂಗಮದ ಪರಿಕಲ್ಪನೆಯ ಪ್ರಭಾವವೋ ಏನೋ ವಚನಗಳಲ್ಲಿ ಶಿಲ್ಪಿಗಳ ಕುರಿತು ಉಲ್ಲೇಖಗಳು ಅಗಾಧ ಪ್ರಮಾಣದಲ್ಲಿ ಕಂಡು ಬರುವುದಿಲ್ಲ. ಮೂರ್ತಿಶಿಲ್ಪ

ಹಾಗೂ ಗುಡಿ ಗುಂಡಾರಗಳ ನಿರ್ಮಾಣವಿದ್ದಲ್ಲಿ ಶಿಲ್ಪಿಗಳಿಗೆ ಕೆಲಸವಿರುತ್ತದೆ. ತ್ವಷ್ಟ್ರ, ವರ್ಧಕಿ, ದೈವಜ್ಞ, ವಿಶ್ವಶಿಲ್ಪ. ವಿಶ್ವಕರ್ಮನೆಂಬ ಪದಗಳು ವಚನಗಳಲ್ಲಿ ಕಂಡರೂ ಅವು ಮರದಶಿಲ್ಪ (ಮನೆ)ದ ಭಾಗವಾಗಿ ಕಾಣುತ್ತವೆ. ಮರದ ಶಿಲ್ಪ ಮಾಡುವವನು ಬಡಿಗನಾಗಿದ್ದುದ್ದು ಗಮನಾರ್ಹ.

'ಚಿನ್ನ ವಿಶೇಷ ಮಣ್ಣು ಅಧಮವೆಂದೆಡೆ ಅದು ನಿಂದು ಕರಗುವುದಕ್ಕೆ ಮಣ್ಣಿನ ಕೋವೆಯೇ ಮನೆಯಾಯಿತ್ತು' ಎನ್ನುವ ಮೆಜೆೀಮಿಂಡಯ್ಯನ ವಚನವು ವೃತ್ತಿ ಹಾಗೂ ಶಕ್ತಿಯ ಮೇಲು ಕೀಳಿನ ಕೃತಕ ವಿಭಜನೆಯನ್ನು ಅಪವರ್ಗೀಕರಿಸುತ್ತದೆ. ಹಾಗೂ ಪಾಂಚಾಳ ವೃತ್ತಿಗಳು ಕ್ರಿಯೆ ಹಾಗೂ ಅರಿವಿನ ಸಂಘಟಿತ ಫಲಿತಗಳು. ದೇಹ ಹಾಗೂ ಮನಸ್ಸು ಭಿನ್ನವಾಗಿ ಇಲ್ಲಿರಲು ಸಾಧ್ಯವಿಲ್ಲ. ಉಲ್ಲೇಖಿತ ವಚನಗಳಲ್ಲಿ ಕಾಣುವ ಪಾಂಚಾಳ ಕುಲ ವೃತ್ತಿ ಹಾಗೂ ಸಲಕರಣೆಗಳಂಥ ಮೂರ್ತ ಹಾಗೂ ಸ್ವಾನುಭಾವದ ನಡೆಗಳನ್ನು ಆಧ್ಯಾತ್ಮದ ಎತ್ತರಕ್ಕೇರಿಸಿದ್ದು ವಿಶೇಷ. ಉಳಿ, ಬಾಚಿ, ಕೊಡತಿ, ಇಕ್ಕಳ, ಚಮ್ಮಟಿಗೆ, ತಿದಿ, ಗರಗಸ, ಕುಲುಮೆ, ಸುತ್ತಿಗೆ, ಕೋವೆ, ಮೂಸೆಯಂಥ ವೃತ್ತಿ ಉಪಕರಣಗಳೊಂದಿಗೆ, ಕೆತ್ತು, ಬಡಿ, ಹಿಡಿ, ಹುಗಿಲುದೆಗಿ, ಕರಗು, ಮೆರಗು, ಪುಟವಿಡು, ಒರೆಗಚ್ಚು ಇತ್ಯಾದಿ ಕ್ರಿಯಾರೂಪಗಳ ಮೂಲಕ ಘನವನ್ನು ವಿವರಸಲು ಹಂಬಲಿಸಿದ್ದು ವಚನಕಾರರ ಹಿರಿಮೆಯಾಗಿದೆ. ಪರಂಪರೆಯಲ್ಲಿ ತನ್ನ ಕ್ರಿಯಾಮೂಲ ಕಾರಣದಿಂದಲೇ ಅಲಕ್ಷಿತವಾಗಿದ್ದ ಪಾಂಚಾಳರ ವೃತ್ತಿ ಹಾಗೂ ಅದರ ನುಡಿಬೆಡಗನ್ನು ಅನುಭಾವದ ಸಂವೇದನೆಗಳನ್ನಾಗಿ ಬಳಸುವ ಮೂಲಕ ಪಾಂಚಾಳರ ವೃತ್ತಿ ಹಾಗೂ ವೃತ್ತಿಕಾರರ ಆತ್ಮಗೌರವವನ್ನು ಗಟ್ಟಿಯಾಗಿಸಿದ್ದು ವಚನಕಾರರ ವೈಶಿಷ್ಟ್ಯ. ಕ್ರಿಯೆ ಇಲ್ಲದ ಜ್ಞಾನ ಪ್ರಯೋಜನವಿಲ್ಲ ಎನ್ನುವ ಮೂಲಕ ಕ್ರಿಯೆ ಮತ್ತು ಅರಿವಿನ ಅಂತಃಸಂಬಂಧವನ್ನು ಹುರಿಗೊಳಿಸಿ ಆತ್ಮಜ್ಞಾನಕ್ಕೆ ಆಧ್ಯಾತ್ಮಿಕ ಅನುಭೂತಿಗೆ ಸಾಧನವಾಗಿಸಿದರು.

■

# ಕೃಷ್ಣಕರ್ಣಾಮೃತದಲ್ಲಿ ಶಬ್ದಚಿತ್ರಗಳು



ಡಾ. ಎಚ್.ಎಸ್. ಅನಂತನಾರಾಯಣ

ದಕ್ಷಿಣ ಭಾರತದಲ್ಲಿ ಪ್ರಸಿದ್ಧವಾಗಿರುವ ಎರಡು ಗೀತಕಾವ್ಯಗಳೆಂದರೆ, ಮೇಪ್ಪತೂರ್ ನಾರಾಯಣ ಭಟ್ಟತಿರಿ ರಚಿತ ನಾರಾಯಣೀಯಮ್ ಮತ್ತು ಲೀಲಾಶುಕ ವಿರಚಿತ ಕೃಷ್ಣ ಕರ್ಣಾಮೃತ. ಇವುಗಳಲ್ಲಿ ಮೊದಲಿನದು ಭಾಗವತಪುರಾಣದ ಸಂಕ್ಷಿಪ್ತರೂಪ. ಇರಲ್ಲಿ ೧೦೦ ಸರ್ಗಗಳೂ ಪ್ರತಿಸರ್ಗದಲ್ಲಿ ಸುಮಾರು ಹತ್ತು ಪದ್ಯಗಳೂ (ಒಟ್ಟು ೧೦೩೬) ಇವೆ. ಭಾಗವತದ ಕಥೆಯನ್ನು ಯಥಾವತ್ತಾಗಿ ಅನುಸರಿಸಿ ರಚಿಸಲ್ಪಟ್ಟಿದೆ. ಭಟ್ಟತಿರಿಯು ತನ್ನ ಗುರುವಿನ ಪಾರ್ಶ್ವವಾಯು ರೋಗವನ್ನು ತಾನು ತೆಗೆದುಕೊಂಡು, ಅದರ ನಿವೃತ್ತಿಗಾಗಿ ಗುರುವಾಯೂರಿನ ಕೃಷ್ಣಮಂದಿರದಲ್ಲಿ ಕುಳಿತು ಸ್ತೋತ್ರ ಮಾಡುತ್ತಾ ಇದನ್ನು ರಚಿಸಿದನು.

ಎರಡನೆಯದು ಭಾಗವತಪುರಾಣದ ದಶಮಸ್ಕಂಧದಲ್ಲಿ ಶುಕಮಹರ್ಷಿ ವರ್ಣಿಸಿರುವ ಕೃಷ್ಣನ ಲೀಲೆಗಳನ್ನು ಮಾತ್ರ ಇಲ್ಲಿ ವಿವರಿಸಿದೆ. ಇದೊಂದು ಪ್ರೇಮಭಕ್ತಿಯನ್ನು ನಿರೂಪಿಸುವ ಉತ್ತಮಕಾವ್ಯ. ಇದರಲ್ಲಿ ಕೇವಲ ಮೂರು ಆಶ್ವಾಸಗಳು ಒಟ್ಟು ೩೨೮ ಶ್ಲೋಕಗಳೂ (೧೧೦,೧೧೦,೧೦೮) ಇವೆ. ಕವಿ ತನ್ನ ಹೆಸರನ್ನು, ತನ್ನ ಕಾವ್ಯದ ಹೆಸರನ್ನು ಮೊದಲನೆಯ ಆಶ್ವಾಸದ ಕಡೆಯ ಪದ್ಯದಲ್ಲಿ ಹೇಳಿಕೊಂಡಿದ್ದಾನೆ (೧.೧೧೦ ಲೀಲಾಶುಕೇನ ರಚಿತಂ ತವ ದೇವ ಕೃಷ್ಣಕರ್ಣಾಮೃತಂ ವಹತು ಕಲ್ಪಶತಾಂತರೇಪಿ). ಇವನು ಪ್ರಾಯಃ ಆಂಧ್ರದವನು, ಕಾರಣ, ಸಂಸ್ಕೃತದಲ್ಲಿ ನಿಯತವಲ್ಲದ, ಆದರೆ ತೆಲುಗು ಛಂದಸ್ಸಿನ ಒಂದು ಲಕ್ಷಣವಾದ ದ್ವಿತೀಯಾಕ್ಷರ ಪ್ರಾಸವನ್ನು ವಿಶೇಷವಾಗಿ ಬಳಸಿದ್ದಾನೆ (ಉದಾ. ೧.೮, ೧.೯, ೧.೪೫). ಅಲ್ಲದೇ, ಪ್ರಚಲಿತವಾಗಿರುವ ಒಂದು ಕಥೆಯಂತೆ ಚಿಂತಾಮಣಿ ಎಂಬ ನರ್ತಕಿಯ ನಿಕಟ ಸಂಬಂಧ ಹೊಂದಿದ್ದನೆಂದು, ಒಂದು ಸಂದರ್ಭದಲ್ಲಿ, "ನನ್ನ ಮೇಲೆ ತೋರಿಸುವ ಪ್ರೇಮದ ಒಂದು ಪಾಲು ಪ್ರೇಮವನ್ನು ಭಗವಂತನಲ್ಲಿ ಇಟ್ಟರೆ ನಿಮ್ಮ ಜೀವನ ಸಾರ್ಥಕವಾದೀತು", ಎಂಬ ಅವಳ ಒಂದು ಮಾತಿನಿಂದ, ಲೀಲಾಶುಕನ ಸಾಂಸಾರಿಕ ಪ್ರೇಮದೃಷ್ಟಿ ತೊಲಗಿ ಭಗವತ್ಪ್ರೇಮ

ಮೊದಲಾಯಿತಂತೆ. ಆದ್ದರಿಂದ ಚಿಂತಾಮಣಿಯೇ ಆತನ ಆಧ್ಯಾತ್ಮಿಕ ಗುರು. ಅವಳನ್ನು ಮಂತಳಶ್ಲೋಕದಲ್ಲಿ ಗೂಢವಾಗಿ ಮೊದಲಿಗೇ ಸ್ಮರಿಸಿದ್ದಾನೆ (೧.೧ ಚಿಂತಾಮಣಿ ರ್ಜಯತಿ ಸೋಮಗಿರಿರ್ಗುರುರ್ಮೇ, ಶಿಕ್ಷಾಗುರುಶ್ಚ ಭಗವಾನ್ ಶಿಖಿಪಿಂಛಮೌಳಿಃ). ಅಲ್ಲಿಯೇ ತನ್ನ ಲೌಕಿಕ ಜ್ಞಾನದ ಗುರು ಸೋಮಗಿರಿಯನ್ನೂ, ತನ್ನ ಸಕಲಜ್ಞಾನದಾಯಕ ಗುರು ಹಾಗೂ ದೈವವಾದ ಶ್ರೀಕೃಷ್ಣನನ್ನೂ ಸ್ತುತಿಸಿದ್ದಾನೆ (೨.೧೧೦ ಯಸ್ಯಾತ್ಮಭೂತಸ್ಯ ಗುರೋಃ ಪ್ರಸಾದಾದಹಂ ವಿಮುಕ್ತೋಸ್ಮಿ ಶರೀರಬಂಧಾತ್/ಸರ್ವೋಪದೇಷ್ಟುಃ ಪುರುಷೋತ್ತಮಸ್ಯ ತಸ್ಯಾಂಘ್ರಿಪದ್ಮಂ ಪ್ರಣತೋಸ್ಮಿ ನಿತ್ಯಮ್). ಇವನು ತನ್ನನ್ನು ಬ್ರಾಹ್ಮಣನೆಂದೂ, ಮೊದಲಿಗೆ ಸ್ನಾನ ಸಂಧ್ಯಾವಂನದ, ದೇವಪಿತೃತರ್ಪಣಾದಿಗಳನ್ನು ಆಚರಿಸುತ್ತಿದ್ದನೆಂದೂ, ನಂತರದ ಕಾಲದಲ್ಲಿ ಕೃಷ್ಣನ ನಾಮಸ್ಮರಣೆಯಲ್ಲಿ ರುಚಿ ಬೆಳೆದು ಅದಾವುದನ್ನು ಈಗ ಮಾಡಲು ಅಸಮರ್ಥನೆಂದೂ ಹೇಳಿಕೊಂಡಿದ್ದಾನೆ (೨.೧೦೬ ಸಂಧ್ಯಾವಂದನ ಭದ್ರಮಸ್ತು ಭವತೇ ಭೋಃ ಸ್ನಾನ ತುಭ್ಯಂ ನಮೋ, ಭೋ ದೇವಾಃ ಪಿತರಶ್ಚ ತರ್ಪಣವಿಧೌ ನಾಹಂ ಕ್ಷಮಃ ಕ್ಷಮ್ಯತಾಂ/ಯತ್ರ ಕ್ವಾಪಿ ನಿಷೀದ್ಯ ಯಾದವಕುಲೋತ್ತಂಸಸ್ಯ ಕಂಸದ್ವಿಷಃ. ಸ್ಮಾರಂ ಸ್ಮಾರಮಘಂ ಹರಾಮಿ ತದಲಂ ಮನ್ಯೇ ಕಿಮ್ ಅನ್ಯೇನ ಮೇ). ಜನ್ಮತಃ ಶಿವಭಕ್ತನಾಗಿದ್ದು, ಪಂಚಾಕ್ಷರೀ ಮತ್ರಂವನ್ನು ನಿರಂತರ ಜಪಿಸುತ್ತಿದ್ದನೆಂದೂ, ನಂತರ ಕೃಷ್ಣನು ಅವನ ಮನಸ್ಸು ಮತ್ತು ಆತ್ಮವನ್ನು ಆವರಿಸಿಕೊಂಡುಬಿಟ್ಟನೆಂದೂ ಹೇಳುತ್ತಾನೆ (೨.೨೪ ಶೈವಾ ವಯಂ ನ ಖಲು ತತ್ರ ವಿಚಾರಣೀಯಂ, ಪಂಚಾಕ್ಷರೀಜಪಪರಾ ನಿತರಾಂ ತಥಾಪಿ/ಚೇತೋ ಮದೀಯಮತಸೀಕುಸುಮಾವಭಾಸಂ, ಸ್ಮೇರಾನನಂ ಸ್ಮರತಿ ಗೋಪವಧೂಕಿಶೋರಂ).

ಸಂಗೀತಪ್ರಪಂಚದಲ್ಲಿ ಸಹ ಕರ್ಣಾಮೃತದ ಸ್ಥಾನ ವಿಶಿಷ್ಟವಾದದ್ದು. ಯಾವುದೇ ಸಂಗೀತಸಭೆಯೂ ಇದರಿಂದ ಒಂದೆರಡು ಪದ್ಯಗಳನ್ನು ಹಾಡದೇ ಮುಕ್ತಾಯವಾಗುವುದಿಲ್ಲ (೨.೧೦೮ ಕಸ್ತೂರೀತಿಲಕಂ...೩.೯ ಸಾಯಂಕಾಲೇ ವನಾಂತೇ... ಈ ಪದ್ಯಗಳು ಸಂಗೀತ ಶ್ರೋತೃಗಳಿಗೆ ಅತಿ ಪರಿಚಿತವಾದದ್ದೇ). ಕರ್ಣಾಮೃತದಲ್ಲಿ ಒಂದು ಪದ್ಯ ಮಧುರವಾಗಿಯೂ ಇಂಪಾಗಿಯೂ ಇದೆ. ಬಾಲಕೃಷ್ಣನ ಲೀಲೆಗಳನ್ನು, ಅವನ ರಾಸಲೀಲೆಯನ್ನೂ ಕವಿ ಬಹಳ ಚೆನ್ನಾಗಿ ವರ್ಣಿಸಿದ್ದಾನೆ. ಇಲ್ಲಿ ಕಂಡುಬರುವ ಕೆಲವು ಶಬ್ದಚಿತ್ರಗಳನ್ನು ಮಾತ್ರ ಇಲ್ಲಿ ಕೊಡುವ ಪ್ರಯತ್ನ ಮಾಡಿದೆ. ಇವು ಪ್ರಶ್ನೋತ್ತರಿಯ ರೂಪದಲ್ಲಿರುವುದು ಸ್ವಾರಸ್ಯವೆನಿಸುತ್ತದೆ. ಇವನ್ನು ಓದುತ್ತಿದ್ದ ಅವರ್ಣನೆಯ ಕೃಷ್ಣನ ರೂಪವೇ ಕಣ್ಣೆದುರು ನಿಂತಂತಾಗುತ್ತದೆ.

೧. ಒಮ್ಮೆ ಕನಸಿನಲ್ಲಿ ಕೃಷ್ಣನಾಡುತ್ತಿದ್ದ ಮಾತುಗಳು ಹೀಗಿವೆ: (೨.೫೮)

ಶಂಭೋ ಸ್ವಾಗತಂ "ಎಲೈ ಶಂಭುವೇ ನಿನಗೆ ಸ್ವಾಗತ", ಅಸ್ಯತಾಂ ಇತ ಇತೋ ವಾಮೇನ ಪದ್ಮಾಸನ "ಎಲೈ ಬ್ರಹ್ಮನೇ ನೀನು ಇಲ್ಲಿ ನನ್ನ ಎಡಭಾಗದಲ್ಲಿ ಕುಳಿತುಕೋ", ಕ್ರೌಂಚಾರೇ ಕುಶಲಂ? "ಕಾರ್ತಿಕೇಯನೇ ಕುಶಲವೇ?", ಸುಖಂ ಸುರಪತೇ "ಇಂದ್ರನೇ ಸುಖಿಯಾಗಿರುವೆಯಷ್ಟೇ ?", ವಿತ್ತೇಶ ನೋ ದೃಶ್ಯಸೇ "ಕುಬೇರ, ನೀನು ಕಾಣಿಸಿಯೇ

ಇಲ್ಲವಲ್ಲ", – (ಸ್ವಪ್ನದಲ್ಲಿ ಕೈಟಭಾರಿ ಆಡಿದ ಈ ಮಾತುಗಳನ್ನು ಕೇಳಿಸಿಕೊಂಡ ಯಶೋದೆಯು, "ಮಗು, ಇದೇನೇನು ಮಾತನಾಡುತ್ತಿರುವೆಯೋ" ಎಂದು ಅವನಿಗೆ ದೃಷ್ಟಿ ತೆಗೆದಳು). –ಸ್ವರ್ಗದ ದೇವತೆಗಳೆಲ್ಲಾ ಧರೆಗಿಳಿದು ಅವತರಿಸಿರುವ ಬಾಲಕೃಷ್ಣನಿಗೆ ತಮ್ಮ ಗೌರವವನ್ನು ಸಲ್ಲಿಸಲು ಬಂದಿದ್ದರು. ಕೃಷ್ಣನು ಅವರನ್ನು ಯಥೋಚಿತವಾಗಿ ಸ್ವಾಗತಿಸುತ್ತಿದ್ದನೆಂಬ ಸೂಚನೆ ಇಲ್ಲಿದೆ. ತಾಯಿ ಯಶೋದೆಯಾದರೋ ಮಗುವಿಗೆ ದೃಷ್ಟಿಯಾಗಿ ಈ ರೀತಿ ಕನವರಿಸುತ್ತಿದ್ದಾನೆಂದು ತಿಳಿದು ಅದನ್ನು ನಿವಾರಿಸುವ ಪ್ರಯತ್ನ ಮಾಡುತ್ತಾಳೆ).

೨. ಇನ್ನೊಮ್ಮೆ, ಅವನ ಮತ್ತು ತಾಯಿ ಯಶೋದೆಯ ನಡುವೆ ಜರುಗಿದ ಸಂಭಾಷಣೆಯನ್ನು ನೋಡೋಣ (೨.೫೯).

ಮಾತಃ "ತಾಯೇ !", ಕಿಂ ಯದುನಾಥ "ಏನು, ಯದುನಾಥ?", ದೇಹಿ ಚಸಕಂ "ಪಾತ್ರೆಯನ್ನು ಕೊಡು", ಕಿಂ ತೇನ "ಅದೇತಕ್ಕೆ?", ಪಾತುಂ ಪಯಃ "ಹಾಲು ಕುಡಿಯಲು", ತನ್ನಾಸ್ತ್ಯದ್ಯ "ಅದೀಗಿಲ್ಲವಲ್ಲ", ಕದಾಸ್ತಿ "ಯಾವಾಗ ಇರುತ್ತೇ", ನಿಶಿ "ರಾತ್ರಿ", ನಿಶಾ ಕಆ "ರಾತ್ರಿ ಅಂದರೆ ಏನು", ಅಂಧಕಾರೋದಯಃ "ಕತ್ತಲಾದಾಗ", ಆಮೀಲ್ಯಾಕ್ಷಿಯುಗಂ ನಿಶಾಪ್ಯುಪಗತಾ "ಎರಡು ಕಣ್ಣುಗಳನ್ನೂ ಮುಚ್ಚಿಕೊಂಡು, ರಾತ್ರಿ ಆಯಿತು", ದೇಹಿ "ಕೊಡು"–(ಹೀಗನ್ನುತ್ತಾ ತಾಯಿಯ ಸೆರಗನ್ನು ಎಳೆಯುತ್ತಿದ್ದ (ವಕ್ಷೋಜಾಂಶುಕಕರ್ಷಣೋದ್ಯತಕರಃ) ಬಾಲ ಕೃಷ್ಣನು ನಮ್ಮನ್ನು ಕಾಪಾಡಲಿ). – ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಚಂದ್ರಸೂರ್ಯರು ಭಗವಂತನ ಎರಡು ಕಣ್ಣುಗಳು. ಅವುಗಳನ್ನು ಮುಚ್ಚಿಕೊಳ್ಳುವುದರಿಂದ ಕತ್ತಲೆಯಾಗುವುದು ಸಹಜವೇ.

೩. ತಾಯಿಗೆ ಕೃಷ್ಣನ ಮೇಲೆ ದೂರು ಹೇಳುವ ಒಂದು ಪ್ರಸಂಗ ನೋಡಿ (೨.೬೪).

ಕೃಷ್ಣೇನಾಂಬ ಗತೇನ ರಂತುಂ ಅಧುನಾ ಮೃದ್ಭಕ್ಷಿತಾ ಸ್ವೇಚ್ಛಯಾ "ಅಮ್ಮ, ಇಂದು ಆಡಲು ಹೋದಾಗ ಕೃಷ್ಣನು ಇಷ್ಟಬಂದಂತೆ ಮಣ್ಣು ತಿಂದನು", ತಥ್ಯಂ ಕೃಷ್ಣ "ಕೃಷ್ಣ, ಇದು ನಿಜವೇ ?", ಕ ಎವಂ ಆಹ "ಯಾರು ಹೀಗಂದರು", ಮುಸಲೀ "ಬಲರಾಮ", ಮಿಥ್ಯಾಂಬ ಪಶ್ಯಾನನಂ "ಸುಳ್ಳಮ್ಮ ನೋಡು ಬಾಯನ್ನು", ವ್ಯಾದೇಹಿ "ಬಾಯಿ ತೆಗೆ", ವಿಸ್ತಾರಿತೇ ಶಿಶುಮುಖೇ ದೃಷ್ಟ್ವಾ ಸಮಸ್ತಂ ಜಗತ್ "ತೆರೆದ ಮಗುವಿನ ಬಾಯಲ್ಲಿ ಸಮಸ್ತ ಜಗತ್ತನ್ನೂ ನೋಡಿ"–(ಯಾರ ತಾಯಿಯು ವಿಸ್ಮಿತಳಾದಳೋ (ಮಾತಾ ಯಸ್ಯ ಜಗಾಮ ವಿಸ್ಮಯಪದಂ) ಆ ಕೇಶವನು ನಮ್ಮನ್ನು ರಕ್ಷಿಸಲಿ).

೪. ಮತ್ತೊಮ್ಮೆ, ಕೃಷ್ಣನನ್ನು ನಿದ್ರೆ ಮಾಡಿಸಲು ಯಶೋಧೆ ಕಥೆಯೊಂದನ್ನು ಹೇಳುತ್ತಿದ್ದ ಪ್ರಸಂಗವನ್ನು ನೋಡಿ (೨.೭೧).

ರಾಮೋ ನಾಮ ಬಭೂವ "ರಾಮನೆಂಬುವನು ಒಬ್ಬನಿದ್ದನು", ಹುಂ "ಹುಂ", ತದಬಲಾ ಸೀತೇತಿ ಅವನ ಹೆಂಡತಿ ಸೀತೆ ಎಂದು", ಹುಂ "ಹುಂ", ಪಿತುರ್ವಾಚಾ

ಪಂಚವಟೀತಟೇ ವಿಹರತಃ "ತಂದೆಯ ಮಾತಿನಂತೆ ಪಂಚವಟಿಯಲ್ಲಿ ವಿಹರಿಸುತ್ತಿದ್ದಾಗ", ತಸ್ಯಾಹರನ್ ರಾವಣಃ "ಅವಳನ್ನು ರಾವಣನು ಅಪಹರಿಸಿದನು", ಹುಂಕಾರತಃ ಶೃಣ್ವತಃ ಹರೇಃ "ಹುಂ ಎನ್ನುತ್ತಾ ಕೇಳಿಸಿಕೊಳ್ಳುತ್ತಿದ್ದ ಕೃಷ್ಣನ", ಸೌಮಿತ್ರೇ ಕ್ವ ಧನುರ್ ಧನುಃ "ಲಕ್ಷ್ಮಣ, ಧನುಸ್ಸೆಲ್ಲಿ, ಧನುಸ್ಸು, ಧನುಸ್ಸು"–(ಎಂದ ವ್ಯಗ್ರಾಗಿರಃ ಉದ್ವಿಗ್ನಗೊಂಡವನ ವಾಕ್ಕು ನಮ್ಮನ್ನು ಕಾಪಾಡಲಿ).

೫. ಇನ್ನೊಂದು ದಿನ ಗೋಪಿಯೊಬ್ಬಳ ಮನೆಯಲ್ಲಿ ಬೆಣ್ಣೆಯನ್ನು ಕದಿಯುತ್ತಿದ್ದಾಗ ಸಿಕ್ಕಿಬಿದ್ದ ಕೃಷ್ಣನಿಗೂ ಗೋಪಿಗೂ ನಡೆದ ಸಂಲಾಪವನ್ನು ಗಮನಿಸಿ (೨.೮೧).

ಕಸ್ತ್ವಂ ಬಾಲ "ಮಗು, ನೀನಾರು ?", ಬಲಾನುಜಃ "ಬಲರಾಮನ ತಮ್ಮ", ಕಿಮಿಹ ತೇ "ಇದೇನು ನೀನಿಲ್ಲಿ", ಮನ್ಮಂದಿರಾ ಶಂಕಯಾ "ನಮ್ಮ ಮನೆಯೆಂದುಕೊಂಡು", ಯುಕ್ತಂ ತನ್ನವನೀತಪಾತ್ರವಿವರೇ ಹಸ್ತಂ ಕಿಮರ್ಥಂ ನ್ಯಸೇಃ "ಸರಿ, ಅಬೆಣ್ಣೆಯ ಪಾತ್ರೆಯೊಳಗಡೆ ಏಕೆ ಕೈ ಹಾಕಿರುವೆ", ಮಾತಃ ಕಂಚನ ವತ್ಸಕಂ ಮೃಗಯಿತುಂ "ತಾಯೇ, (ಕಳೆದುಹೋಗಿರುವ) ಕರುವೊಂದನ್ನು ಹುಡುಕಲು", ಮಾ ಗಾ ವಿಷಾದಂ ಕ್ಷಣಾತ್ "ಅದಕ್ಕಾಗಿ, ಒಂದು ಕ್ಷಣವೂ ದುಃಖಿಸಬೇಡ" (ಹೀಗೆಂದ ಅವಳ ಮತ್ತು ಕೃಷ್ಣನ ಈ ಸಂಲಾಪವು ನಮ್ಮನ್ನು ಕಾಪಾಡಲಿ). –ಸಾಧಕನೊಬ್ಬನು ತನ್ನ ಹೃದಯಕುಹರದಲ್ಲೇ ಇರುವ ಭಗವಂತನೊಡನೆ ನಡೆಸುವ ಸಂಲಾಪದ ಸೂಚನೆ ಇಲ್ಲಿದೆ.

೬. ಗೋಪಿಯೊಬ್ಬಳ ಮತ್ತು ಕೃಷ್ಣನ ನಡುವಣ ಚಮತ್ಕಾರವಾದ ಸಂಲಾಪವನ್ನು ನೋಡಿ (೩.೧೦೫).

ಅಂಗುಳ್ಯಾ ಕಃ ಕವಾಟಂ ಪ್ರಹರತಿ? "ಬೆರಳಿನಿಂದ ಯಾರು ಬಾಗಿಲನ್ನು ತಟ್ಟುತ್ತಿರುವವರು?"

| | |
|---|---|
| ಕುಟಿಲೇ ! ಮಾಧವಃ | "ತುಂಟಹುಡುಗಿ ! (ನಾನು) ಮಾಧವ" |
| ಕಿಂ ವಸಂತಃ | "ಏನು ವಸಂತನೇ ?" |
| ನೋ ಚಕ್ರೀ | "ಅಲ್ಲ, ಚಕ್ರವನ್ನು ಹಿಡಿದಿರುವವನು" |
| ಕಿಂ ಕುಲಾಲಃ | "ಏನು, ಮಡಕೆಮಾಡುವವನೇ ?" |
| ನಹಿ ಧರಣೀಧರಃ | "ಅಲ್ಲ, ಭೂಮಿಯನ್ನು ಹೊತ್ತಿರುವವನು" |
| ಕಿಂ ದ್ವಿಜಿಹ್ವಃ ಫಣೀಂದ್ರಃ | "ಏನು, ಎರಡುನಾಲಗೆಯ ನಾಗರಾಜನೇ ?" |
| ನ ಅಹಂ ಘೋರಾಹಿಮರ್ದೀ | "ಅಲ್ಲ, ನಾನು ದುರುಳ ಕಾಳಿಂಗಸರ್ಪವನ್ನು ಮರ್ದಿಸಿದವನು" |
| ಕಿಮಸಿ ಖಗಪತಿಃ | (ಹಾಗಾದರೆ) ನೀನು ಗರುಡನೇ ?" |

| | |
|---|---|
| ನೋ ಹರಿಃ | "ಅಲ್ಲ, (ನಾನು) ಹರಿ" |
| ಕಿಂ ಕಪೀಂದ್ರಃ | "ಏನು, ಕಪಿರಾಜನೇ ?" |

ಈ ರೀತಿ ಗೋಪಿಯೊಬ್ಬಳ ಪ್ರಶ್ನೆಗಳಿಂದ ಪರಾಜಿತನಾದ ಚಕ್ರಪಾಣಿಯು ನಿಮ್ಮನ್ನು ಕಾಪಾಡಲಿ. ಇಲ್ಲಿ ಪದಗಳಿಗೆ ಎರಡು ಅರ್ಥಗಳಿದ್ದು ಒಬ್ಬೊಬ್ಬರು ಒಂದೊಂದನ್ನು ಗ್ರಹಿಸಿ ಉತ್ತರಿಸಿದ್ದಾರೆ.

೭. ರಾಧೆಯ ಮನೆಯಿಂದ ಹೊರಬರುತ್ತಿದ್ದ ಕೃಷ್ಣ ಮತ್ತು ಚಂದ್ರಾವಳಿಯೆಂಬ ಇನ್ನೊಬ್ಬ ಗೋಪಿಯ ನಡುವೆ ನಡೆದ ಸ್ವಾರಸ್ಯವಾದ ಪ್ರಶ್ನೆ–ಉತ್ತರವನ್ನು ಗಮನಿಸಿ (೩.೧೦೬).

| | |
|---|---|
| ರಾಧಾಮೋಹನಮಂದಿರಾದುಪಾಗತಃ | "ರಾಧೆಯ ಆಕರ್ಷಕವಾದ ಮನೆಯಿಂದ ಹೊರಬಿದ್ದ ಕೃಷ್ಣನು" |
| ಚಂದ್ರಾವಳೀಂ ಊಚಿವಾನ್ | "ಚಂದ್ರಾವಳಿಯನ್ನು ಕುರಿತು ಹೀಗೆಂದನು" |
| ರಾಧೇ ಕ್ಷೇಮಮಯೇಸ್ತಿ | "(ರಾಧೆಯಪ್ರೇಮದಲ್ಲಿ ಇನ್ನೂ ತೇಲಾಡುತ್ತಿದ್ದ ಕೃಷ್ಣನು), ರಾಧೇ ಕುಶಲವೆ" (ಎಂದನು) |
| ತಸ್ಯ ವಚನಂ ಶ್ರುತ್ವಾಹ ಚಂದ್ರಾವಳೀ | "ಅವನ ಮಾತನ್ನು ಕೇಳಿ ಚಂದ್ರಾವಳೀ ಹೇಳಿದಳು" |
| ಕಂಸ ಕ್ಷೇಮಮಯೇ | "ನೀನು ಕ್ಷೇಮವೇ, ಕಂಸ ?" |
| ವಿಮುಗ್ಧಹೃದಯೇ ಕಂಸಃ ಕ್ವ ದೃಷ್ಟಸ್ತ್ವಯಾ | "ಎಲೈ ಮುಗ್ಧೇ, ಕಂಸನೆಲ್ಲಿ ನಿನಗೆ ಕಾಣಿಸಿದವನೇ?" |
| ರಾಧಾ ಕ್ವ | "ರಾಧೆಯೆಲ್ಲಿ (ನಿನಗೆ ಕಾಣಿಸಿದಳು ?" |
| ವಿಲಜ್ಜಿತಃ ನತಮುಖಃ | "ನಾಚಿಕೆಯಿಂದ ತಲೆತಗ್ಗಿಸಿದ" |
| ಸ್ಮೇರೋ ಹರಿಃ ಪಾತು ವಃ | "ನಸುನಗೆಯ ಹರಿಯು ನಿಮ್ಮನ್ನು ಕಾಪಾಡಲಿ". |

೮. ವಟಪತ್ರಶಾಯಿಯಾದ ಬಾಲಕೃಷ್ಣನನ್ನು ನೋಡದವರಾರು. ಈ ಚಿತ್ರ ಸಾಮಾನ್ಯವಾಗಿ ಹಳೇತಲೆಯವರ ಮನೆಗಳಲ್ಲಿ ಈಗಲೂ ಕಾಣಸಿಗುತ್ತದೆ. ಅದರ ವರ್ಣನೆಯನ್ನು ಕವಿ ಹಈಗೆ ಮಾಡಿದ್ದಾನೆ (೨.೫೭).

| | |
|---|---|
| ಕರಾರವಿಂದೇನ | "ಕಮಲದಂತಿರುವ ಕೈಗಳಿಂದ" |
| ಪದಾರವಿಂದಂ | "ತಾವರೆಯಂತಿರುವ ಕಾಲುಗಳನ್ನು" |
| ಮುಖಾರವಿಂದೇ | "ತನ್ನ ಮುಖಕಮಲದಲ್ಲಿ" |

ವಿನಿವೇಶಯಂತಮ್ "ತುಂಬಿಕೊಳ್ಳುತ್ತಿದ್ದ"

ವಟಸ್ಥ ಪತ್ರಸ್ಯ ಪುಟೇ ಶಯಾನಂ "ಆಲದ ಎಲೆಯೊಂದರ ಮೇಲೆ ಮಲಗಿರುವ"

ಬಾಲಂ ಮುಕುಂದಂ "ಬಾಲಕೃಷ್ಣನನ್ನು"

ಮನಸಾ ಸ್ಮರಾಮಿ "ಮನಸ್ಸಿನಲ್ಲಿ ಧ್ಯಾನಿಸುತ್ತೇನೆ", – ವಟಪತ್ರವು ಪ್ರತಿವ್ಯಕ್ತಿಯ ಹೃದಯವನ್ನು ಸೂಚಿಸುತ್ತದೆ. ಭಗವಂತ ಅಲ್ಲಿ ತನ್ನ ಆವಾಸವನ್ನು ಮಾಡಿಕೊಂಡಿದ್ದಾನೆ. ಮುಕ್ತಿ ನೀಡುವವನೇ ಮುಕುಂದ. ಮಗುವು ತನ್ನ ಕಾಲ ಹೆಬ್ಬೆರಳನ್ನು ಬಾಯೊಳಗಿಟ್ಟುಕೊಳ್ಳುವುದು ಸಾಮಾನ್ಯವಾಗಿ ಕಂಡುಬರುವ ದೃಶ್ಯ. ಇಲ್ಲಿ ಕೈ ಕರ್ಮಯೋಗವನ್ನೂ, ಕಾಲು ಭಕ್ತಿಯೋಗವನ್ನೂ, ಮುಖವು ಜ್ಞಾನಯೋಗವನ್ನೂ ಪ್ರತಿನಿಧಿಸುತ್ತವೆ. ಅವುಗಳೆಲ್ಲದರ ಲಕ್ಷ್ಯವೂ ಒಂದೇ. ಮೂರು ಕಮಲಗಳೂ ಬ್ರಹ್ಮಾನಂದದಲ್ಲಿ ಲೀನವಾಗಿ ಹೋಗುತ್ತವೆ. ಇದೇ ಇಲ್ಲಿ ಸೂಚಿತವಾಗಿರುವುದು.

೯. ಸಂಗೀತಪ್ರಿಯರಿಗಿಷ್ಟವಾದ ಈ ಶ್ಲೋಕದಲ್ಲಿ ಕವಿ ಕೃಷ್ಣನನ್ನು ಚಿತ್ರಿಸಿರುವುದನ್ನು ನೋಡಿ (೨.೧೦೮).

ಕಸ್ತೂರೀತಿಲಕಂ ಲಲಾಟಫಲಕೇ "ಹಣೆಯಲ್ಲಿ ಕಸ್ತೂರಿಯ ತಿಲಕ".

ವಕ್ಷಸ್ಥಲೇ ಕೌಸ್ತುಭಂ "ಎದೆಯ ಮೇಲೆ ಕೌಸ್ತುಭಮಣಿ",

ನಾಸಾಗ್ರೇ ನನಮೌಕ್ತಿಕಂ "ಮೂಗಿನ ತುದಿಯಲ್ಲಿ ಹೊಳೆಯುವ ಹೊಸಮುತ್ತಿನ ಪದಕ",

ಕರತಲೇ ವೇಣುಂ "ಕೈಯಲ್ಲಿ ಕೊಳಲು",

ಕರೇ ಕಂಕಣಂ "ಮುಂಗೈಯಲ್ಲಿ (ಯಶೋದೆ ರಕ್ಷೆಗಾಗಿ ಕಟ್ಟಿರುವ) ಕಂಕಣ",

ಸರ್ವಾಂಗೇ ಹರಿಚಂದನಂ "ಶರೀರದಲ್ಲೆಲ್ಲಾ ಲೇಪಿಸಿದ ಶ್ರೀಗಂಧ",

ಕಂಠೇ ಚ ಮುಕ್ತಾವಲಿಂ "ಕೊರಳಲಲಿ ಮುತ್ತಿನಸರ",

ಗೋಪಸ್ತ್ರೀ ಪರಿವೇಷ್ಟಿತಃ "ಗೋಪಿಯರಿಂದ ಸುತ್ತುವರಿಯಲ್ಪಟ್ಟ",

ವಿಜಯತೇ ಗೋಪಾಲಚೂಡಾಮಣಿಃ "ಗೋಪಾಲಕರ ಚೂಡಾಮಣಿಯಂತಿರುವ ಕೃಷ್ಣನು ವಿರಾಜಿಸುತ್ತಾನೆ".

ಇವೇ ಅಲ್ಲದೇ, ರಾಸಲೀಲೆಯ ವರ್ಣನೆ, ಭಕ್ತಿಪ್ರಧಾನ ಪದ್ಯಗಳು, ಆಧ್ಯಾತ್ಮಿಕ ಸಂದೇಶ ನೀಡುವ ಪದ್ಯಗಳು ಸಾಕಷ್ಟಿವೆ. ರಸಿಕರು ಓದಿ ಕಾವ್ಯಾನಂದವನ್ನು ಅನುಭವಿಸಬೇಕಲ್ಲದೆ, ಅದನ್ನು ಇತರರ ವರ್ಣನೆಯಿಂದ ತಿಳಿದು ಆನಂದಿಸುವುದು ಸಾಧ್ಯವಿಲ್ಲ.

■

# ಟಿ.ಪಿ. ಕೈಲಾಸಂ ಅವರ 'ಟೊಳ್ಳು-ಗಟ್ಟಿ'ಯಲ್ಲಿ ಆಧುನಿಕ ಶಿಕ್ಷಣ ಕ್ರಮದ ವಿಡಂಬನೆ

◆

ಎಚ್.ಎನ್. ಮುರಳೀಧರ

ನಮ್ಮ ಸಮಾಜದ ಓರೆಕೋರೆಗಳನ್ನು ವಿಡಂಬನೆಯ ಆಯಾಮದಿಂದ ಕಂಡವರು ಟಿ.ಪಿ. ಕೈಲಾಸಂ. ಅವರ 'ಟೊಳ್ಳು-ಗಟ್ಟಿ' (ರಚನೆ : ೧೯೧೮) ಕೂಡ ಇದೇ ಉದ್ದೇಶವನ್ನೇ ಹೊಂದಿದೆ. ಅವರೇ ಹೇಳುವಂತೆ ಈ ನಾಟಕ 'ವಿದ್ಯಾಭ್ಯಾಸದ್ವಿಷಯದ್ದು'. ಮನೆಯೊಂದರ ಆಗುಹೋಗುಗಳನ್ನು ಕೇಂದ್ರವಾಗಿರಿಸಿಕೊಂಡು ಆ ಮೂಲಕ ಸಮಾಜದಲ್ಲಿ ಪ್ರಚಲಿತವಿರುವ ಶಿಕ್ಷಣ ಕ್ರಮದ ಸಾರ್ಥಕತೆಯನ್ನು ವಿಮರ್ಶಿಸುವ ಕೆಲಸವನ್ನು ಈ ನಾಟಕ ಮಾಡುತ್ತದೆ. ಇಲ್ಲೊಂದು ಪಲ್ಲಟವಿರುವುದನ್ನೂ ನಾವು ಗಮನಿಸದಿರುವಂತಿಲ್ಲ. ಶಿಕ್ಷಣದ ಸ್ಥಿತಿಗತಿಗಳ ಬಗೆಗೆ ಆಲೋಚಿಸುವಾಗ ಸಾಮಾನ್ಯವಾಗಿ ಶಾಲೆ ಕೇಂದ್ರಸ್ಥಾನಕ್ಕೆ ಬರುತ್ತದೆ. ಶಾಲೆಯ ಮೂಲಕವಾಗಿ ಸಮಾಜವನ್ನೂ, ಅಗತ್ಯವಿದ್ದರೆ ಆ ಮೂಲಕ ಮನೆಯನ್ನೂ ಗ್ರಹಿಸಲು ಪ್ರಯತ್ನಿಸುವುದು ಸಾಮಾನ್ಯವಾಗಿ ರೂಢಿಯಲ್ಲಿರುವ ಕ್ರಮ. ಆದರೆ ಮನೆಯ ಮೂಲಕ ಶಾಲೆಯನ್ನು ನೋಡುವುದೆಂದರೆ ಮನುಷ್ಯನ ಮೂಲಕ ಶಿಕ್ಷಣವನ್ನು ನೋಡಿದಂತೆಯೇ ಸರಿ.

ಈ ಮಾತನ್ನು ಹೇಳಬೇಕಾದ ಅಗತ್ಯವೇನೆಂದರೆ ಇಂದು ಶಿಕ್ಷಣಕ್ಕೆ ಮನುಷ್ಯ ಸಿದ್ಧವಸ್ತುವಾಗಿ ಪರಿಣಮಿಸಿಬಿಟ್ಟಿದ್ದಾನೆ. ಇಂತಹ ಮನುಷ್ಯನಿಗೆ ಸರಕನ್ನು ಉತ್ಪಾದಿಸುವ ಕಾರ್ಖಾನೆಗಳಾಗಿ ಶಿಕ್ಷಣ ಕೇಂದ್ರಗಳು ಹೆಚ್ಚು ವಾಸ್ತವವಾಗುತ್ತಿದೆ. ವಿದ್ಯಾರ್ಥಿಗಳನ್ನು ಗ್ರಾಹಕರನ್ನಾಗಿಯೂ ಶಾಲೆಗಳನ್ನು ಮಾರುಕಟ್ಟೆಗಳನ್ನಾಗಿಯೂ ಮಾಡುವ ಈ ವ್ಯವಸ್ಥೆಯಲ್ಲಿ ಬಂಡವಾಳವೇ ಯಜಮಾನನಾಗುವುದು ಅತ್ಯಂತ ವಾಸ್ತವವೂ ಹೌದು. ಇಂತಹ ಸನ್ನಿವೇಶದ ಪರಿಣಾಮಗಳನ್ನು 'ಟೊಳ್ಳು-ಗಟ್ಟಿ' ಅನಾವರಣಗೊಳಿಸುತ್ತದೆ.

ಇಲ್ಲಿ ಬರುವ ಯಜಮಾನನಾದ ಹಿರಿಯಣ್ಣಯ್ಯನಿಗೆ ಇಬ್ಬರು ಮಕ್ಕಳು-ಪುಟ್ಟು ಮತ್ತು ಮಾಧು. ತಾನಾಯಿತು, ತನ್ನ ಓದಾಯಿತು ಎಂದು ಪ್ರತಿಯೊಂದು ಪರೀಕ್ಷೆಯಲ್ಲೂ 'ರ್‍ಯಾಂಕ್‌ಗಳನ್ನು ಸಿಗಿಯುತ್ತ' ಸ್ವಾರ್ಥಿಯಾಗಿರುವವನು ಪುಟ್ಟು ; ಕಾಯಿಲೆ ಬಿದ್ದಿರುವ

ತನ್ನ ತಾಯಿಗೂ ಸಮಾಜದ ಇತರರಿಗೂ ನೆರವಾಗುತ್ತ, ಆ ಕಾರಣಕ್ಕಾಗಿ ಓದಲು ಅವಕಾಶವಾಗದೆ ಫೇಲಾಗುತ್ತಿರುವವನು ಮಾಧು. ಪುಟ್ಟುವಿಗೆ ಸಿಗುತ್ತಿರುವುದು ತಂದೆ ಹಿರಿಯಣ್ಣಯ್ಯನ ಪ್ರೋತ್ಸಾಹ-ಬೆಂಬಲ ; ತಂದೆಯಿಂದ ಅವಹೇಳನಕ್ಕೆ ಒಳಗಾದ ಮಾಧುವಿಗೆ ಮಾರ್ಗದರ್ಶನ ತಾಯಿ ಭಾಗೀರಥಮ್ಮನ ವಿವೇಕದ ಮಾತುಗಳು. 'ನಾವು ಈ ಭೂಮೀಲಿ ಜೀವಿಸೋಕೆ ದೇವರಿಗೆ ಕೊಡೋ ಬಾಡಿಗೆ ಅಂದ್ರೆ ಸುತ್ತಮುತ್ತಲೂ ಜನರಿಗೆ ಉಪಯೋಗವಾಗಿರೋದೇ' ಎಂಬ ಆಕೆಯ ಮಾತುಗಳು ಮಾಧುವಿಗೆ ವೇದವಾಕ್ಯ. ಮನೆಗೆ ಬೆಂಕಿ ಬಿದ್ದಾಗ ಪುಟ್ಟು ಜೋಪಾನವಾಗಿ ಪುಸ್ತಕಗಳನ್ನು ಎತ್ತಿಕೊಂಡು ಓಡಿಹೋಗುತ್ತಾನೆ ; ಮಾಧು ತನ್ನ ಪ್ರಾಣವನ್ನೇ ಒತ್ತೆಯಿಟ್ಟು ಬೆಂಕಿಯಲ್ಲಿ ನುಗ್ಗಿ ಕುಟುಂಬವನ್ನು ರಕ್ಷಿಸುತ್ತಾನೆ.

ಕೈಲಾಸಂ ಅವರ ಈ ನಾಟಕವನ್ನು ಆಧುನಿಕ ಸಂದರ್ಭದ 'ಅಗ್ನಿಪರೀಕ್ಷೆ'ಯ ರೂಪಕವಾಗಿಯೂ ಗ್ರಹಿಸಲು ಸಾಧ್ಯವಿದೆ. ಕೂಡಿಸಬೇಕಾದ ಶಿಕ್ಷಣ ಇಲ್ಲಿ ಮನೆಯನ್ನೂ ಮನುಷ್ಯರನ್ನೂ ಒಡೆಯುತ್ತಿದೆ. ಮನುಷ್ಯರ ನಡುವೆ ತಾರತಮ್ಯವನ್ನೂ ಶ್ರೇಣೀಕರಣವನ್ನೂ ಉಂಟು ಮಾಡಿದೆ. ಶಿಕ್ಷಣವನ್ನು ಹೂಡುವ ಬಂಡವಾಳವಾಗಿಯೂ ಹಿಂಪಡೆಯುವ ಲಾಭವಾಗಿಯೂ ಗ್ರಹಿಸಿದಾಗ ಉಂಟಾಗುವ ಅನಾಹುತಗಳ ಬಗೆಗೆ ನಾಟಕ ಬೆಳಕು ಚೆಲ್ಲುತ್ತದೆ. ಇನ್ನು ನಾಟಕದ 'ಉತ್ತರರಂಗ'ದಲ್ಲಿ ನಾಟಕಕಾರನ ಪ್ರತಿನಿಧಿಯಾಗಿ ಗುಂಡೂರಾಯನು ಮಾಡುವ 'ಲೆಕ್ಚ್ರು' (Lecture) ಆಧುನಿಕ ಶಿಕ್ಷಣ ಕ್ರಮದ ಮೇಲಿನ ನೂತನ ಭಾಷ್ಯವೆಂದೇ ಹೇಳಬೇಕು.

> ಈ ಲೆಕ್ಚ್ರು...ವಿದ್ಯಾಭ್ಯಾಸದ್ವಿಷಯದ್ದು : ವಿದ್ಯಾಭ್ಯಾಸಕ್ರಮಗಳ್ಳು, ಅವುಗಳ ಪ್ರಯೋಜ್ನಗಳು, ಮಹಿಮೆಗಳು, ಇವುಗಳಲ್ಲೆಲ್ಲಾ ನಂಗೆ ಬಹು ಪರಿಶ್ರಮವುಂಟು. ಅದ್ರಲ್ಲೂ ಈಗ ನಮ್ದೇಶ್ದಲ್ಲಿ ಇಂಗ್ಲೀಷು ವಿದ್ಯಾಭ್ಯಾಸಕ್ರಮಾಂತ್ಹೆಸರಿಟ್ಕೊಂಡು ಜರಿಗಿಸ್ತಾ ಇದ್ದೇವಲ್ಲಾ....ಆ ಕ್ರಮಾನ ಹೋಳ್ಹೋಳಾಗಿ ಹೆಚ್ಚಿ ಉಪ್ಪಿನಕಾಯ್ಹಾಕಿಟ್ಟಿದ್ದೇನೆ.-ಜಾಡೀ ಪಕ್ದಲ್ಲಿಟ್ಕೊಂಡೇ ಮಾತಾಡ್ತಿದೇನು! ಈಗಿನ್ಕಾಲ್ದಲ್ಲಿ ನಮ್ಮನೆಗ್ಳಲ್ಲಿ ಗಂಡ್ಮಗೂ ಹುಟ್ಟುತ್ಲೂನೂವೇ ಪಂಚಾಕ್ಷರೀಜಪ ಒಂದು ಪ್ರಾರಂಭಿಸಿಬಿಡ್ತೇವು... ಮುಂ...ದ...ಕ್ಬ...ರ್ಬೇ...ಕು ಮುಂದಕ್ಬರ್ಬೇಕೂ ಅಂತ...ಮುಂದಕ್ಬರ್ಬೇಕೂ ಅಂದ್ರೇನೋ ದೇವರ್ಗೇ ಬೆಳ್ಳಂಬೆಳಕು. ಆ ಮಗನ್ನೋ ಎಂಟು ವಯಸ್ಸಾಗೋವರಿಗೂನೂ ಈ ಜಪ್ದಲ್ಲಿ ಅದ್ದೀ ಅದ್ದೀ ನೆನಸಿ. ಓದಿ ಪ್ಯಾಸ್ಮಾಡೋಕೆ ಸ್ಕೂಲಿಗೆ ಸಾಗಿಸಿಬಿಡ್ತೇವು.... ಸ್ಕಾಲ್ನಲ್ಲಿ...ನಮ್ಹುಡುಗರು ಓದೋದೇನು?...ಪ್ಯಾಸ್ಮಾಡೋದಂದ್ರೇನು?...ಇವುಗಳ್ನೆಲ್ಲಾ ತಪ್ಸೀಲಾಗಿ ವಿವರಿಸ್ತೇನು ಲಾಲಿಸ್ಬೇಕು...ಸ್ಕೂಲಿನಲ್ಲಿ ಮೇಸ್ಟ್ರುಗಳು-(ಆತ್ಮಗತಂ) ಸರ್ವಜ್ಞರು ! ಲೇವಡಿಗೇ ಲಾಯಕ್ಕು! (ಪ್ರಕಾಶಂ) ಚೀನಾದೇಶದ ಚರಿತ್ರೆ ! ಜಾರ್ಜಿಯಾದ ಜನಸಂಖ್ಯೆ ! ಸೈಬೀರಿಯಾದ ಸಸ್ಯಾದಿಗಳು ! ಅಬ್ಸೀನಿಯಾದ ಆಭರಣಗಳು !...ಇವೇ ಮುಂತಾದ, ನಮ್ಹುಡುಗಳಿಗೆ ಖುದ್ದು ಉಪಯೋಗವಾಗುವ ವಿಷಯಗಳ್ನ ವರ್ಷದ ಹನ್ನೆರಡ್ತಿಂಗಳಲ್ಲಿ ಹನ್ನೊಂದು ತಿಂಗ್ಳು ಜಜ್ಜೀ, ಜಜ್ಜೀ, ತುರುಕಿ...ಈ ಅಮೋಘವಾದ ವಿಚಾರಗಳು ಮಕ್ಕಳ ಮನಸ್ಸಿಗೆ ನಾಟಿಧೆಯೋ ಇಲ್ವೋ ಶಂಕೆ ಹುಟ್ಟಿ' ಅದು ಪರಿಹಾರ್ವಾಗೋದಕ್ಕೆ ಪರೀಕ್ಷೆ ಅಂತಿಡ್ತಾರೆ ಹನ್ನೆರಡ್ನೇ ತಿಂಗ್ಳಲ್ಲಿ !...ಆ ಹಿಂದಿನ್ಹನ್ನೊಂದು ತಿಂಗಳೂ...ಜಜ್ಜಿ ಜಜ್ಜೀ ಕುತ್ಗೇವರೆಗೂ ತುರಕ್ಕೊಂಡ ಸಮಾಚಾರಗಳ್ನೆಲ್ಲಾ...ಆ ಮೂರು ಘಂಟೆಗಳೊಳಗೆ ಈ ಬರೀ ಕಾಗದಗಳ್ಮೇಲೆ ಬಕಬಕ ಬಕಾಸುರನ್ಹಾಗ್ವಾಂತಿ ಮಾಡ್ಬಿಡ್ತಾನೆ! ಎಷ್ಟಕ್ಕೆಷ್ಟು ವಾಂತೀಮಾಡ್ತಾನೋ ಅಷ್ಟಕ್ಕಷ್ಟು ಗಟ್ಟಿಗಾಂತ್ಹೇಸ್ರು ! ಇದೇ ಫಸ್ಟ್ ಕ್ಲಾಸ್ ಅನ್ನೋದು!... ಈ ಇಲಾಖೆಗೆ ಸೇರಿದೋನೇ ಈ ನಾಟಕದಲ್ಲಿರೋ ಪುಟ್ಟು! ಇದೇ ಈ ಕಾಲ್ದಲ್ಲಿ ನಾವನುಸರಿಸಿರೋ

ವಿದ್ಯಾಭ್ಯಾಸದ ಗುಟ್ಟು! ಹೇಳ್ತೀನೇ. ನಮ್ಹುಡುಗರ ಸ್ವಭಾವಾ ಅಂಬೋ...ಭಾವೀಲಿ, ಮನೇಲಿ ಜನ್ಮಾರಭ್ಯ ಜಪಿಸಿದ ಪಂಚಾಕ್ಷರಿ ಫಲದಿಂದ ಗುಣಗಳು ಅಂಬೋ ಬಿಂದಿಗೆ ತಂಬಿಗೆಗಳಿದ್ದದ್ದಲ್ದೇ...ಇವರನುಸರಿಸೋ ಇಂಗ್ಲೀಷು ವಿದ್ಯಾಭ್ಯಾಸಕ್ರಮಾ ಅಂಬೋ ಪಾತಾಳಗರಡೀಗೆ ಕೊಂಡಿಗ್ಳೇ ಇಲ್ಲ. ಇಂಥಾ ವಿದ್ಯಾಭ್ಯಾಸ ಕ್ರಮದ ಅನುಸರಣೆಯಿಂದ ನಮ್ಮ ದೇಶಕ್ಕಾಗೋಫಲ ಏನೂಂತ್ಕೇಳಿದ್ರೆ....ನಮ್ಮ ಪಾಠಶಾಲೆಗಳೆಲ್ಲಾ ಪುಟ್ಟೂಗಳ್ನ ತಯಾರ್ಮಾಡೋ ಕಾರ್ಖಾನೆಗಳಾಗಿ ಹೋಗಿವೆ.

'ಟೊಳ್ಳು-ಗಟ್ಟಿ'ಯ 'ಉತ್ತರರಂಗ'ದ ಗುಂಡೂರಾಯನ ಭಾಷಣದ ಮೂಲಕ ಕೈಲಾಸಂ ಆಧುನಿಕ ವಿದ್ಯಾಭ್ಯಾಸದ ಬಗೆಗೆ ಕೆಲವು ಮುಖ್ಯವಾದ ಪ್ರಶ್ನೆಗಳನ್ನು ಎತ್ತುತ್ತಾರೆ. ಅವು ವಿದ್ಯಾಭ್ಯಾಸದ ಗುರಿ, ಬೋಧನೆಯ ಕ್ರಮ ಹಾಗೂ ಪರೀಕ್ಷಾ ಪದ್ಧತಿಗಳಿಗೆ ಮುಖ್ಯವಾಗಿ ಸಂಬಂಧಪಟ್ಟವು. ಕೈಲಾಸಂ ಅವರ ಪ್ರಕಾರ 'ನಮ್ಮಕ್ಕಳ ಸ್ವಭಾವದಲ್ಲಿರುವ ಗುಣಗಳನ್ನು ಹೊರಕ್ಕೆ ಸೆಳೆಯುವ ವಿದ್ಯಾಭ್ಯಾಸ ಕ್ರಮವೊಂದನ್ನೇರ್ಪಡಿಸಿಕೊಂಡು ಅದನ್ನನುಸರಿಸಿದ್ರೇನೇ ನಮ್ಮ ದೇಶದೇಳಿಗೆ'. ಇಲ್ಲಿ ಶಿಕ್ಷಣವನ್ನು ವ್ಯಕ್ತಿಗತ ಹಾಗೂ ಸಾಮುದಾಯಿಕ ಹೀಗೆ ಎರಡೂ ಆಯಾಮಗಳಿಲ್ಲಿ ನೋಡಿರುವುದನ್ನು ಗಮನಿಸಬೇಕು. ಆದರೆ ಇಂದು ಶಿಕ್ಷಣದ ವ್ಯಕ್ತಿಗತ ಆಯಾಮ ಕೇವಲ ಅದರ ವಿಪರ್ಯಾಸದ ಅರ್ಥದಲ್ಲಿ ವಾಸ್ತವಾಗುತ್ತಿರುವುದನ್ನು ಕೈಲಾಸಂ ಗಮನಿಸುತ್ತಾರೆ. ಇದನ್ನು ಅವರು "ಮುಂ..ದ...ಕ್ಬ...ರ್ಬೇ...ಕು' ಎಂಬ 'ಪಂಚಾಕ್ಷರೀ ಜಪ'ದಲ್ಲಿ ಹಿಡಿದಿಟ್ಟಿದ್ದಾರೆ. ಆಧುನಿಕ ಸಂದರ್ಭದಲ್ಲಿ ಶಿಕ್ಷಣವೆನ್ನುವುದು ನಮ್ಮ ದೇಶದ ಬಹುಸಂಖ್ಯಾತ ಕೆಳವರ್ಗದವರಿಗೆ ಮುಂದೆ ಬರುವ ಹೊಸ ಸಾಧ್ಯತೆಗಳನ್ನು ತೆರೆಯಿತೆಂಬುದನ್ನು ನಾವು ಮರೆಯುವಂತಿಲ್ಲ. ಆದರೆ ಇಲ್ಲಿ ಕೈಲಾಸಂ ಗುರುತಿಸುತ್ತಿರುವ ಸಂದರ್ಭ ವಿಶಿಷ್ಟವಾದುದು. ಇಲ್ಲಿ ಸಮಾಜದ ಪ್ರಗತಿಯ ವ್ಯಕ್ತಿಯ ಪ್ರಗತಿ ಎನ್ನುವುದಿಲ್ಲ ; ಬದಲಿಗೆ ಸಮಾಜದ ಪ್ರಗತಿಯೊಂದಿಗೆ ಸ್ಪರ್ಧಿಸಿ ವ್ಯಕ್ತಿಯ ಪ್ರಗತಿಯನ್ನು ಸ್ಥಾಪಿಸಲಾಗುತ್ತಿದೆ. ಹೀಗಾಗಿ ಈ ಶೈಕ್ಷಣಿಕ ಪ್ರಕ್ರಿಯೆಯ ಆಂತರ್ಯದಲ್ಲಿಯೇ ಮೂಲಭೂತವಾಗಿ ತನ್ನ ಹಿತವೂ ಸಮಾಜದ ಹಿತವೂ ಪರಸ್ಪರ ವ್ಯಾವರ್ತಕಗಳೆಂಬ ಗ್ರಹಿಕೆ ಅಂತರ್ಗತವಾಗಿದೆ. ಆದ್ದರಿಂದಲೇ ಈ ಬಗೆಯ ಶಿಕ್ಷಣವೆನ್ನುವುದು ವಿದ್ಯಾರ್ಥಿಗಳೆನಿಸಿಕೊಂಡವರ ಮೇಲೆ ಹೂಡುವ ಬಂಡವಾಳವಾಗಿ ಮಾತ್ರ ಹೆಚ್ಚು ವಾಸ್ತವವಾಗುತ್ತದೆ. ಇದರ ಮುಂದುವರಿಕೆಯಾಗಿ ಗಮನಿಸಬೇಕಾದ ಇನ್ನೊಂದು ಸಂಗತಿಯಿದೆ. ಈ ಬಗೆಯ 'ಬಂಡವಾಳ ಹೂಡಿಕೆ'ಯ ಪದ್ಧತಿಗೆ ಇಂದು ಶಾಲೆಗಳೂ ಕಾಲೇಜುಗಳೂ ಅಗತ್ಯವಾಗಿರುವುದು ಕೇವಲ ಅಂಕಪಟ್ಟಿ-ಪ್ರಮಾಣಪತ್ರಗಳ ಅಧಿಕೃತತೆಗಾಗಿ ಮಾತ್ರವೆ. ಇವುಗಳ ಅಸ್ತಿತ್ವವನ್ನೇ ಅಣಕ ಮಾಡುವಂತೆ ನಾಯಿಕೊಡೆಗಳಂತೆ ಟ್ಯೂಷನ್ ಸೆಂಟರುಗಳೂ ಅಕಾಡೆಮಿಗಳೂ ಸೆಂಟರ್ ಫಾರ್ ಎಕ್ಸಲೆನ್ಸ್‌ಗಳೂ ಗಲ್ಲಿ ಗಲ್ಲಿಗಳಲ್ಲಿ ತಲೆಯೆತ್ತಿವೆ. ಅರುಣೋದಯದ ಬ್ರಾಹ್ಮೀಮುಹೂರ್ತದಿಂದ ತಡರಾತ್ರಿಯವರೆಗೂ ಇವು ಕೈಲಾಸಂ ಹೇಳುವ ಜಪದಲ್ಲಿ ವಿದ್ಯಾರ್ಥಿಗಳನ್ನು 'ಅದ್ದೀ ಅದ್ದೀ ನೆನೆಸಲು' ಪ್ರತಿಜ್ಞಾ ಬದ್ಧವಾಗಿವೆ. ಪೋಷಕರ ಭ್ರಮೆಗಳನ್ನು ಮಾತ್ರವೇ ಪೋಷಿಸುವ ಇಂತಹ ಪಾಠದಂಗಡಿಗಳ ಮೇಲೆ ಆರ್ಥಿಕವಾಗಿಯಾಗಲಿ ಸಾಮಾಜಿಕವಾಗಿಯಾಗಲಿ ಶೈಕ್ಷಣಿಕವಾಗಿಯಾಗಲಿ ಯಾವ ನಿಯಂತ್ರಣವೂ ಇಲ್ಲದಂತಾಗಿದೆ. ಹೀಗಾಗಿ ಸಮಗ್ರ

ವ್ಯವಸ್ಥೆಯೇ ಇಲ್ಲಿ 'ಜಜ್ಜೀ ಜಜ್ಜೀ ಜಜ್ಜೀ ತುರುಕುವ' ಪ್ರಕ್ರಿಯೆಯಲ್ಲಿ ಅತ್ಯಂತ ನಿಷ್ಠೆಯಿಂದ ಪಾಲ್ಗೊಳ್ಳುತ್ತಿದೆ. ಈ ವ್ಯವಸ್ಥೆಯಲ್ಲಿ ವಿದ್ಯಾರ್ಥಿ ತನ್ನ ನಿಜವಾದ ಅಸ್ತಿತ್ವ–ಚಹರೆಗಳನ್ನು ಕಳೆದುಕೊಳ್ಳುವುದನ್ನು ಅವನಿಗೆ 'ಖೈದಿಗಳಿಕ್ಕೊಡೋ ಹಾಗೆ ಒಂದ್ನಂಬರ್ಕೊಟ್ಟು' ಕೂಡಿಸುವುದು ಸಮರ್ಥವಾಗಿ ಧ್ವನಿಸುತ್ತದೆ. ಈ ಎಲ್ಲದರ ಪರಿಣಾಮವನ್ನು ಪರೀಕ್ಷೆಯೆಂಬ ವಾಂತಿ ಕ್ರಿಯೆಯು ರೂಪಕದಲ್ಲಿ ಹಿಡಿದಿಟ್ಟಿರುವುದಂತೂ ಶೈಕ್ಷಣಿಕ ಪ್ರಕ್ರಿಯೆಯ ರೋಗದ ಲಕ್ಷಣವನ್ನು ಇನ್ನು ಸಂದೇಹಕ್ಕಡೆಯಿಲ್ಲದಂತೆ ಅಭಿವ್ಯಕ್ತಿಸಿದಂತಾಗಿದೆ.

ಈ ಮಧ್ಯೆ ಗುಂಡೂರಾಯನ ಭಾಷಣ ಪಾಠ್ಯವಸ್ತುಗಳ ಮೇಲೂ ತನ್ನ ವಿಮರ್ಶೆಯ ಕ್ಷಕಿರಣವನ್ನು ಬೀರಿದೆ. ಜ್ಞಾನವನ್ನು ಕೇವಲ ಮಾಹಿತಿಯ ಮೊತ್ತವಾಗಿ ಪರಿವರ್ತಿಸುವ ಅಪಾಯದ ಕಡೆಗೆ ಇಲ್ಲಿನ ಮಾತುಗಳು ಬೊಟ್ಟು ಮಾಡುತ್ತವೆ. 'ನಮ್ಜನಗಳಿಗೆ ಖುದ್ದು ಉಪಯೋಗವಾಗುವ' ಎಂಬ ಮಾತು ಇಲ್ಲಿ ಗಮನಾರ್ಹವಾಗಿದೆ. ಈ ಸಂಬಂಧವಾಗಿ ಗಾಂಧೀಜಿಯವರ ಅಭಿಪ್ರಾಯವೊಂದನ್ನು ಇಲ್ಲಿ ಉಲ್ಲೇಖಿಸಬಹುದು. ಅವರೆನ್ನುತ್ತಾರೆ: "...ನಾನು ಭೂಗೋಳ, ಖಗೋಳಶಾಸ್ತ್ರ, ಬೀಜಗಣಿತ, ರೇಖಾಗಣಿತ ಇತ್ಯಾದಿಗಳನ್ನು ಕಲಿತಿದ್ದೇನೆ. ಅದರಿಂದ ಏನಾಗಿದೆ ? ಯಾವ ರೀತಿಯಲ್ಲಿ ನನಗಾಗಲೀ ಅಥವಾ ನನ್ನ ಸುತ್ತುಮುತ್ತಲಿರುವವರಿಗಾಗಲೀ ಅದರಿಂದ ಪ್ರಯೋಜನವಾಗಿದೆ?...ನನ್ನ ಇಂದ್ರಿಯಗಳ ಮೇಲೆ ಹಿಡಿತ ಸಾಧಿಸಲು ಮೇಲೆ ಹೇಳಿದ ವಿಜ್ಞಾನಶಾಸ್ತ್ರಗಳನ್ನು ಬಳಸಿಕೊಳ್ಳಲು ನನಗೆ ಎಂದಿಗೂ ಸಾಧ್ಯವಾಗಿಲ್ಲ ಎಂದು ನಾನು ಸ್ಪಷ್ಟವಾಗಿ ಹೇಳಬೇಕಾಗುತ್ತದೆ. ಆದ್ದರಿಂದ, ಪ್ರಾಥಮಿಕ ಶಿಕ್ಷಣವನ್ನು ಪಡೆಯುತ್ತೀರೋ, ಉನ್ನತ ಶಿಕ್ಷಣವನ್ನು ಪಡೆಯುತ್ತೀರೋ, ಮುಖ್ಯವಾದುದನ್ನು ಸಾಧಿಸುವುದಕ್ಕೆ ಇದಾವುದರ ಅಗತ್ಯವಿಲ್ಲ. ಅದು ನಮ್ಮನ್ನು ಮಾನವರನ್ನಾಗಿಸುವುದಿಲ್ಲ. ನಮ್ಮ ಕರ್ತವ್ಯವನ್ನು ನಿರ್ವಹಿಸಲು ನಮ್ಮನ್ನು ಸಮರ್ಥರನ್ನಾಗಿಸುವುದಿಲ್ಲ."

ಮಾಹಿತಿ ಕೇಂದ್ರಿತ ಹಾಗೂ ಪರೀಕ್ಷಾಕೇಂದ್ರಿತ ಶಿಕ್ಷಣ ವ್ಯವಸ್ಥೆಗೆ ಪರ್ಯಾಯವಾಗಿ ಇಲ್ಲಿ ಕೈಲಾಸಂ ಕಲಿಯುವವರನ್ನು ಕೇಂದ್ರವಾಗಿರಿಸಿಕೊಂಡ ಕ್ರಮವೊಂದನ್ನು ಪ್ರತಿಪಾದಿಸುತ್ತಾರೆ. ಅವರ ಪ್ರಕಾರ ವಿದ್ಯಾಭ್ಯಾಸಕ್ರಮವೆನ್ನುವುದು 'ನಮ್ಮಕ್ಕಳ ಸ್ವಭಾವದಲ್ಲಿರುವ ಗುಣಗಳನ್ನು ಹೊರಕ್ಕೆ ಸೆಳೆಯುವ' 'ಪಾತಾಳಗರಡಿ'ಯಾಗಬೇಕು. ಕೈಲಾಸಂ ಅವರ ಈ ಪ್ರತಿಪಾದನೆಯನ್ನು ಪ್ರಸ್ತುತ ರೂಢಿಗತವಾಗಿರುವ ನೈತಿಕ ಶಿಕ್ಷಣಕ್ರಮಕ್ಕಿಂತ ಭಿನ್ನವಾಗಿ ಆಲೋಚಿಸಬೇಕೆಂದು ತೋರುತ್ತದೆ. ಇಲ್ಲಿ ಮಂಡಿತವಾಗಿರುವುದು ನೀತಿಪಾಠಗಳ ಸಿಲಬಸ್‌ಗಳನ್ನು ಒಳಗೊಳ್ಳುವ ಮಾದರಿಯ ನೈತಿಕತೆ ಅಲ್ಲ. ಬದಲಾಗಿ ಅರಿಯುವ ಪ್ರಕ್ರಿಯೆಯಲ್ಲೇ ಅಂತರ್ಗತವಾಗಿರುವ ನೈತಿಕತೆ ಅದು ; ಅರಿವನ್ನು ಇರವಿನೊಂದಿಗೆ ಅದರ ಎಲ್ಲ ಆಯಾಮಗಳನ್ನು ಜೋಡಿಸುವ ಕೊಂಡಿ ಅದು ; ಅಷ್ಟೇ ಅಲ್ಲದೆ ವ್ಯಕ್ತಿಯ ಸೀಮಿತಂ ಅಹಂ ಅನ್ನು ವಿಶ್ವದ ವಿರಾಟ್ ಅಹಮ್ಮಿನೆಡೆಗೆ ವಿಸ್ತರಿಸುವ ಉಪಕ್ರಮವೂ ಹೌದು. ವಿಡಂಬನೆಗಳ ಮೇಲ್ಪದರಗಳಲ್ಲಿ ಹುದುಗಿಸಿರುವ ಈ ಶಿಕ್ಷಣದರ್ಶನಕ್ಕಾಗಿ (ಅದು ಜೀವನದರ್ಶನವೂ ಹೌದು) ಕೈಲಾಸಂ ಅವರ ಈ ನಾಟಕ ಅತ್ಯಂತ ಸಮಕಾಲೀನವೆನಿಸುತ್ತದೆ.

■

# ಆನಂದ ಲಹರಿಯನ್ನೋದಿದ ಆನಂದ

◆

**ಸಂಧ್ಯಾ ಭಟ್**

ಸುಮಾರು ದಿನಗಳ ಹಿಂದಿನ ಘಟನೆ. ರಾತ್ರಿ ಕನಸೊಂದು ಬಿದ್ದಿತ್ತು. ವಿಚಿತ್ರ ಅನುಭೂತಿ. ಚಂದದ ಆಕಾಶ, ನಕ್ಷತ್ರಗಳ ಪುಂಜ ಎಲ್ಲಿಂದಲೋ ಹಳದಿ ರಟ್ಟಿನ ಪುಸ್ತಕಗಳು ಹಾರಿಬಂದವು. ಅವೆಲ್ಲಾ ಪುಟ್ಟ ಪುಟ್ಟ ವಿಮಾನಗಳ ಆಕೃತಿ ಪಡೆದು ಅತ್ತಿತ್ತ ಹಾರಲು ಆರಂಭಿಸಿದವು. ಸರಿಯಾಗಿ ನೋಡಿದಾಗ ಅದರ ಮೇಲೆ ಏನೋ ಬರೆದಿರುವುದೂ, ಚಿತ್ರ ಬಿಡಿಸಿರುವುದೂ ಕಂಡಿತು. ಈ ವಿಮಾನ ನನಗೆ ಪರಿಚಿತವಾದದ್ದು ಎಂಬ ಅನಿಸಿಕೆ. ಮತ್ತು ಭಾವಿಸಿ ನೋಡಲಾಗಿ ವಿಮಾನದ ರೆಕ್ಕೆಗಳ ಮೇಲೆ ಚಿಕ್ಕ ಚಿಕ್ಕ ಗೆರೆಗಳೂ, ಹಾಸದ ಚಿತ್ರವೂ ಕಂಡುಬಂತು. ವಿಮಾನದ ಒಂದು ಪಾರ್ಶ್ವದಲ್ಲಿ 'ಆನಂದಲಹರೀ' ಎಂದು ಬರೆದಿತ್ತು. ಅವು ದೊಡ್ಡ ವಿಮಾನಗಳಲ್ಲ. ಪುಟ್ಟ ಮಕ್ಕಳ ಆಟಿಕೆಯಂತಿದ್ದವು. ತುಂಬ ಶಕ್ತಿಯುತವಾಗಿದ್ದ ಆ ಸಣ್ಣ ವಿಮಾನಗಳು ಸದ್ದು ಮಾಡುತ್ತಾ ನನ್ನ ಸುತ್ತಲೂ ಹಾರಾಡತೊಡಗಿದವು. ಖುಷಿಯಿಂದ ಅವುಗಳನ್ನು ಹಿಡಿಯಲು ಹೋದೆ. ಎಚ್ಚರಾಯಿತು. ಆದರೇನು ? ವಾಸ್ತವದಲ್ಲೂ ಕನಸಿನ ಖುಷಿ ಮುಂದುವರೆದಿತ್ತು. ಲಕ್ಷ್ಮೀಶ ತೋಳ್ಪಾಡಿಯವರ 'ಆನಂದ ಲಹರೀ ಸ್ಪಂದ ಸಮಯ' (ಪ್ರಕಾಶಕರು: ಅಭಿನವ, ಬೆಂಗಳೂರು, ೨೦೧೫) ಪುಸ್ತಕ ಓದುತ್ತಿದ್ದಾಗ ಆದ ಅನುಭವವಿದು.

ಒಬ್ಬ ಸಾಮಾನ್ಯ ಓದುಗಳಾಗಿ ತೋಳ್ಪಾಡಿಯವರ 'ಆನಂದ ಲಹರಿ'ಯನ್ನು ಪ್ರವೇಶ ಮಾಡಿದ್ದೆ. ಓದುತ್ತ ಓದುತ್ತ ಪುಸ್ತಕವನ್ನು ಓದುವುದೇ ಒಂದು ವಿಶಿಷ್ಟ ಅನುಭವ ಎನಿಸತೊಡಗಿತ್ತು. ಕನಸು ಮತ್ತು ವಾಸ್ತವ ಎರಡರಲ್ಲೂ ಆನಂದ ಲಹರಿಯ ಗುಂಗು ಹಿಡಿದಿತ್ತು. ಹೀಗೆ ಓದಿದವರೆಲ್ಲರಿಗೂ ಗುಂಗು ಹಿಡಿಸುವುದು ಲಹರಿಯ ಶಕ್ತಿ.

ಸೌಂದರ್ಯಲಹರಿಯ ಪೂರ್ವಭಾಗವನ್ನು 'ಆನಂದಲಹರೀ' ಎಂದು ಕರೆಯುತ್ತಾರಷ್ಟೆ ಈ ಆನಂದಲಹರೀ ಎಂಬ ಒಟ್ಟು ಶ್ಲೋಕಗಳಿಗೆ ತೋಳ್ಪಾಡಿ ವ್ಯಾಖ್ಯಾನ ನೀಡಿದ್ದಾರೆ. ವ್ಯಾಖ್ಯಾನವೆಂದರೆ ಇತಿಹಾಸದ ಚರ್ಚೆಯಲ್ಲ. ಬದಲಾಗಿ ಇಂತಹದ್ದೊಂದು ಚರ್ಚೆಯನ್ನೇ ನಿರಾಕರಿಸಿ ಕೇವಲ ಅದರ ಸಾರವನ್ನು ಉಣ್ಣುವಲ್ಲಿ ಪ್ರೋತ್ಸಾಹಿಸುವ ಕೆಲಸವನ್ನು

ಮಾಡುತ್ತಿದೆ. 'ಹೊಳೆಯಲ್ಲಿ ಈಸು ಬೀಳುವುದಕ್ಕೆ ಆ ಹೊಳೆಯ ಹೆಸರಾದರೂ ಗೊತ್ತಿರಬೇಕೇನು ? 'ಲಹರಿ'ಯ ಅನುಭವಕ್ಕೆ ಹೆಸರಿನ ಹಂಗೇಕೆ ? ಎಂದು ಕೇಳುತ್ತಾ ಲಹರಿಯ ಓದಿನ ಅನುಭವಕ್ಕೆ ಓದುಗನನ್ನು ಸಜ್ಜುಗೊಳಿಸುತ್ತದೆ. ಯಾವುದೇ ಸಿದ್ಧಾಂತದ ಹಂಗಿಲ್ಲದ ಬರವಣಿಗೆ ಲಹರಿಯ ಅನುಭವದಲ್ಲಿ ಪಾಲು ಪಡೆಯಲು ಪ್ರೇರೇಪಿಸುತ್ತದೆ. ತೋಳ್ಪಾಡಿಯವರೇ ಹೇಳುವಂತೆ ಅವರದು ಲಹರಿಯ ತಿಳಿವಿಗೆ ಸಿಕ್ಕು ಆನಂದವನ್ನನುಭವಿಸಿ ಅದನ್ನು ಹಂಚಿಕೊಂಡಂತಹ ಬರವಣಿಗೆ. ಅಹಂಕಾರದ ಲವಲೇಶವೂ ಇಲ್ಲದೆ ತಾನುಂಡ ಆನಂದವನ್ನು ಇತರರಿಗೆ ಉಣಿಸಬೇಕೆಂಬ ಹಂಬಲದ ಮಗುವಿನಂತಹ ಚೈತನ್ಯವೊಂದು ಬರಹದುದ್ದಕ್ಕೂ ಕೆಲಸ ಮಾಡಿದೆ.

ಲಹರಿಯ ಆರಂಭದಲ್ಲೇ 'ಮೂಲ'ದ ಕುರಿತಾದ ಮಾತು ಬರುತ್ತದೆ. ನಮ್ಮ ಅಥವಾ ಸೃಷ್ಟಿಯ ಮೂಲ ಯಾವುದು ? ಅದೇಕೆ ನಮ್ಮನ್ನು ಹುಟ್ಟಿಸಿದೆ ? ಈ ಪ್ರಪಂಚದ ಅರ್ಥವೇನು ? ಜೀವ ಪ್ರಪಂಚಗಳ ಸಂಬಂಧವೇನು ? ಇವೇ ಮೊದಲಾಗಿ ಪ್ರಶ್ನೆ ಹುಟ್ಟುವುದು ಸಹಜವಷ್ಟೆ. ಪ್ರಶ್ನೆಗೆ ಉತ್ತರ ಲಹರಿಯಲ್ಲಿದೆ. ಎಲ್ಲಕ್ಕೂ ಮೂಲ ತಾಯಿ. ಅವಳು ಆದಿಮಾತೆ. ಅವಳೇ ಸೃಷ್ಟಿಸಿದ ಸೃಷ್ಟಿಯಿದು. ಬ್ರಹ್ಮ, ವಿಷ್ಣು, ಮಹೇಶ್ವರರ ಆದಿಯಾಗಿ ಎಲ್ಲವೂ ಅವಳ ಸೃಷ್ಟಿ.

'ಶಿವಶಕ್ತ್ಯಾ ಯದಿ ಯುಕ್ತೋ ಪ್ರಭವಿತಂ' ಎಂಬ ಶ್ಲೋಕದಿಂದಲೇ ಆರಂಭವಾಗುತ್ತದೆ ಲಹರಿ. ವಿಶ್ವಾದಿ ಮೂಲ ಇಲ್ಲಿ ತಾಯಿಯಾಗಿ ವಿಜೃಂಭಿಸಿದ್ದಾಳೆ. ಈ ತಾಯಿ ವಿಶ್ವಜನನಿ. ಅವಳ ಒಂದು ಕಣ್ಣಸನ್ನೆಗೆ ದೇವಾದಿ ದೇವತೆಗಳೆಲ್ಲರೂ ಕಾದು ನಿಲ್ಲುತ್ತಾರೆ. ಇಂತಹ ತಾಯಿಯನ್ನು ಪಡೆದ ಮಗುವಿನ ಧನ್ಯತೆ ಎಂತಹದು ? ಇಡೀ ಲಹರಿ ತಾಯಿಯ ಉಪಾಸನೆಯಲ್ಲಿ ತೊಡಗುತ್ತದೆ. ಉಪಾಸನೆ ಇಲ್ಲಿ ವ್ರತವಾಗಿಲ್ಲ. ಬುದ್ಧಿ ಬಲಿತ ವ್ಯಕ್ತಿಯ ತಿಳಿಯುವ ಹಠವಾಗಿಲ್ಲ. ಬದಲಾಗಿ ಮುಗ್ಧ ಮಗುವೊಂದು ತನ್ನ ತಾಯಿಯನ್ನು ಕರೆದಂತೆ, ಅವಳನ್ನು ಅವಳ ಲೀಲೆಯನ್ನು ನೋಡಿ ಬೆರಗು ಪಡೆದಂತೆ ಇಡೀ ಲಹರಿ ಒಂದು ಸೂಕ್ಷ್ಮ ಅಚ್ಚರಿಯಲ್ಲಿ ತನ್ನನ್ನು ಆದ್ರವಾಗಿಸಿಕೊಂಡು ಓದುಗನನ್ನೂ ಆ ಆರ್ದ್ರತೆಯಲ್ಲಿ ನೆನಸುತ್ತದೆ. 'ನಿನ್ನ ಗೆಜ್ಜೆಯ ದನಿಯನ್ನು ಕೇಳುವ ಕೀಲಿಯ ಸೂಕ್ಷ್ಮವನ್ನು ಸದಾ ಉಳಿಸು' ಎಂದು ಬೇಡುವ ಉಪಾಸಕ ತಾಯಿಯನ್ನು ಸ್ತುತಿಸುವ ಭಾಷೆ ಗೊತ್ತಾಗದೇ (ಲಹರಿಯೇ ಹೇಳುವಂತೆ) ಸ್ತೋತ್ರ ಮಾಡುತ್ತಾನೆ. ಹೋಲಿಕೆಯೇ ಇಲ್ಲದ ವಸ್ತುವನ್ನು ಹೋಲಿಸುವುದು ಹೇಗೆ? ಆಗ ಭಾಷೆ ಸ್ತೋತ್ರರೂಪದ ಹೊಗಳಿಕೆಯಾಗುತ್ತದೆ. ಆ ತಾಯಿಗೆ ಮಗುವಿನ ಎಲ್ಲವೂ ತಿಳಿದಿದೆ. ಅದು ಮಡಿಲ ಮುದ್ದು ಎನಿಸುವ ಪರ್ಯಂತ ವಿದ್ಯೆ. ಮಗುವಿನ ರೂಪದ ಉಪಾಸಕ ತಾಯಿಯ ಎದುರಿಗೆ ಸರ್ವ ಶರಣ ಭಾವ ಹೊಂದುತ್ತಾನೆ. ಆತ ಕೈ ಮುಗಿಯುವುದಿಲ್ಲ ಕೈಚೆಲ್ಲುತ್ತಾನೆ. ಚೆಲ್ಲಿದ ಕೈ ತಾಯ ಕಾಲ ಬಳಿ ವಿರಮಿಸುತ್ತದೆ. ಅವನ ಭಾವುಕ ಮನಸ್ಸು ಯೋಚಿಸುತ್ತದೆ, 'ನೀನೊಲಿಯುವಂತೆ ನಾನಿರುವುದು ಅದೇ ದೊಡ್ಡ ಸಾಧನೆ' ಎಂದು. ಆದರೆ ಗೆಜ್ಜೆಯ ದನಿಯನ್ನು ಕೇಳುವ ಒಳಗಿವಿ ಸದಾ ತೆರೆದಿರಬೇಕಲ್ಲ. ಅದನ್ನು ತೆರೆಯುವ ಅಭ್ಯಾಸ ಜೀವನಿಗೆ ಬೇಕು. ಏನು ಮಾಡೋಣ? 'ಅವನಿಗೆ (ಜೀವನಿಗೆ) ಮೈಮರೆವು. ದೇವನಿಗೆ

ಮೈಯ್ಯನ್ನು ಮೀರಿದ ಅರಿವು.' ವಿಷಾದ ಅರಿಯಿತು' ಮೈಯ ಮರೆವಿನಿಂದ ಮೈಯನ್ನು ಮೀರಿದ ಅರಿವಿನೆಡೆಗೆ ತಾಯಿಯ ಆಹ್ವಾನ. ಆಹ್ವಾನ ಸ್ವೀಕರಿಸಿದ ಜೀವನಿಗೆ ಬೇಕಾದದ್ದು ಮೈಯನ್ನು ಮೀರಿದ ಏಕಾಗ್ರತೆ. ಏಕಾಗ್ರತೆ ಎಂದರೆ ಅಣುವಿನಲ್ಲಿ ರಮಿಸುವ ಸಾಮರ್ಥ್ಯ ಮತ್ತು ರಮಿಸುವುದು ಎಂದರೆ ತಾದಾತ್ಮ್ಯ ಮತ್ತು ಕೆಡಿಸದೆ ವಿಸ್ತರಿಸುವ ಕೌಶಲ ಮತ್ತು ಈ ಕೌಶಲ ಕೂಡಾ ತಾಯಿಯ ತಿವಿತದ ಅನಂತ ಕರುಣೆಯ ಅಂತಃಪ್ರೇರಣೆ. ತಾಯಿಯ ತಿವಿತವಿಲ್ಲದೇ ಜೀವಿಯ ಉದ್ಧಾರವಿಲ್ಲ. ಎಚ್ಚರವೂ ಇಲ್ಲ. ಇಡೀ ಜಗತ್ತು ತನ್ನ ಮಗುತನದಲ್ಲಿ ಕಾಣದಿರುವ ತಾಯಿಗಾಗಿ ಹುಡುಕಾಟ ನಡೆಸಿದೆಯೇ?

'ಲಹರಿ' ಶಕ್ತಿಯನ್ನು ತಾಯಿಯೆಂದೂ; ಶಿವನನ್ನು ತಂದೆ ಎಂದೂ ಉಪಾಸನೆ ಮಾಡುತ್ತದೆ. ಆದರೆ ಶಿವ ತಾನು ಸ್ವತಃ ಸೃಷ್ಟಿಯ ಕರ್ತನಲ್ಲ. ಆತನಿಗೆ ಶಕ್ತಿಯ ಶಕ್ತಿ ಬೇಕು. ಆತ ಆತ್ಮನಂತೆ ಇದ್ದವನು. ಶಕ್ತಿಯ ಮೂಲಕ ತನ್ನ ಅನನ್ಯತೆಯನ್ನು ಕಂಡರಿಸಿಕೊಂಡಾಗ ಲೋಕ ಮೈ ಪಡೆಯಿತಂತೆ! ಅಂದಿನಿಂದ ಲೋಕ ಶಕ್ತಿಯನ್ನು ಆದಿಮಾತೆ ಎಂದೂ ಶಿವನನ್ನು ತಂದೆ ಎಂದೂ ಕರೆದು ತನ್ನತನವನ್ನು ಸಾಬೀತುಪಡಿಸಿಕೊಂಡಿತು. ಅಂದರೆ ಇಡೀ ಸೃಷ್ಟಿ, ಜಗತ್ತು ಶಿಶು ಎಂದಾಯಿತು. ಶಿವ-ಶಿವೆಯರು ಜಗತ್ತಿನ ತಂದೆ ತಾಯಿಗಳಾದರು.

ಆದರೆ ಇಂತಹ ಸೃಷ್ಟಿಯ ಹಿಂದೆ ಇರೋದು ಒಂದು 'ಪತ್ನಿ' ಲಹರಿಯ ಒಂದು ಶ್ಲೋಕ ಹೀಗೆ ಹೇಳುತ್ತದೆ.

"ಜಗತ್ ಸೂತೇ ಧಾತಾ ಹರಿರವತಿ ರುದ್ರಃ ಕ್ಷಪಯತೇ
ತಿರಸ್ಕುರ್ವನ್ನೇತತ್‌ಸ್ವಮಪಿ ವಪುರೀಶಃ ತರಯತಿ
ಸದಾ ಪೂರ್ವಃ ಸರ್ವಂ ತದಿದಮನುಗೃಹ್ಣಾತಿ ಚ ಶಿವಃ
ತವಾಜ್ಞಾಮಾಲಂಬ್ಯ ಕ್ಷಣಚಲಿತಯೋಃ ಭ್ರೂಲತಿಲಕಯೋಃ

ಕನ್ನಡದಲ್ಲಿ-

ಸೃಷ್ಟಿಸುವನು ಬ್ರಹ್ಮ, ಕಾಪಿಡುವ ಹರಿ, ಲಯಗೈವನೋ ರುದ್ರ-ಜಗ ಈ ತ್ರಯವ ಮರೆ ಮಾಡಿ ತಾನೆ ಮರೆಯಾಗುವನು ಮಹೇಶಾನದೇವ. ಸದಾಶಿವನೋ ಮರಳಿ ಹರಸುವನು ಈ ಎಲ್ಲ ಸೃಷ್ಟಿಯನು; ತಾಯೆ ನಿನ್ನ ಹುಬ್ಬುಗಳ ಕ್ಷಣದ ಸನ್ನೆಯ ಅಪ್ಪಣೆಯ ಪಡೆದು.

'ಸೃಷ್ಟಿ' ಎಂದರೆ ತಾಯಿಯ ಹುಬ್ಬಿನ ಚಲನೆ. ಸೃಷ್ಟಿ, ಸ್ಥಿತಿ, ಲಯ, ತಿರೋಧಾನ. ಮತ್ತು ಆಗ ಅನುಗ್ರಹಳೆಲ್ಲ ತಾಯಿಯ ಕಣ್ಣಿನ ಒಂದು ಚಲನೆಯಿಂದ ಸಾಂಗವಾಗಿ ಸಾಗುತ್ತದೆ. ಸದಾಶಿವ ತಾಯಿಯ ಹುಬ್ಬೆಂಬ ಬಳ್ಳಿಗಳ ಚಲನೆಯನ್ನು ಆರ್ಥ ಮಾಡಿಕೊಳ್ಳುತ್ತಾನಂತೆ. ಲಹರಿ ಹೇಳುವಂತೆ "ಸನ್ನೆಯನ್ನು ತಿಳಿಯಲಾಗುವುದೇ ಒಂದು ಅನುಗ್ರಹ ! ಸನ್ನೆಯನ್ನು ತಿಳಿದರೆ ತಾನೇ ಮರಳಿ ಹುಟ್ಟಿದಂತೆ! ಹಾಗಾದರೆ ಈ ಸೃಷ್ಟಿಯನ್ನು ಒಂದು ಸನ್ನೆ ಎಂದು, ಸಂಕೇತವೆಂದು ಅರ್ಥ ಮಾಡಿಕೊಳ್ಳುವುದೇ

ಸರಿಯಾದ ದಾರಿ. ಆದರೆ ಸೃಷ್ಟಿ ಎಷ್ಟು ವಾಸ್ತವವೋ ಅದಕ್ಕೂ ಹೆಚ್ಚು ಸಾಂಕೇತಿಕ. ಎಷ್ಟು ವಿಚಾರನಿಷ್ಠವೋ ಅದಕ್ಕೂ ಹೆಚ್ಚು ಧ್ಯಾನನಿಷ್ಠ. ಎಷ್ಟು ಎಚ್ಚರ ಗುಣವುಳ್ಳದ್ದೋ ಅದಕ್ಕೂ ಹೆಚ್ಚು ಕನಸಿನ ಗುಣವನ್ನು ಹೊತ್ತದ್ದು. ಇದೊಂದು ಅದ್ಭುತ ಸನ್ನೆ.

ಸೃಷ್ಟಿ-ಸ್ಥಿತಿ-ಲಯ-ಮೂರೂ ಜೊತೆಯಾಗೇ ಇರುವಂಥದು. 'ಸೃಷ್ಟಿ' ಎಲ್ಲಿ ಇದೆಯೋ ಅಲ್ಲಿ 'ಲಯ' ಇದ್ದೇ ಇದೆ. ಇದು ಕೇವಲ ತಾಯಿಯ ಲೀಲೆ. ಸೃಷ್ಟಿ, ಸ್ಥಿತಿ, ಲಯಕ್ಕೆ ಕಾರಣರಾದ ತ್ರಿಮೂರ್ತಿಗಳು ತಾಯಿಯ ಆಜ್ಞಾಪಾಲಕರು. 'ಅವರು ಆಜ್ಞೆಯನ್ನು ಏಕಾಗ್ರತೆಯಿಂದ ಪಾಲಿಸುತ್ತಾರೆ. ಆದ್ದರಿಂದ ಮೂಲದ ಪ್ರಜ್ಞೆ ಅವರಲ್ಲಿ ಯಾವಾಗಲೂ ಜೀವಂತ. ಹಾಗಾಗಿಯೇ ಯಾವ ಪೂಜೆ ಮಾಡಿದರೂ ಅದು ಸಲ್ಲುವುದು ತಾಯಿಗೇ. ಈ ಜಗತ್ತು ತಾಯಿಯ (ಮಗುವಾದ್ದರಿಂದ) ಅಂಶವಾದ್ದರಿಂದ ಅವಳ ಮಕ್ಕಳಾದ ಎಲ್ಲರಿಗೂ ಸಮನಾಗಿ ಸಿಗುತ್ತದೆ. ಇದೇ ತಾಯಿಯ ಲೀಲೆ. ಹುಟ್ಟು, ಸಾವುಗಳ ಮಧ್ಯೆ ಜೀವನ ಎಂಬುದೇ ಸಂಬಂಧ. ಆದರೆ ಸಾವು ಕೊನೆಯಲ್ಲಿ. ಎಲ್ಲವೂ ಅಳಿದ ಮೇಲೆ ಉಳಿದುಕೊಂಡದ್ದು ಮೊದಲೇ ಇರುವ ಮೂಲ ಮಾತ್ರ. 'ಲಹರಿ' ಈ ವಿಷಯದಲ್ಲಿ ಅಚ್ಚರಿಪಡುತ್ತದೆ. ಅದು ಹೇಳುವಂತೆ "ತಾನು ಉಂಟು ಮಾಡಿದ್ದೆಲ್ಲವೂ ಇಲ್ಲದೇ ಆಗುವುದನ್ನು ನೋಡುವಾಗ, ಈ ಬದುಕು ಕ್ಷಣಿಕ ಎಂಬ ಅರಿವು ಬ್ರಹ್ಮನಿಗೆ ಆಗುವುದಂತೆ! ಬದುಕಿನ ಕ್ಷಣಿಕತೆಯ ಅನುಭವವೇ ಬ್ರಹ್ಮಜ್ಞಾನ !" ಮತ್ತು ಇದೇ ಒಂದು ಸಂಭ್ರಮ. ಇದನ್ನು ಹೊಂದುವುದೇ 'ಶಿಶು'ವಿನ ಗುರಿ. ಈ 'ಶಿಶು' ತಾಯಿಯನ್ನು ಒಲಿಸಿಕೊಳ್ಳಬೇಕಾದರೆ ಎಂತಹ ಪೂಜೆ ಸಲ್ಲಬೇಕು? ಅಂತಿಥದ್ದೆಲ್ಲ ತಾಯಿಗೆ ಸಾಲದು. ಸೀಮಿತ ಪೂಜೆಗೆ ತಾಯಿಯನ್ನು ಒಲಿಸಿಕೊಳ್ಳಬೇಕೆಂಬ ಹಂಬಲವಿದ್ದರೂ ಸಾಧ್ಯವೇ? ಆದ್ದರಿಂದ ತಾಯಿಯ ಪೂಜೆ ಹಾಗೆ ಸಾಗಬೇಕು. ಎಲ್ಲವೂ ಅವಳೇ ಆಗಿರುವಾಗ ಸಲ್ಲಿಸುವ ಪೂಜೆ ಹೇಗಿರಬೇಕೆಂಬ ಗೊಂದಲ ಸಹಜ. ಅದಕ್ಕೇ ಲಹರಿ ಹೇಳುತ್ತದೆ:

"ಜಪೋ ಜಲ್ಪಃ ಶಿಲ್ಪ ಸಕಲಮಪಿ ಮುದ್ರಾವಿರಚನಾ
ಗತಿಃ ಪ್ರಾದಕ್ಷಿಣ್ಯಕ್ರಮಣಂ ಅಶನಾದ್ಯಾಹುತಿವಿಧಿಃ
ಪ್ರಣಾಮಃ ಸಂವೇಶಃ ಸುಖಮಖಿಲಮಾತ್ರಾರ್ಪಣದೃಶ
ಸಪರ್ಯಾ ಪಾರ್ಯಾಯಃ ತವ ಭವತು ಯನ್ಮೇ ವಿಲಸಿತಂ

"ಮಾತೆಲ್ಲ ಜಪ, ಕೈಯ್ಯ ಚೇಷ್ಟೆಗಳೆಲ್ಲ ಮುದ್ರೆ ;
ನಡೆದಾಡಿದ್ದೆ ಪ್ರದಕ್ಷಿಣೆ; ಉಂಡದ್ದು ಪ್ರಾಣಾಹುತಿ;
ಹೊರಳಿ ಉರುಳಿದ್ದೆಲ್ಲ ದಂಡ ಪ್ರಣಾಮವೆನೆ
ಪಟ್ಟ ಸುಖವೆಲ್ಲವೂ ನಿನಗೆ ಮೀಸಲು ಎಂಬ
ನನ್ನಲ್ಲಿ ನಡೆವುದೇನೆಲ್ಲವೂ ತಾಯೆ ನಿನ್ನ
ಪೂಜೆಯಿನ್ನೊಂದು ಬಗೆಯಾಗಲಿ."

ಇದು ಎಂತಹ ಅದ್ಭುತವಾದ ಹಾಡು! ಸರ್ವಸಮರ್ಪಣಭಾವದಲ್ಲಿ ಮಾತ್ರ ಇಂತಹ ಹಾಡು ಹುಟ್ಟಲು ಸಾಧ್ಯ. ಲಹರಿ ಇದನ್ನು ಹೀಗೆ ಗುರುತಿಸುತ್ತದೆ: "ಇದು

ವಿಹಾರ, ಇದು ಸೃಷ್ಟಿಯ ಜೊತೆಗೆ ಅನಂತ ತಾದಾತ್ಮ್ಯ. ಇದು ತಾನು ಮಾಡುತ್ತಿದ್ದೇನೆ ಎಂಬ ಸಂಕಲ್ಪ ಕಳಚುವ ಹೊತ್ತು. ಕರ್ಮಕಾಂಡ ಕುಸಿದುಬೀಳುವ ಹೊತ್ತು; ಕಲ್ಲು ಕರಗುವ ಹೊತ್ತು. 'ಭಕ್ತಿ' ಹರಿಯುವ ಹೊತ್ತು" "ಸೌಂದರ್ಯ ಲಹರಿಯ ಡಿಂಡಿಮ ಭಾಷ್ಯಕಾರ. ಸರ್ವವ್ಯಾಪಿಯಾಗಿ 'ಸರ್ವ' ವಿಹಾರಿಯಾಗಿದ್ದ 'ತಾಯಿ'ಗೆ ಸರ್ವಸ್ವದಿಂದಲೇ ಪೂಜೆ ಸಲ್ಲಬೇಕಲ್ಲವೇ ? ಎಂದು ಸಾಕೂತವಾಗಿ ಕೇಳುತ್ತಾನೆ. ಗಂಧಾಧಿ ಉಪಚಾರಗಳು ತೀರ ಪರಿಮಿತವಲ್ಲವೇ ? ಎನ್ನುತ್ತಾನೆ." ಒಟ್ಟಿನಲ್ಲಿ 'ಶಿಶು' ತನ್ನ ಶಿಶುತ್ವವನ್ನು ತಾಯಿಯಲ್ಲಿ ಲೀನವಾಗಿಸುತ್ತದೆ. ನಡೆದದ್ದು, ತಿಂದದ್ದು, ಉಂಡಿದ್ದು, ಉಸಿರಾಡಿದ್ದು ಎಲ್ಲವೂ ತಾಯಿಯ ಪೂಜೆಯೇ.

ಹೀಗೆ ಇಡೀ ಲಹರಿ ತಾಯಿಯನ್ನು ಹಾಡಿ ಸ್ತುತಿಯಾಗುವಲ್ಲಿ ಅದ್ಭುತ ಆನಂದವನ್ನು ಅನುಭವಿಸುತ್ತದೆ. ಶಾಕ್ತತಂತ್ರದ ಹಿನ್ನೆಲೆಯಲ್ಲಿ ಮೂಡಿಬಂದ ಲಹರಿಯ ಉಪಾಸನಾ ಕಾಂಡದ ಮಾತು ಒತ್ತಟ್ಟಿಗಿರಲಿ. ಇಲ್ಲಿಯ ಬರಹಗಳು ಯಾಕೆ ಆಪ್ತವಾಗುತ್ತವೆಂದರೆ ಕೆಲವು ಅನುಭವಗಳು ಅನುಭವೈಕ ಸಾಕ್ಷಿಯಾಗುವ ಸೂಕ್ಷ್ಮವನ್ನು ಕಾಪಾಡಿಕೊಂಡು ಅದನ್ನು ಗೌರವಿಸುತ್ತ ಸಾಗುವ ಕ್ರಮದಿಂದ ಮಗುವೊಂದು ತಾಯಿಯನ್ನು ತಾಯಿಯೆಂದು ಹೇಳಲು ಹೇಗೆ ಸಿದ್ಧಾಂತಗಳು ಬೇಕಿಲ್ಲವೋ ಹಾಗೆಯೇ ಲಹರಿಯ ಬರಹಗಳು. 'ಇದಮಿತ್ಥಂ' ಎಂದು ಹೇಳುವ ಅವಸರ ಇಲ್ಲಿಲ್ಲ. ಅನೇಕ ಸಲ ಇಂತಹ ಪಠ್ಯಗಳನ್ನು ಕೈಗೆತ್ತಿಕೊಳ್ಳುವಾಗ ಹಲವು ಬರವಣಿಗೆಗಳು ಓದುಗನನ್ನುದ್ದೇಶಿಸಿ ತನಗೆ ಇಷ್ಟು ಗೊತ್ತು ಎಂಬ ಗತ್ತಿನಿಂದ ಮಾತನಾಡುತ್ತವೆ. ಲೇಖಕ ಮಾರ್ಗದರ್ಶಕನಾಗಿ ಓದುಗನನ್ನು ಸಿದ್ಧಾಂತದ ಹಂತಕ್ಕೆ ಕೊಂಡೊಯ್ಯುತ್ತಾರೆ. ಆದರೆ ಇಲ್ಲಿ ಆ ತರಹದ ಗತ್ತೇ ಇಲ್ಲ. ಇಲ್ಲಿಯ ಬರಹಗಳಲ್ಲಿ ಲೇಖಕ ಕಾಣುವುದೇ ಇಲ್ಲ. ಓದುಗ ತನ್ನೊಳಗೆ ತಾನು ಹೊಸತನ್ನು ಕಂಡು ಬೆರಗು ಪಡೆಯುತ್ತ ಅರೆ ! ಹೌದಲ್ಲ ! ಎಂದು ಸಂತೋಷವನ್ನನುಭವಿಸುತ್ತಾ ಮುಂದೆ ಸಾಗುವ ಸ್ವಾತಂತ್ರ್ಯದ ಅನುಭವ ಪಡೆಯುತ್ತಾನೆ. ಇದು ನಮ್ಮದೇ ಅನುಭವ ಎನ್ನುವ ಮಟ್ಟಿಗೆ ಓದಗು ತಾದಾತ್ಮ್ಯ ಬರಹಗಳಿವು. ಅದಕ್ಕೇ ಬರವಣಿಗೆ ಓದುಗನಿಗೆ ಸ್ವಗತ-ಸಂಭಾಷಣೆಯ ಆಪ್ತ ಅನುಭವವನ್ನು ನೀಡುತ್ತವೆ. ಒಟ್ಟಿನಲ್ಲಿ ಯಾವುದೇ ಶಾಸ್ತ್ರೀಯವಾದ ಜ್ಞಾನಕಾಂಡದ ಅಭ್ಯಾಸ ಇಲ್ಲದ ನನ್ನಂತಹ ಓದುಗರಿಗೆ ಲಹರಿಯನ್ನು ಓದುವುದೇ ಒಂದು ಬೆರಗು. ಸಂತೋಷ. ಆಪ್ತವಾದ ಸ್ವಗತ ಸಂಭಾಷಣೆ.

■

# ವಾಙ್ಮಯ ತಪಸ್ವಿ ರಾಮಚಂದ್ರ ವಿಟ್ಠಲದಾಸರು

◆

**ಅಚ್ಯುತ ಎಸ್. ಹುಲಗಿ**

ಸಾಮಾಜಿಕ, ಆರ್ಥಿಕ, ಅನೇಕ ಧಾರ್ಮಿಕ ಸಮಸ್ಯೆಗಳಿಂದ. ತಮ್ಮ ಕಾರ್ಯ ಜನತೆಗೆ ಒಪ್ಪಿಗೆ ಆಗುವುದಿಲ್ಲವೇನೋ ಎಂಬ ಹಿಂಜರಿತದಿಂದ ಎಲೆಮರೆ ಕಾಯಿಯಂತೆ ಕಾರ್ಯ ನಿರ್ವಹಿಸಿ ಮರೆ ಆದ ದಾಸವರೇಣ್ಯರು ಎಷ್ಟೊ ಜನ. ಬೆಳಕಿಗೆ ಬಾರದ ಅನೇಕ ದಾಸರು ತಮ್ಮ ಅಂತರಾತ್ಮದಲ್ಲಿ ಅಡಗಿರುವ ಪರಮಾತ್ಮದ ಧ್ವನಿಯನ್ನು ಕೀರ್ತನೆ, ಸುಳಾದಿಗಳಿಂದ ಸ್ತುತಿಸಿ ದಾಸಶ್ರೇಷ್ಠರಾಗಿ ವಿಜೃಂಭಿಸಿದ್ದಾರೆ.

ಲೌಕಿಕ ಜಗತ್ತಿನಲ್ಲಿ ಆಧ್ಯಾತ್ಮದ ಬೇರು ನಶಿಸುವುದನ್ನು ಕಂಡು ಮರುಗಿದ ದಾಸವರೇಣ್ಯರು ತಮ್ಮ ಮನುಕುಲದ ಏಳ್ಗೆಗಾಗಿ ಚಿಂತಿಸಿ ಪದ ಪದ್ಯ ಸುಳಾದಿ ಉಗಾಭೋಗಗಳಿಂದ ತತ್ವ ಪ್ರಚಾರ ಮಾಡಿದವರು ; ಸಮಾಜ ಚಿಂತಕರಾಗಿ ಅದರ ರೆಂಬೆ ಕೊಂಬೆಗಳನ್ನು ತಿದ್ದಿದವರು.

ಇಂಥ ಮಹಾನುಭಾವರಲ್ಲಿ ಹೆಸರಿಲ್ಲದೆ ವಾಙ್ಮಯ ಸೇವೆ ಸಲ್ಲಿಸಿದ ದಾಸರಲ್ಲಿ ಇತ್ತೀಚೆಗೆ ಕಂಡವರು ಶ್ರೀ ರಾಮಚಂದ್ರ ವಿಟ್ಠಲದಾಸರು. ಈ ದಾಸರ ಜೀವನ ಹುಟ್ಟು ಬಗ್ಗೆ ಯಾವ ಆಧಾರವೂ ಇಲ್ಲ. ಇವರ ಕಾಲವು ೧೭೭೦-೧೭೭೫ ಎಂದು ತಿಳಿದುಬಂದಿದೆ. ಇವರು ಯಾರ ಶಿಷ್ಯರು ಎಂಬುದು ತಿಳಿದಿಲ್ಲ. ಇವರ ಜನ್ಮನಾಮ ರಾಮಣ್ಣ. ಇವರ ಪಂಗನಾಮ ತಿಮ್ಮಣ್ಣ. ಇವರ ತಂದೆ ತಾಯಿ ವಿವರ ತಿಳಿಯುತ್ತಿಲ್ಲ. ಇವರು ಆದಾವಾನಿ ವೇಣುಗೋಪಾಲದಾಸರಿಂದ ಉಪದಿಷ್ಟರೆಂಬುದಾಗಿ ವರದೇಂದ್ರ ಸಾಹಿತ್ಯ ಮಂಡಳಿ ಪ್ರಕಾರ ತಿಳಿಯಲ್ಪಟ್ಟಿದೆ.

ಶ್ರೀರಾಮಚಂದ್ರ ವಿಟ್ಠಲದಾಸರ ಜೀವನ ಚರಿತ್ರೆ ಬಗ್ಗೆ ಯಾವ ಅಧ್ಯಯನ ನಡೆದಿಲ್ಲ. ವಿಷಯ ಸಂಗ್ರಹಣೆ ನಡೆದಿಲ್ಲ. ಇವರು ಬರೆದಿರುವ ಹಸ್ತಪ್ರತಿಗಳು ದೊರೆಯುವ ಸಂಭವ ಇದೆ. ದೊರಕಿರುವ ಸುಳಾದಿ ವಿಮರ್ಶಿಸಿದಾಗ ದಾಸರಲ್ಲಿ ರಾಮನ ಬಗ್ಗೆ, ಈಶ್ವರನ ಬಗ್ಗೆ ಹೆಚ್ಚಿನ ಆಸಕ್ತಿ ಕಂಡು ಬಂದಿದ್ದು ಇದೆ. ದಕ್ಷಿಣದ ರಾಮೇಶ್ವರ, ಕಂಚಿ, ಶ್ರೀರಂಗ ಕ್ಷೇತ್ರಗಳ ದರ್ಶನದ ವರ್ಣನೆ ಅವರ ಸುಳಾದಿಗಳಲ್ಲಿ ನೋಡಬಹುದು.

ಅವರ ಪದಜೋಡಣೆ, ಭಾವನೆ, ವಿಜಯದಾಸರ ಸಾಹಿತ್ಯದಂತೆ ಇದೆ. ಅಲ್ಲದೆ ಹರಿನಾಮಸ್ಮರಣೆಗೆ ಹೆಚ್ಚಿನ ಒತ್ತು ಕೊಟ್ಟು ತಮ್ಮ ಸುಳಾದಿಗಳನ್ನು ಇಮ್ಮಡಿಸಿದ್ದಾರೆ. ಶ್ರೀರಾಮಚಂದ್ರ ವಿಟ್ಠಲ ಅಂಕಿತ ನಾಮದಿಂದ ಭಕ್ತಿಪೂರ್ವಕವಾಗಿ ತಮ್ಮ ಸುಳಾದಿಗಳನ್ನು ಪರಮಾತ್ಮನಿಗೆ ಅರ್ಪಿಸಿದ್ದಾರೆ "ನಿನ್ನುಪಕಾರ ತೀರಿಸುವಾರನ್ನ ಕಾಣೆ ನಿನ್ನ ಮನಸ್ಸಿನ ಕಾರ್ಯ ಮಾಡಿದುದಕ್ಕೆ ಅನಂತಗುಣಪೂರ್ಣ ರಾಮಚಂದ್ರ ವಿಟ್ಠಲ" ಎಂಬ ಮಾತು ಶ್ರೀರಾಮನಿಗೆ ಅರ್ಪಿತವಾಗಿದೆ.

ಈ ರಾಮಚಂದ್ರ ವಿಟ್ಠಲ ದಾಸರಿಗೆ ಸಂಬಂಧಿಸಿದಂತೆ ಸುಳಾದಿ ಕೆಲವು ಕೀರ್ತನೆ ಒಳಗೊಂಡ ಗ್ರಂಥವನ್ನು ೧೯೬೫ರಲ್ಲಿ ಒಬ್ಬ ದಾಸ ಮಿತ್ರರು ಶ್ರೀ ಗುರುಗೋವಿಂದ ವಿಟ್ಠಲದಾಸರಿಗೆ ನೀಡಿದರಂತೆ. ಅದರಲ್ಲಿ ರಾಮಚಂದ್ರ ವಿಟ್ಠಲದಾಸರ ಸುಳ್ಳಾದಿ, ಸಾಹಿತ್ಯ, ಪರಮಾತ್ಮನ ವರ್ಣನೆ, ಕಂಡು ಈ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸಿ ಗುರುಕೃಪಾ ಗ್ರಂಥಮಾಲಾ ಮೂಲಕ ರಾಮಚಂದ್ರ ವಿಟ್ಠಲ ದಾಸರ ವಿರಚಿತ ಸೂಳ್ಳಾದಿಗಳು ಎಂಬ ಪುಸ್ತಕವನ್ನು ಪೈಂಗಳ ಸಂವತ್ಸರ - ಮಾರ್ಗಶೀರ್ಷ ಪೌರ್ಣಿಮಾ ಶ್ರೀ ದತ್ತಾತ್ರೇಯ ಜಯಂತಿ ಅಂದರೆ ೧೯೭೭ರಲ್ಲಿ ಬಿಡುಗಡೆ ಮಾಡಿದರು. ಅಲ್ಲದೆ ರಾಮಚಂದ್ರ ವಿಟ್ಠಲ ದಾಸರ ಚರಿತ್ರೆ ಬಗ್ಗೆ ಮೈಸೂರು ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಸಂಸ್ಥೆ ಹೆಚ್ಚಿನ ಮಾಹಿತಿ ಶೇಖರಿಸಿ ಈ ಬಗ್ಗೆ ಹೆಚ್ಚಿನ ಬೆಳಕು ಹರಿಸಬಹುದು ಎಂದು ತಮ್ಮ ಪುಸ್ತಕದ ಪ್ರಸ್ತಾವನೆಯಲ್ಲಿ ತಿಳಿಸಿದ್ದಾರೆ. ಕಾಲ ವಿಳಂಬವಾದರೆ ರಾಮಚಂದ್ರ ವಿಟ್ಠಲದಾಸರನ್ನು ಮರೆತು ಬಿಡಬಹುದು.

ರಾಮಚಂದ್ರ ವಿಟ್ಠಲದಾಸರ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸಿ ವಿಷಯ ಸಂಗ್ರಹಿಸಿ ಅವರ ಸಾಹಿತ್ಯ ಮತ್ತು ಅವರು ಬರೆದ ಸುಳಾದಿಗಳು ಕೀರ್ತನೆಗಳು ಹುಡುಕಿ ಪ್ರಕಟಿಸಿದರೆ ದಾಸಪ್ರೇಮಿಗಳಿಗೆ ದಾಸ ಸಾಹಿತ್ಯಕ್ಕೆ ಹೊಸ ಮುಖ ಪರಿಚಯಿಸಬಹುದು. ಯುವಜನಾಂಗ ದಾಸಪ್ರೇಮಿಗಳು ಈ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸಿಕೊಳ್ಳಲು ಶ್ರೀ ಗುರುಗೋವಿಂದ ವಿಟ್ಠಲದಾಸರು ವಿನಂತಿಸಿಕೊಂಡಿದ್ದಾರೆ.

ಅವರ ಒಂದು ಸುಳಾದಿ ಹೀಗಿದೆ :

ನಿತ್ಯ ಬಾಳದ ಅಧಮನೂ ನಾನು
ಮತ್ತೆ ಈ ಕ್ಷೇತ್ರ ಮಹಿಮೆ ಬಲ್ಲೆನೇನು
ಭೃತ್ಯರ ಮೇಲೆ ದಯಮಾಡಿ ಸುಜನಾರು ತಾವೇ
ಹತ್ತೆಗರೆದು ಪೇಳಿ ನುಡಿಸಿದಷ್ಟು
ಸತ್ಯ ಸಂಕಲ್ಪನೆ ಪ್ರೇರಣೆಯಿಂದಲ್ಲ
ಕೃತ್ಯನುಡಿದೆ ದಾರು ಪ್ರತಿಮೆಯಂತೆ
ತೆತ್ತೀಸ ಕೋಟಿ ದೇವತೆಗಳು ರಾಮನ್ನ
ತುತ್ತೀಸುತ ಇಲ್ಲಿ ನಿಂತಿಪ್ಪಾರು
ಎತ್ತ ತಿರುಗಿದಾರೆ ಪೋಗದ ಪಾಪ ಸೇತುವಿನ

ಹತ್ತೀಲಿ ಪೋಪುದು ಪುಸಿಯಲ್ಲವು
ಮತ್ತೇ ಬೇಡಿಕೊಂಬ ಫಲಗಳು ಸಿಗೋದು
ಸತ್ಯವಾಕ್ಯ ರಾಮಚಂದ್ರ ವಿಠ್ಠಲನೀವಾ

ಇನ್ನೊಂದು ಸುಳ್ಹಾದಿ ರಾಮಸೇತು ಯಾತ್ರೆಯ ಫಲ ಜನ್ಮಸಾರ್ಥಕ ಫಲ ರಾಮ ಮಂತ್ರವೇ ಸೇತು ಸ್ಥಾನ ಎಂದು ಹೇಳುತ್ತದೆ, ಅಟ್ಟತಾಳದಲ್ಲಿ. ಅದು ಹೀಗಿದೆ:

ಮಂತ್ರಗಳೊಳು ರಾಮ ಮಂತ್ರ ತಾರಕ ಮಂತ್ರ
ಮಂತ್ರ ಸಿದ್ಧಿ ಸ್ಥಾನ ಸೇತು ಸ್ಥಾನವೆ ಸ್ಥಾನ
ಎಂತಾದರು 'ಸೇತುಯಾತ್ರೆ ಮಾಡಲು ಜನ್ಮ
ಸಂತತ ಸಫಲ ರಾಮಚಂದ್ರ ವಿಟ್ಠಲ ಬಲ್ಲ.

ಅಪರೋಕ್ಷ ಜ್ಞಾನಿಗಳಾದ ರಾಮಚಂದ್ರ ವಿಟ್ಠಲ ದಾಸರು ಜೀವನ, ವೈರಾಗ್ಯ ತಿಳಿಸಿ ವ್ಯಕ್ತಿಯ ರಕ್ಕಸ, ಕಠೋರ ಮನೋಭಾವನೆ ಬಿಡಿಸಿ ಅವರನ್ನು ಸಲಹು ಎಂಬ ಅವರ ಮಾತು. ಹೀನ ಕತ್ತಲೆ ಸೂರ್ಯ ಓದಿಸಿದಂತೆ, ಜ್ಞಾನಗಳಿಂದ ಎನ್ನ ಹೃದಯ ಕಮಲದಲ್ಲಿದ್ದ ಅಜ್ಞಾನ ನೀನು ಓಡಿಸಬೇಕು ವೇಣುಗಾಪಾಲದೇವ ರಾಮಚಂದ್ರ ವಿಟ್ಠಲ ಎಂಬುದಾಗಿ ತಮ್ಮ ಒಂದು ಸೂಳ್ಹಾದಿಯ ಮೂಲಕ ಪ್ರಾರ್ಥಿಸಿದ್ದಾರೆ.

ನಲವತ್ತು ವರ್ಷಗಳು ಕಳೆದರೂ ರಾಮಚಂದ್ರ ವಿಟ್ಠಲ ದಾಸರ ಬಗ್ಗೆ ಯಾವ ವಿಶ್ವವಿದ್ಯಾಲಯಗಳು, ಅಧ್ಯಯನ ಸಂಸ್ಥೆಗಳು, ಸಾಹಿತ್ಯ ಮಂಡಳಿ, ಸಾಹಿತ್ಯ ಪರಿಷತ್ತು ಆಸಕ್ತಿ ವಹಿಸದೇ ಇರುವುದು ವಿಪರ್ಯಾಸವೇ ಎಂದು ಹೇಳಬೇಕು.

ಆದರೂ ರಾಮಚಂದ್ರ ವಿಟ್ಠಲ ದಾಸರ ಸುಳಾದಿಗಳ ಬಗ್ಗೆ ಅವರ ಪಾಂಡಿತ್ಯ ಪ್ರೌಢಿಮೆ ಬಗ್ಗೆ ದೊರೆತ ಸುಳಾದಿಗಳನ್ನು ಪ್ರಕಟಿಸಿದ ಪ್ರಕಾಶಕರಾದ ಶ್ರೀ ಗುರುಗೋವಿಂದ ವಿಟ್ಠಲದಾಸರಿಗೆ. ನಾವು ಚಿರಋಣಿ ಆಗಿರಬೇಕು. ಇನ್ನೂ ಕಾಲ ಮಿಂಚಿಲ್ಲ. ಈಗಲಾದರೂ ರಾಮಚಂದ್ರ ವಿಟ್ಠಲದಾಸರ ಬಗ್ಗೆ ತಿಳಿದವರು. ಅವರ ಬಗ್ಗೆ ಮಾಹಿತಿ ಇದ್ದವರು ಪ್ರಸ್ತುತ ಲೇಖಕರಿಗೆ ವಿವರ ನೀಡಬಹುದು.

■

# ಲಾಲ್‌ಬಾಗ್‌ನ ಪ್ರಾಚೀನ ವೀರ–ಮಾಸ್ತಿ ಸ್ಮಾರಕಗಳು

◆

ಡಾ. ಮುತ್ತುರಾಜು

ನಮ್ಮ ದೇಶದ ದಕ್ಷಿಣ ಪ್ರಸ್ಥಭೂಮಿಯಲ್ಲಿನ ಬೆಂಗಳೂರು ಲಾಲ್‌ಬಾಗ್ ಪ್ರಾಕೃತಿಕವಾಗಿ ಆಯಕಟ್ಟಿನ ಪ್ರದೇಶವಾಗಿದ್ದು ಭೌಗೋಳಿಕವಾಗಿ ಅತ್ಯಂತ ಸುರಕ್ಷಿತವೂ ಆದ ಸ್ಥಳವಾಗಿದೆ. ಬಹುಕೋಟಿ ವರ್ಷಗಳ ಹಿಂದೆ ಸಮುದ್ರದಿಂದ ಮೇಲೆದ್ದ ಈ ಪ್ರದೇಶದಲ್ಲಿ ಲಾವಾರಸದ ಗಟ್ಟಿತನದಿಂದ ರೂಪುಗೊಂಡ ಬಂಡೆ ಅತ್ಯಂತ ಕಠಿಣವಾದುದು. ಅಲ್ಲದೇ ಬೆಲೆಬಾಳುವ ಮೌಲ್ಯವನ್ನು ಹೊಂದಿದೆ. ಇದರ ಮೇಲಿನಿಂದ ನಿಂತು ನೋಡಿದರೆ ಇಡೀ ಬೆಂಗಳೂರಿನ ಅಂದಿನ ಪ್ರದೇಶ ವೀಕ್ಷಿಸಬಹುದಾದುದರಿಂದ ಇದರ ಮೇಲೆ ಕೆಂಪೇಗೌಡರ ಕಾಲದಲ್ಲಿ ಕಾವಲು ಗೋಪುರ ನಿರ್ಮಾಣಗೊಂಡಿತು. ಇಂತಹ ಮಹತ್ವದ ಸ್ಥಳದಲ್ಲಿ ಪ್ರಾಗ್ಯೈತಿಹಾಸಿಕ ಕಾಲದಿಂದಲೂ ಜನಜೀವನ ಪ್ರಕ್ರಿಯೆಯು ರೂಪುಗೊಂಡು ಬಂದಿರುವುದಕ್ಕೆ ಇಲ್ಲಿ ದೊರೆತಿರುವ ಶಿಲಾ ಆಯುಧಗಳು, ಶಿಲಾಸಮಾಧಿಗಳು ಸಾಕ್ಷ್ಯಾಧಾರಗಳಾಗಿವೆ. ಹಲವಾರು ಪ್ರಾಚೀನ ಗ್ರಾಮಗಳಿಂದ ಸುತ್ತುವರೆದಿರುವ ಈ ಪ್ರದೇಶ ವಲಯದಲ್ಲಿ ಗಂಗರು, ರಾಷ್ಟ್ರಕೂಟರು, ಚೋಳರು, ಹೊಯ್ಸಳರು, ವಿಜಯನಗರದರಸರು, ಕೆಂಪೇಗೌಡರ ಪಾಳೇಗಾರರು, ಮರಾಠರು, ಮೈಸೂರು ಅರಸರು, ಹೈದರಾಲಿ ಟಿಪ್ಪುಸುಲ್ತಾನರು ಆಳ್ವಿಕೆ ನಡೆಸಿದ್ದಾರೆ.

ಈ ವೇಳೆಯಲ್ಲಿ ಬೆಳೆದು ಬಂದ ಇತಿಹಾಸ, ಸಂಸ್ಕೃತಿ, ಧರ್ಮ, ಸಾಮಾಜಿಕತೆಯ ಕುರಿತು ಹತ್ತು ಹಲವು ಆಧಾರಗಳು ಉಳಿದು ಬಂದಿವೆ. ಇವುಗಳಲ್ಲಿ ಲಾಲ್‌ಬಾಗ್‌ನಲ್ಲಿ ಉಳಿದು ಬಂದಿರುವ ಎರಡು ಪ್ರಾಚೀನ ವೀರ–ಮಾಸ್ತಿ ಸ್ಮಾರಕಗಳು ಸಹ ಗಮನಾರ್ಹವಾದವುಗಳಾಗಿವೆ.



ಇಲ್ಲಿನ ಕಾವಲು ಗೋಪುರದ ಬಂಡೆಯ ಬುಡದಲ್ಲಿ ಉತ್ತರ ದಿಕ್ಕಿಗೆ ಮುಖಮಾಡಿ ನಿಲ್ಲಿಸಿರುವ ಪ್ರಾಚೀನ ವೀರ-ಮಾಸ್ತಿಕಲ್ಲು ಸ್ಮಾರಕವೊಂದು ನೆಲದಿಂದ ಮೂರು ಅಡಿ ಎತ್ತರ ಮತ್ತು ಐದು ಅಡಿ ಅಗಲವನ್ನು ಹೊಂದಿದ ಗ್ರಾನೈಟ್ ಕಲ್ಲಿನದಾಗಿದೆ. ಒಂದೇ ಹಂತದ ನಿರ್ಮಾಣವನ್ನು ಹೊಂದಿದೆ. ಇದರಲ್ಲಿ ವೀರ ಮತ್ತು ಈತನ ಸತಿ ಇರುವ ಚಿತ್ರಣಗಳು ಮಾತ್ರ ಚಿತ್ರಣವಾಗಿವೆ. ವೀರನು ತನ್ನ ಎಡಗಾಲನ್ನು ಮುಂದೆ ಮಾಡಿ ತನ್ನ ಎರಡೂ ಕೈಗಳಲ್ಲಿ ತನ್ನ ಎದೆಯ ಭಾಗಕ್ಕೆ ಬರುವ ಹಾಗೆ ಉದ್ದನೆಯ ಈಟಿಯನ್ನು ಹಿಡಿದುಕೊಂಡು ಹೋರಾಟ ನಡೆಸುತ್ತಿದ್ದಾನೆ. ವೀರನ ಚಿತ್ರಣದಲ್ಲಿ ಬಲಿಷ್ಠವಾದ ಶರೀರವಿದ್ದು, ಉತ್ತಮವಾದ ವೇಷಭೂಷಣಗಳಿಂದ ಅಲಂಕೃತನಾಗಿದ್ದಾನೆ. ಕಚ್ಚೆಯುಳ್ಳ ವಸ್ತ್ರಧಾರಣೆ ಇದ್ದು ಎದೆಯಲ್ಲಿ ಹಿರಿದಾದ ಹಾರ, ತೋಳು, ಮುಂಗೈ ಮತ್ತು ಕಣಕಾಲುಗಳಲ್ಲಿ ದೊಡ್ಡ ಮತ್ತು ದಪ್ಪನೆಯ ಕಡಗಗಳು ನಡುವಿನಲ್ಲಿ ಬಿಚ್ಚುಗತ್ತಿ ಶಿರದಲ್ಲಿ ಶಿರೋಮುಡಿ ಇದೆ. ಇವನೊಬ್ಬ ಪ್ರಮುಖ ನಾಯಕನಾಗಿದ್ದ ಎಂಬುದನ್ನು ಈ ಲಕ್ಷಣಗಳು ಪ್ರತಿಪಾದಿಸುತ್ತವೆ. ಈ ವೀರನ ಹಿಂಬದಿಯಲ್ಲಿರುವ ಈತನ ಸತಿಯ ಚಿತ್ರಣವೂ ಸಹ ಆಕರ್ಷಕವಾಗಿ ಮೂಡಿಬಂದಿದ್ದು ಸಮಪ್ರಮಾಣದಲ್ಲಿ ಇದೆ. ತನ್ನ ಎರಡೂ ಕೈಗಳಲ್ಲಿ ನಿಂಬೆಹಣ್ಣು ಮತ್ತು ಕನ್ನಡಿಯನ್ನು ತೋಳುಗಳನ್ನು ಮಡಚಿಕೊಂಡು ಎತ್ತಿಹಿಡಿದಿದ್ದಾಳೆ. ಮಾಸ್ತಿ ಚಿತ್ರಣಗಳಲ್ಲಿ ಬಹುತೇಕ ಸತಿ ಹೋದ ಮಹಿಳೆಯರು ಈ ಬಗೆಯ ರೂಪದಲ್ಲಿ ನಿಂತಿರುವುದು ವಿರಳ. ಆದರೆ ಇಲ್ಲಿಯ ಸತಿಯ ಚಿತ್ರಣದ ಭಂಗಿ ವಿಶೇಷವಾಗಿದೆ. ಈ ಸತಿಗೂ ಸಹ ಆಕರ್ಷಕವಾದ ಅಲಂಕಾರಯುಕ್ತ ನೆರಿಗೆಗಳುಳ್ಳ ವಸ್ತ್ರದ ಅಲಂಕಾರವಿದೆ. ಶಿರದ ಎಡಭಾಗಕ್ಕೆ ಬರುವಂತೆ ಇರುವ ಕೇಶ ತುರುಬು ಅತ್ಯಂತ ಹಿರಿದಾಗಿ ಮೂಡಿಬಂದಿದೆ. ಇವಳ ಮುಂಗೈ ಮತ್ತು ಕಣಕಾಲುಗಳಲ್ಲಿ ಹಿರಿದಾದ ಕಡಗಗಳಿವೆ. ಈ ವೀರ-ಮಾಸ್ತಿಕಲ್ಲು ಸ್ಮಾರಕದ ಮೇಲು ಭಾಗದಲ್ಲಿ ತ್ರಿಕೋನಾಕಾರದ ರೇಖೆ ಮತ್ತು ಅದರ ಮೇಲೆ ಸೂರ್ಯಚಂದ್ರರ ಚಿತ್ರಗಳಿವೆ.

ಈ ಸ್ಮಾರಕದಲ್ಲಿ ಯಾವುದೇ ಲಿಪಿಶಾಸನದ ಕುರುಹುಗಳು ಇಲ್ಲದೇ ಇರುವುದರಿಂದ ಈ ವೀರ ಮಾಸ್ತಿಕಲ್ಲಿನ ವೀರನು ಯಾವುದೋ ರಾಜಕೀಯ ಕಾರಣವೊಂದರಿಂದಾಗಿ ತನ್ನ ಶತ್ರುಗಳೊಡನೆ ಈಟಿಯಿಂದ ಹೋರಾಡಿ ಮರಣವನ್ನು ಹೊಂದಿದ್ದಾನೆ. ಅಂದಿನ ನಂಬುಗೆಯ ಪದ್ಧತಿಯಂತೆ ಪತಿಯನ್ನು ಸಾವಿನಲ್ಲೂ ಹಿಂಬಾಲಿಸುವ ಸಲುವಾಗಿ ಈ ವೀರನ ಸತಿಯು ಅಗ್ನಿಪ್ರವೇಶ ಮಾಡಿ ಪ್ರಾಣ ತ್ಯಜಿಸಿ ಪತಿಯನ್ನು ಸಾವಿನಲ್ಲೂ ಹಿಂಬಾಲಿಸಿದ್ದಾಳೆ. ಈ ಘಟನೆಯ ಸ್ಮಾರಕವೇ ಆಗಿ ಈ ಪ್ರಾಚೀನ ವೀರ-ಮಾಸ್ತಿಕಲ್ಲು ನಿರ್ಮಾಣವಾಗಿದೆ.

ವೀರ ಮತ್ತು ತ್ಯಾಗದ ಪ್ರತೀಕವಾಗಿರುವ ಈ ಸ್ಮಾರಕದ ಪ್ರಾಚೀನತೆಯನ್ನು ಕ್ರಿ.ಶ. ಸುಮಾರು ಹತ್ತನೆಯ ಶತಮಾನವೆಂದು ವೀರಗಲ್ಲುಗಳ ಪ್ರಾಚೀನ ಲಕ್ಷಣಗಳಿಂದ ನಿರ್ಧರಿಸಬಹುದಾಗಿದೆ.



ಇಲ್ಲಿಯೇ ಬಳಿಯಲ್ಲಿ ನಂದಿಯೊಂದರ ನಾಲ್ಕು ಅಡಿ ಉದ್ದದ ಶಿಲಾಮೂರ್ತಿಯೊಂದಿದ್ದು ಇದರ ಮೇಲೆ ಅಂದರೆ ಬೆನ್ನಿನ ಭಾಗದಲ್ಲಿ ಶಿವಲಿಂಗವನ್ನು ಇರಿಸಲು ಮಾಡಿರುವ ವಿಶಾಲವಾದ ಕುಳಿ ಇದೆ. ಈ ಬಗೆಯ ನಂದಿ ಮೂರ್ತಿಗಳು ಅತ್ಯಂತ ವಿರಳವಾಗಿದ್ದು ಲಾಲ್‌ಬಾಗ್‌ನ ಈ ಪ್ರದೇಶದಲ್ಲಿ ದೊರೆತಿರುವುದು ಮಹತ್ವದ್ದಾಗಿದೆ. ಬಳಿಯ ಬಸವನ ಗುಡಿಯ ಕಹಳೆ ಬಂಡೆಯ ನಂದಿ ವಿಗ್ರಹ ಮತ್ತು ಈ ನಂದಿಮೂರ್ತಿಗಳ ಆಧಾರಗಳಿಂದ ಈ ಭಾಗದಲ್ಲೆಲ್ಲ ವೃಷಭಾರಾಧನೆ ಜನಪದರಲ್ಲಿ ಅತ್ಯಂತ ಕಾಳಜಿಯಿಂದ ಇದ್ದಿತೆಂಬುದು ವ್ಯಕ್ತವಾಗುತ್ತದೆ. ಈ ನಂದಿಮೂರ್ತಿಯ ಕಾಲ್ಗಳ ಭಾಗ ಮತ್ತು ಮುಖದ ಭಾಗ ಒಡೆದು ಹೋಗಿರುವುದರಿಂದ ಇದನ್ನು ಪೂಜಿಸದೆ ಇಲ್ಲಿ ಇರಿಸಲಾಗಿದೆ. ಪ್ರಾಚೀನ ಕಾಲದಲ್ಲಿ ಈ ನಂದಿಗೊಂದು ಮಂಟಪವೋ ಅಥವಾ ಪೂಜಾಸ್ಥಳವೋ ಈ ಭಾಗದಲ್ಲಿ ಇದ್ದಿರಬೇಕು ಎಂದು ತಿಳಿಯುತ್ತದೆ. ಕ್ರಿಶ. ಸುಮಾರು ೧೫ನೇ ಶತಮಾನದ ವಿಜಯನಗರ ಸಾಮ್ರಾಜ್ಯದ ಕಾಲಕ್ಕೆ ಸೇರಿದುದಾಗಿದೆ ಈ ಮೂರ್ತಿ.



ಇಲ್ಲಿನ ಗಾಜಿನ ಮನೆಯ ಎದುರಿಗಿರುವ ಬ್ಯಾಂಡ್‌ಸ್ಟ್ಯಾಂಡ್ ಬಳಿಯ ವೃತ್ತವೊಂದಕ್ಕೆ ಹೊಂದಿಸಿ ನಿಲ್ಲಿಸಿರುವ ಮತ್ತೊಂದು ಪ್ರಾಚೀನ ವೀರ-ಮಾಸ್ತಿಕಲ್ಲು ಸ್ಮಾರಕವೊಂದು ಐದು ಅಡಿ ಎತ್ತರ ಮತ್ತು ಮೂರು ಅಡಿ ಅಗಲವನ್ನು ಹೊಂದಿದೆ. ಎರಡು ಹಂತಗಳಲ್ಲಿ ಇದನ್ನು ಚಿತ್ರಣವಾಗಿ ಮೂಡಿಸಲಾಗಿದೆ. ಸ್ಥಳೀಯ ಗ್ರಾನೈಟ್ ಇದಾಗಿದ್ದು ಇಲ್ಲಿಯ ಬಂಡೆಯ ಭಾಗವನ್ನು ಕಂಡರಿಸಿಕೊಂಡು ಈ ಸ್ಮಾರಕಕ್ಕೆ ಉಪಯೋಗಿಸಿಕೊಳ್ಳಲಾಗಿದೆ. ಈ ಸ್ಮಾರಕದಲ್ಲಿ ಓರ್ವ ವೀರ ಮತ್ತು ಓರ್ವ ಅಪ್ಸರಾಸ್ತ್ರೀ ಮತ್ತು ಇಬ್ಬರು ವೀರರ ಸತಿಯರ ಚಿತ್ರಣಗಳಿವೆ.

ವೀರನ ಬಲಭಾಗದಲ್ಲಿ ನಿಂತಿರುವ ಈತನ ಸತಿಯರ ಚಿತ್ರಣವು ಅಲಂಕಾರ ಯುಕ್ತವಾಗಿ ಮೂಡಿಬಂದಿದ್ದು, ಇವರಿಗೆ ಆಕರ್ಷಕವಾದ ನೆರಿಗೆಗಳುಳ್ಳ ವಸ್ತ್ರಗಳ

ಪೋಷಾಕುಗಳಿವೆ. ಶಿರದಲ್ಲಿ ಹಿರಿದಾದ ತುರುಬು ಗಂಟುಗಳಿವೆ. ಎದೆಯ ಮೇಲಿನ ಉಬ್ಬಿದ ಕುಚಗಳು ಕೊರಳಲ್ಲಿ ಮಣಿಸರಗಳಿವೆ. ಸುಂದರವಾದ ಮುಖಲಕ್ಷಣಗಳಿರುವ ಇವರ ಬಲಗೈಗಳಲ್ಲಿ ಕನ್ನಡಿಗಳಿದ್ದು ಎಡದ ಕೈಗಳಲ್ಲಿ ನಿಂಬೆಹಣ್ಣುಗಳನ್ನು ಕೈ ಇಳಿಬಿಟ್ಟು ಹಿಡಿದುಕೊಂಡಿದ್ದಾರೆ. ಇವರ ಶಿರೋಮುಡಿಗಳ ಹಿಂದೆ ಅಲಂಕಾರಯುಕ್ತವಾದ ಶಿರೋಮುಡಿಗಳಿದ್ದು ಕರ್ಣಗಳಲ್ಲಿ ಹಿರಿದಾದ ಕುಂಡಲಗಳಿವೆ. ಈ ಸತಿಯರಿಬ್ಬರ ಎಡಭಾಗದಲ್ಲಿ ನಿಂತಿರುವ ವೀರನ ಚಿತ್ರಣವು ಹಿರಿದಾದ ಚಿತ್ರಣವಾಗಿದ್ದು ತನ್ನ ಇಳಿಬಿಟ್ಟ ಬಲದ ಕೈನಿಂದ ಖಡ್ಗವನ್ನು ಹಿಡಿದಿದ್ದಾನೆ. ಎಡದ ಕೈನಲ್ಲಿ ಬಳಸಿಕೊಂಡಿರುವ ವಸ್ತ್ರವನ್ನು ತಬ್ಬಿ ಹಿಡಿದುಕೊಂಡಿದ್ದಾನೆ. ಇವನಿಗೂ ಸಹ ಉತ್ತಮ ವೇಷಭೂಷಣಗಳಿವೆ. ಶಿರದಲ್ಲಿ ತುರುಬು ಕಿವಿಗಳಲ್ಲಿ ಕುಂಡಲಗಳಿವೆ ಕೊರಳಲ್ಲಿ ಹಾರಗಳಿವೆ. ನಗುಮೊಗದ ಮುಖಲಕ್ಷಣ ಇವನಿಗೆ ಇದೆ. ವೀರಗಚ್ಚೆಯ ಉಡುಗೆ ಇವನಿಗಿದ್ದು ಅಲಂಕಾರಯುಕ್ತವಾಗಿ ಮೂಡಿಬಂದಿದೆ. ತನ್ನ ಬಲದ ಕಾಲಿನ ಮಂಡಿಯನ್ನು ಮಡಸಿ ಎಡಭಾಗಕ್ಕೆ ಒರಗಿ ನಿಂತಿರುವಂತೆ ಈತನ ಚಿತ್ರಣವಿದೆ.

ಈ ವೀರನ ಎಡಭಾಗದಲ್ಲಿ ಮಡಿದಿರುವ ಈತನನ್ನು ಸ್ವರ್ಗಕ್ಕೆ ಕರೆದೊಯ್ಯಲು ಅಪ್ಸರಾ ಸ್ತ್ರೀಯು ಹಿರಿದಾದ ಛತ್ರಿಯೊಂದನ್ನು ಈತನ ಶಿರೋಮುಡಿಗೆ ಬರುವಂತೆ ಹಿಡಿದು ನಿಂತಿದ್ದಾಳೆ. ಇವಳ ಶಿರೋಮುಡಿ ಸತಿಯರ ಶಿರೋಮುಡಿಗಳಿಗಿಂತ ಭಿನ್ನವಾಗಿ ಲಂಬವಾಗಿ ಕಟ್ಟಿದೆ. ಇವಳಿಗೂ ಸಹ ಅಲಂಕಾರಯುಕ್ತ ವೇಷಭೂಷಣಗಳಿವೆ.

ಈ ಸ್ಮಾರಕದಲ್ಲಿರುವ ವೀರನು ಯಾವುದೋ ರಾಜಕೀಯ ಕಾರಣದಿಂದ ಶತ್ರುಗಳೊಡನೆ ಹೋರಾಡಿ ವೀರಮರಣವನ್ನು ಅಪ್ಪಿದ್ದಾನೆ. ಈತನ ಇಬ್ಬರು ಸತಿಯರು ಅಂದಿನ ನಂಬುಗೆಯ ಪದ್ಧತಿಯಂತೆ ಅಗ್ನಿಪ್ರವೇಶ ಮಾಡಿ ಸಹಗಮನ ಪದ್ಧತಿ ಅನುಸರಿಸಿ ದೇಹತ್ಯಾಗ ಮಾಡಿ ಸಾವಿನಲ್ಲೂ ಪತಿಯನ್ನು ಹಿಂಬಾಲಿಸಿದ್ದಾರೆ. ವೀರನನ್ನು ಅಪ್ಸರಾಸ್ತ್ರೀಯು ದೇವಲೋಕಕ್ಕೆ ಕರೆದುಕೊಂಡು ಹೋಗಿದ್ದಾಳೆ.

ಕ್ರಿ.ಶ. ಸುಮಾರು ಹದಿಮೂರನೇ ಶತಮಾನಕ್ಕೆ ಸೇರುವ ಈ ವೀರ-ಮಾಸ್ತಿಕಲ್ಲು ಸ್ಮಾರಕ ಲಾಲ್‌ಬಾಗ್‌ನ ಈ ಭೂಮಿಯಲ್ಲಿ ವೀರತನ ಮತ್ತು ತ್ಯಾಗವನ್ನು ಪ್ರತಿಪಾದಿಸುತ್ತಿದೆ. ಇವುಗಳಿಗೆ ಇಲ್ಲಿ ಸೂಕ್ತ ರಕ್ಷಣೆಯ ಅಗತ್ಯವಿದ್ದು ದೃಷ್ಟಿಗೋಚರ ಸ್ಥಳದಲ್ಲಿ ವಿವರ ಸಹಿತ ಫಲಕದ ಅಗತ್ಯವಿದೆ.

■

# ವಿಜಯನಗರ ಮತ್ತು ಚೀನಾ



**ಡಾ. ಕೆಳದಿ ಗುಂಡಾಜೋಯಿಸ್**

ವಿಜಯನಗರ ಚರಿತ್ರೆಯಲ್ಲಿ ವಿನ್‌ಸೆಂಟ್ ಸ್ಮಿತ್‌ರವರ ಮಧ್ಯಕಾಲೀನ ಇತಿಹಾಸ ಕುರಿತಂತೆ ಚಕ್ರವರ್ತಿಯು ಚೀನಾ ದೇಶಕ್ಕೆ ರಾಯಭಾರಿಯನ್ನು ಕಳಿಸಿದ ಮಾಹಿತಿಯೊಂದು ಇಂಡಿಯನ್ ಆ್ಯಂಟಿಕ್ವೆರಿ ಸಂ. XLV- ೧೯೧೬ ದಾಖಲಾಗಿರುವುದು ಕಂಡುಬರುತ್ತದೆ. ಅಧ್ಯಯನಯೋಗ್ಯವಾದ ಇದನ್ನು ಸಂಶೋಧಕರ ಗಮನಕ್ಕಾಗಿ ಪ್ರಸ್ತುತಪಡಿಸುತ್ತಿದ್ದೇನೆ.

(Medieaval Researches Vol. II PP 211; Kegan Paul : Ed 1910)

When reading Bretachnediex mediaeval Researches (Vol II P 211 Kegan Paul, ed 1910) I came across the following passage briefly describring an embassy from the Raya of Vijayanagar to the emperor of China ; which does not seem to be in the recorrection of Indian historians.

A - NAN - GUNG - DE a kingdom in SI-TIEN in 1374 Bu-ha-lu, The ruler of this country, sent his "chief exprainex" (Kiang - chu), by name Bi-ni-si with tribute to the chinese court. He brought among other things a stone which had the property of neutralizing poison. After this no embassy from that country was seen in China. That is all the Ming shi records with respect to this Indian kingdom.

Bretschneider points out that si-tien (Western Heaven) is a chinese name applied to India in some chinese translations of Buddhist works, He also correctly indentifies A-nan-gung-de with 'Annagoondy',[1] the Kanarese name sometimes used as an equivalent of Vijayanagar.

A short article in the Imperial Gazetter 1908 makes the identification more precise 'Anegundi' old town and fortress in Raichur District, Hydarabad State[2] situated in 15⁰ 21' N. and 76⁰ 30' E on the left bank of the Tungabhadra. Population (1901) 2,266. It is the seat of the Rajas of Anegundi, who are lineal descendants of the kings of

Vijayanagar. Anegundi and Vijayanagar on the opposite bank are popularly idenitified with the Kishkinda of the Ramayana....Anegundi means "Elephant pit", being the place where the elephants of the Vijayanagar Rajas were kept.

Thus there cannot be any doubt concerning the kingdom referred to by the chinese author.

Allthough Bretschneider was not in a position to identify the prime who sent the embassy, there is no difficulty in doing so. He was Bukka I who enjoyed a long reign as Raya from an uncerta date to AD 1376[3] and attained the great power. His history, so far as known is related at length by Mr. Sewel (a forgotten empire 1900) who did not apparently happen to notice the record of the mission to China. Although Bukka suffered severe defeats at the hands of the sultans of Bijapur, and never ventured to assume the full imperial titles, he is said by numig the portugnese chlonicler, to have 'couquered many lands' and to have been at the time of his death 'not less feared than esteemed, and obeyed by all in his kingdom.[4] The reason for the sending an embassy to china is not apparent, and I do not understand the meaning of the designation of his envory as 'chief explainese' (Kiang chu). Nor can I give the equivalent of his name Bi-mi-si. It may be some name beginuing with Vinaya.

Bretschneidier notes that in 1443, Shahrukh, son of the mighty Timur, sent an embassy to the king of Vijayanagar who was then Devaraya II. The reference is to the welknown mission of Abdul Razak.[5]

ಈ ಉಲ್ಲೇಖನದ ದಾಖಲೆಗಳನ್ನು ಆಧರಿಸಿ ಆಕರಗಳೊಂದಿಗೆ ಸಂಶೋಧನೆ ನಡೆಸುವುದು ಸೂಕ್ತ. ರಾಬರ್ಟ್ ಸೀವೆಲ್‌ರವರ Never to forgotten Empire ೧೯೦೦ರಲ್ಲಿ ರಚನೆಯಾಗಿದ್ದು Bretachneider medieval Research (1910) ರ ಆಕರಾಂಶಗಳೂ ಪರಿಶೀಲನಾರ್ಹವಾಗಿದೆ.

## ಅಡಿಟಿಪ್ಪಣಿ

೧. ಈಗಿನ ಆನೆಗೊಂದಿ.

೨. ಆನೆಗೊಂದಿ ಈಗ ಕರ್ನಾಟಕ ರಾಜ್ಯದಲ್ಲಿದೆ.

೩. as iA; Ǩrishna Shastry in Ânu. Rep, A.S. India 1907-8 pp 242, senell (p. 47) placed the death of Bukkas about AD 1379, but the earlieze date 1376 seems to be settled by epigraphic evidence.

೪. A Forgotten Empire, P. 300.

೫. See Eliot and Dowson, History of India IV 89, Sewell (op. cit.,) also discusses the ambassadors narrative.

# ಕರ್ಪೂರ ಶ್ರೀನಿವಾಸರಾಯರು

◆

## ಜಿ.ಎನ್. ನರಸಿಂಹಮೂರ್ತಿ

ಕನ್ನಡ ಸಾಹಿತ್ಯ ಪರಿಷತ್ತಿನ ಈಗಿನ ಪುಸ್ತಕ ಮಾರಾಟ ವಿಭಾಗದ ಕಟ್ಟಡದ ಬಾಗಿಲಿನ ಒಂದು ಪಕ್ಕದಲ್ಲಿ ಆ ಕಟ್ಟಡಕ್ಕೆ ಶಿಲಾನ್ಯಾಸವನ್ನು ಮಾಡಿದ ದಾಖಲೆ ಇದೆ. ಹಾಗೆ ಅದರ ಶಿಲಾನ್ಯಾಸ ಮಾಡಿದವರು ಶ್ರೀ ಕರ್ಪೂರ ಶ್ರೀನಿವಾಸರಾಯರು. ಕನ್ನಡ ಸಾಹಿತ್ಯ ಪರಿಷತ್ತಿನ ಸಂಸ್ಥಾಪಕರಲ್ಲಿ ಒಬ್ಬರು. ಕರ್ನಾಟಕದ ರಾಜ್ಯದ ಮುಖ್ಯ ಇಂಜಿನಿಯರ್ ಆಗಿ ಸೇವೆ ಸಲ್ಲಿಸಿದವರು. ಅವರು ಯಾವುದೇ ರೀತಿಯ ಪ್ರಚಾರವನ್ನೂ ಬಯಸಲಿಲ್ಲ. ನಿಸ್ವಾರ್ಥ ಸೇವೆಗೆ ಮಾದರಿಯಾಗಿದ್ದವರು. ಅವರ ಒಡನಾಡಿಗಳೆಲ್ಲ ಬಹುಮಟ್ಟಿಗೆ ಇಂತಹವರೇ ಆಗಿದ್ದರು. ಓದಿದ್ದು ಬಿಎಸ್‌ಸಿ ಮತ್ತು ಇಂಜಿನಿಯರಿಂಗ್‌ಗಳಾಗಿದ್ದರೂ ಕನ್ನಡ, ಸಂಸ್ಕೃತ, ಇಂಗ್ಲಿಷ್ ಭಾಷೆಗಳಲ್ಲಿ ವಿದ್ವಾಂಸರಾಗಿದ್ದರು. ಸಾರ್ಥಕ ಬದುಕನ್ನು ಬಾಳಿ ನಾಡು ನುಡಿಗಳಿಗೆ ಸೇವೆಯನ್ನು ಸಲ್ಲಿಸಿದರು.

ಕರ್ಪೂರ ಶ್ರೀನಿವಾಸರಾಯರು ೧೮೬೩ರಲ್ಲಿ ಜನಿಸಿದರು. ತಂದೆ ಸುಬ್ಬರಾಯರು. ತಾಯಿ ವೆಂಕೂಬಾಯಿ. ಸೋದರರು ಇಬ್ಬರು : ರಾಘವೇಂದ್ರರಾವ್ ಮತ್ತು ಹನುಮಂತರಾಯರು. ಸೋದರಿಯರು : ಜೀವೂಬಾಯಿ, ಪದ್ಮಾವತೀಬಾಯಿ.

ಕರ್ಪೂರ ಶ್ರೀನಿವಾಸರಾಯರ ಹಿಂದಿನವರು ಬಹಳ ಸ್ಥಿತಿವಂತರಾಗಿದ್ದವರು. ತಾತ ಶ್ರೀನಿವಾಸಯ್ಯನವರು ಮರಾಠಾ ಸೈನ್ಯದಲ್ಲಿ ಅಧಿಕಾರಿಯಾಗಿದ್ದರು. ಒಮ್ಮೆ ಜಾನ್ ಮಾಲ್ಕಂ ಎಂಬ ಬ್ರಿಟಿಷ್ ಅಧಿಕಾರಿಯೊಬ್ಬನ ಪ್ರಾಣವನ್ನು ಉಳಿಸಲು ನೆರವು ನೀಡಿದ್ದರು. ಅದಕ್ಕಾಗಿ ಅವನು ಅವರಿಗೆ ಮುತ್ತು ರತ್ನಗಳು, ಚಿನ್ನ, ವಜ್ರಾಭರಣಗಳು ತುಂಬಿದ್ದ ಒಂದು ಸಂದೂಕವನ್ನು ನೀಡಿ ಇಂಗ್ಲೆಂಡಿಗೆ ಹೊರಟುಹೋದನು. ಆದರೆ ಅದು ನ್ಯಾಯಮಾರ್ಗದಲ್ಲಿ ಬಂದ ಸಂಪತ್ತಲ್ಲ ಎನ್ನುವ ಕಾರಣಕ್ಕೆ ಅವರು ಅದನ್ನು ಒಲ್ಲದೆ ತಿರುಪತಿಗೆ ಹೋಗಿ ಹುಂಡಿಯಲ್ಲಿ ಎಲ್ಲ ಸಂಪತ್ತನ್ನೂ ಹಾಕಲು ಪ್ರಯತ್ನಿಸಿದರು. ಎಲ್ಲ ವಿಚಾರಗಳನ್ನು ತಿಳಿದುಕೊಂಡ ದೇವಸ್ಥಾನದ ಆಡಳಿತ ವರ್ಗ ಆ ಸಂಪತ್ತನ್ನು ಸ್ವೀಕರಿಸಲಿಲ್ಲ. ಆ ವೇಳೆಗೆ ಶ್ರೀನಿವಾಸಯ್ಯನವರು ತಮ್ಮ ಕೆಲಸವನ್ನು ಬಿಟ್ಟಿದ್ದರು. ಆದರೂ ಆ ಹಣವನ್ನು

ಒಂದಿಷ್ಟೂ ಸ್ವಂತಕ್ಕೆ ಬಳಸದೆ, ದೇವರ ಸೇವೆಗೆ, ಪ್ರಯಾಣಿಕರ ಒಳಿತಿಗೆ ಅದನ್ನು ಖರ್ಚು ಮಾಡುತ್ತಿದ್ದರು. ನಿತ್ಯವೂ ದೇವಸ್ಥಾನದ ಪ್ರಾಕಾರದ ಗೋಡೆಗಳ ಮೇಲೆ ಭಾರೀ ಪ್ರಮಾಣದಲ್ಲಿ ಕರ್ಪೂರವನ್ನು ಉರಿಸುತ್ತ ರಾತ್ರಿ ಪ್ರಯಾಣಿಕರಿಗೆ ಬೆಳಕನ್ನು ಒದಗಿಸುತ್ತಿದ್ದರು. ಇದರಿಂದಾಗಿ ಅವರಿಗೆ ಕರ್ಪೂರದವರು ಎನ್ನುವ ಹೆಸರು ಬಂದಿತು. ಆದರೆ ಒಮ್ಮೆ ಅವರ ಕೆಲಸಗಾರರೇ ಅವರನ್ನು ಬಂಧನದಲ್ಲಿಟ್ಟು ಅವರ ಎಲ್ಲಾ ಸಂಪತ್ತನ್ನೂ ಅಪಹರಿಸಿದರು. ಪ್ರಾಣವನ್ನುಳಿಸಿಕೊಂಡರೆ ಸಾಕು ಎಂದು ದಂಪತಿಗಳು ಬೆಂಗಳೂರಿಗೆ ವಾಪಸು ಬಂದು ಅವರಿವರ ನೆರವಿನಿಂದ ಯಾವುದೋ ಸಣ್ಣ ಉದ್ಯೋಗದಲ್ಲಿ ಜೀವನ ಸವೆಸಿದರು. ಅವರ ಮಗ ಹನುಮಂತರಾಯರು ಅಷ್ಟೇನು ಒಳ್ಳೆಯ ಉದ್ಯೋಗದಲ್ಲಿರಲಿಲ್ಲ. ಹನುಮಂತರಾಯರ ಮಗ ಸುಬ್ಬರಾಯರಿಗೆ ಚಿತ್ರದುರ್ಗದ ವೆಂಕೂಬಾಯಿಯರೊಡನೆ ವಿವಾಹವಾಯಿತು. ಅವರಿಗೆ ಎರಡನೆಯ ಮಗನಾಗಿ ಜನಿಸಿದವರೇ ಕರ್ಪೂರ ಶ್ರೀನಿವಾಸರಾಯರು.

ಶ್ರೀನಿವಾಸರಾಯರಿಗೆ ಓದುವುದರಲ್ಲಿ ಬಹಳ ಆಸಕ್ತಿ. ಅವರು ಶಾಲೆಗೆ ಸೇರುವಾಗ ಸಂಸ್ಕೃತ ತರಗತಿಗೆ ಒಂದು ರೂಪಾಯಿ ಶುಲ್ಕ. ಇಂಗ್ಲಿಷೋ ಕನ್ನಡವೋ ಆದರೆ ಕೇವಲ ನಾಲ್ಕಾಣೆ. ಶ್ರೀನಿವಾಸರಾಯರಿಗೂ ಅವರ ತಂದೆ ಒಂದು ರೂಪಾಯಿ ಕೊಟ್ಟಿದ್ದರಂತೆ. ಆದರೆ ದುರದೃಷ್ಟವಶಾತ್ ನೀರಿನಲ್ಲಿ ಬಿದ್ದು ಕಳೆದು ಹೋಯಿತು. ಹಾಗಾಗಿ ಅವರು ಕನ್ನಡ ಮತ್ತು ಇಂಗ್ಲಿಷನ್ನೇ ವ್ಯಾಸಂಗ ಮಾಡಿದರು. ಮುಂದೆ ಅವರು ಒಂದು ಪರೀಕ್ಷೆಯನ್ನು ಬರೆಯಬೇಕಾದ ದಿನ ತಂದೆ ತೀರಿಕೊಂಡರು. ಧೈರ್ಯವಂತರಾದ ಶ್ರೀನಿವಾಸರಾಯರು ಪರೀಕ್ಷೆಯನ್ನು ಮುಗಿಸಿಬಂದು ನಂತರ ಸಂಸ್ಕಾರ ಕಾರ್ಯಗಳನ್ನು ನೆರವೇರಿಸಿದರು. ಸ್ವಲ್ಪಕಾಲ ಅವರು ಮೈಸೂರು ಕೋಲಾರಗಳಲ್ಲಿ ಅಭ್ಯಾಸ ನಡೆಸಿ ಪುನಃ ಬೆಂಗಳೂರಿಗೆ ಬಂದರು. ಅವರು ಎಫ್.ಎ. ಪರೀಕ್ಷೆಗೆ ಓದುತ್ತಿದ್ದಾಗ ಅವರ ಶಾಲೆಯ ಪ್ರಿನ್ಸಿಪಾಲ್ ಛಾರ್ಲ್ಸ್‌ವರ್ಟ್ಸ್ ಎಂಬ ಬ್ರಿಟಿಷ್ ವಿದ್ವಾಂಸ ಇವರ ಬುದ್ಧಿಮತ್ತೆಯನ್ನು ಗಮನಿಸಿ ವಿದ್ಯಾರ್ಥಿವೇತನವನ್ನು ಒದಗಿಸಿದರು. ಎಫ್ಎ ಪರೀಕ್ಷೆಯಲ್ಲಿ ಅತ್ಯುತ್ತಮ ಅಂಕಗಳೊಂದಿಗೆ ತೇರ್ಗಡೆಯಾದ ಶ್ರೀನಿವಾಸರಾಯರಿಗೆ ಮುಂದೆ ಓದಲು ಆರ್ಥಿಕ ಬೆಂಬಲವಿರಲಿಲ್ಲ. ಆದರೆ ಛಾರ್ಲ್ಸ್‌ವರ್ಟ್ಸ್ ಅವರಿಗೆ ಧೈರ್ಯ ಹೇಳಿ ಪುಣೆಗೆ ಓದಲು ಕಳಿಸಿ ಅಲ್ಲಿನ ತಮ್ಮ ಸ್ನೇಹಿತರ ಮೂಲಕ ಶ್ರೀನಿವಾಸರಾಯರಿಗೆ ಎಲ್ಲ ರೀತಿಯ ಅನುಕೂಲಗಳನ್ನೂ ದೊರಕಿಸಿಕೊಟ್ಟರು.

ಪುಣೆಯಲ್ಲಿ ಇಂಜಿನೀರಿಂಗ್ ಡಿಪ್ಲೊಮಾಕ್ಕೆ ಸೇರಿದ ಶ್ರೀನಿವಾಸರಾಯರಿಗೆ ಅತ್ಯುತ್ತಮ ಸಹಪಾಠಿಗಳು ದೊರೆತರು. ಅವರಲ್ಲಿ ಶ್ರೀ ಗೋಪಾಲಕೃಷ್ಣ ಗೋಖಲೆಯವರು ಪ್ರಮುಖರು. ಆದರೆ ಗೋಖಲೆಯವರು ಇಂಜಿನೀರಿಂಗ್ ಪದವಿ ಪೂರ್ಣಮಾಡಲಿಲ್ಲ. ಜೊತೆಗೆ ಅಲ್ಲಿ ಅನೇಕ ಇತರ ಕನ್ನಡಿಗರು ಇದ್ದರು. ವಿಶ್ವೇಶ್ವರಯ್ಯನವರು ಇಂಜಿನೀರಿಂಗಿನಲ್ಲಿ ಶ್ರೀನಿವಾಸರಾಯರಿಗಿಂತ ಒಂದು ಅಥವಾ ಎರಡು ವರ್ಷ ಹಿರಿಯರು. ವಿಶ್ವೇಶ್ವರಯ್ಯನವರಿಗೆ ಬೊಂಬಾಯಿ ಸರ್ಕಾರದಲ್ಲಿ ಕೂಡಲೆ ಕೆಲಸ ದೊರೆಯಿತು. ಶ್ರೀನಿವಾಸರಾಯರು ಇಂಜಿನೀರಿಂಗನ್ನು ಮಾಡುತ್ತಲೇ ಬಿ.ಎಸ್‌ಸಿ. ಪದವಿಯನ್ನೂ

ಮುಗಿಸಿದರು. ಆಗ ಇಂಜಿನೀರಿಂಗ್ ಎಂದರೆ ಎಲ್‌ಸಿಇ (ಲೈಸೆನ್ಸ್‌ಡ್ ಸಿವಿಲ್ ಇಂಜಿನಿಯರ್) ಎಂಬ ಡಿಪ್ಲೊಮಾ ಪದವಿ. ಇಂಜಿನೀರಿಂಗ್ ಪದವಿ ಮುಗಿಸುತ್ತಲೇ ಅವರಿಗೂ ಬೊಂಬಾಯಿ ಸರ್ಕಾರದಲ್ಲಿ 'ಅಪ್ರೆಂಟಿಸ್ ಇಂಜಿನಿಯರ್' ಉದ್ಯೋಗ ದೊರೆಯಿತು. ಅವರ ಸಹಪಾಠಿಗಳಾದ ಇತರ ಕನ್ನಡಿಗರಿಗೂ ಅಂತಹದೇ ಉದ್ಯೋಗ ದೊರೆಯಿತು. ಆಗ ಬೊಂಬಾಯಿ ಸರ್ಕಾರದಲ್ಲಿ ಬಹು ಸಂಖ್ಯೆಯಲ್ಲಿ ಕನ್ನಡಿಗ ಇಂಜಿನಿಯರುಗಳಿದ್ದರು. ಈ ಕುರಿತು ಒಂದು ಪ್ರಸಂಗವನ್ನು ಉಲ್ಲೇಖಿಸಬಹುದು. ಶ್ರೀನಿವಾಸರಾಯರ ಸ್ನೇಹಿತರಲ್ಲೊಬ್ಬರು ಪೂನಾದಲ್ಲಿ ಒಮ್ಮೆ ಗೋಖಲೆಯವರನ್ನು ನೀವೇಕೆ ಇಂಜಿನಿಯರ್ ಆಗಿಲ್ಲ ಎಂದುದಕ್ಕೆ ಅವರು ತಮಾಷೆಯಾಗಿ 'ಇಲ್ಲೆಲ್ಲ ಮೈಸೂರು ದೆವ್ವಗಳೇ ತುಂಬಿಕೊಂಡಿದ್ದಾಗ ನಾವು ಸ್ಪರ್ಧಿಸುವುದು ಹೇಗೆ?' ಎಂದು ಹೇಳಿ ನಕ್ಕದ್ದನ್ನು ಮತ್ತು ಆಗ ತಮ್ಮ ಸಹಪಾಠಿಗಳಾಗಿದ್ದ ಸುಬ್ಬರಾವ್, ಹೆಚ್ ರಾಮಣ್ಣ, ಬಿ. ನಂಜುಂಡಯ್ಯ ಮತ್ತು ಬಿ. ಕೃಷ್ಣರಾವ್ ಅವರುಗಳನ್ನು ಕರ್ಪೂರ ಶ್ರೀನಿವಾಸರಾಯರೇ ನೆನಪಿಸಿಕೊಂಡ ಪ್ರಸಂಗವನ್ನು ನವರತ್ನ ರಾಮರಾಯರು ಒಂದೆಡೆ ದಾಖಲಿಸಿದ್ದಾರೆ.[೧] ಅಗ ಕನ್ನಡಿಗರದೇ ಅಲ್ಲಿ ಮೇಲುಗೈ. ಈಗಲೂ ಬೊಂಬಾಯಿ ಮತ್ತು ಮಹಾರಾಷ್ಟ್ರದ ಇತರೆಡೆಗಳಲ್ಲಿ ಕನ್ನಡಿಗರು ವಿಪುಲ ಸಂಖ್ಯೆಯಲ್ಲಿ ಇಂಜಿನೀರಿಂಗ್ ವೃತ್ತಿಯಲ್ಲಿ ಇರುವುದನ್ನು ನೆನೆಯಬಹುದು. ಗೋಖಲೆ ಮತ್ತು ಶ್ರೀನಿವಾಸರಾಯರಿಗೆ ಇದ್ದಂತಹ ಆತ್ಮೀಯತೆ ತುಂಬ ಉತ್ಕಟವಾಗಿ ವ್ಯಕ್ತವಾಗುವುದು ಗೋಖಲೆಯವರು ತೀರಿಕೊಂಡ ಸಂದರ್ಭದಲ್ಲಿ. ಆಗ ಬೆಂಗಳೂರಿನಲ್ಲಿ ಗೋಖಲೆಯವರಿಗಾಗಿ ಒಂದು ಸಂತಾಪಸೂಚಕ ಸಭೆಯನ್ನು ಏರ್ಪಡಿಸಬೇಕೆಂದು ತೀರ್ಮಾನಿಸಲಾಯಿತು. ಅದಕ್ಕೆ ವಿಶ್ವೇಶ್ವರಯ್ಯನವರನ್ನು ಅಧ್ಯಕ್ಷತೆ ವಹಿಸಲು ಕೇಳಬೇಕೆಂದು ಸಹ ತೀರ್ಮಾನವಾಯಿತು. ವಿಶ್ವೇಶ್ವರಯ್ಯನವರಿಗೆ ಅದು ತಿಳಿದಾಗ ಅವರು ತಾವು ಖಂಡಿತ ಸಭೆಗೆ ಬರುವುದಾದರೂ ಅಧ್ಯಕ್ಷತೆಯನ್ನು ಕರ್ಪೂರ ಶ್ರೀನಿವಾಸರಾಯರೇ ವಹಿಸಬೇಕೆಂದು ಖಂಡಿತವಾಗಿ ನುಡಿದರಂತೆ. ಆ ಸಭೆಯಲ್ಲಿ ವಿಶ್ವೇಶ್ವರಯ್ಯನವರು ಮಿತವಾದ ಆದರೆ ಗಂಭೀರವಾದ ಭಾಷಣ ಮಾಡಿದರೆಂದೂ, ಕರ್ಪೂರ ಶ್ರೀನಿವಾಸರಾಯರು ತುಂಬ ಭಾವುಕರಾದರೆಂದೂ ಡಿವಿಜಿ ತಮ್ಮ ಜ್ಞಾಪಕ ಚಿತ್ರಶಾಲೆಯಲ್ಲಿ ದಾಖಲಿಸಿದ್ದಾರೆ:

"ಆ ದಿನ ಕರ್ಪೂರ ಶ್ರೀನಿವಾಸರಾಯರು ಅಧ್ಯಕ್ಷ ಭಾಷಣ ಮಾಡುವ ಕಾಲದಲ್ಲಿ ಅವರಿಗೆ ಮಾತನಾಡುತ್ತ ಮಾತನಾಡುತ್ತ ಹಳೆಯ ನೆನಪುಗಳು ಉಕ್ಕಿ ಬಂದು, ಅಳು ತಡೆಯಲಾರದಷ್ಟಾಯಿತು. ಬೆಳವಾಡಿ ನಂಜುಂಡಯ್ಯ, ರಾಮಣ್ಣ–ಇವರು ಮೈಸೂರಿನಿಂದ ಬೊಂಬಾಯಿಗೆ ಹೋಗಿ ಇಂಜಿನಿಯರುಗಳಾಗಿ ಹೆಸರು ಪಡೆದವರಲ್ಲಿ ಮೊದಲಿಗರು. ಶ್ರೀನಿವಾಸರಾಯರು ಗದ್ಗದಿತರಾಗಿ ಅವರ ಹೆಸರುಗಳನ್ನು ನೆನೆಯುತ್ತ "ಓ ರಾಮಣ್ಣಾ!" ಎಂದು ಕೋಟಿನ ಕೊನೆಯಿಂದ ಕಣ್ಣುಗಳನ್ನೂ ಮೂಗನ್ನೂ ಒರಸಿಕೊಳ್ಳುತ್ತಿದ್ದರು. ಮೈಮೇಲೆ ಉತ್ತರೀಯವಿದ್ದದ್ದೂ ಅವರ ಗಮನಕ್ಕೆ ಬರಲಿಲ್ಲ. ಒಂದೆರಡು ನಿಮಿಷ ಅವಾಕ್ಕಾಗಿ ನಿಂತರು. ಇದು ತೋರಿಸುತ್ತದೆ ಅವರ ಹೃದಯವನ್ನ."[೨]

ಬೊಂಬಾಯಿ ಸರ್ಕಾರದಲ್ಲಿ ಶ್ರೀನಿವಾಸರಾಯರು ಹೆಚ್ಚಿನ ಕೆಲಸ ಮಾಡಿದ್ದು ನೀರಾವರಿ ಮತ್ತು ರಸ್ತೆ ವಿಭಾಗಗಳಲ್ಲಿ. ಇದರಲ್ಲಿ ಅವರಿಗೆ ಒಳ್ಳೆಯ ಹೆಸರು ಸಂದಿತು. ಕೆಲಸಕ್ಕೆ ಸೇರಿದ ಒಂದೇ ವರ್ಷದಲ್ಲಿ ಅವರಿಗೆ ಸೂಪರಿಂಟೆಂಡಿಂಗ್ ಇಂಜಿನಿಯರ್ ಆಗಿ ಭಡ್ತಿ ದೊರೆಯಿತು. ೧೮೮೭ರಿಂದ ೧೯೧೧ರವರೆಗೆ ಅವರು ಬೊಂಬಾಯಿ ಪ್ರಾಂತ್ಯದ ಬೆಳಗಾಂ, ನಾಸಿಕ್, ಹೈದರಾಬಾದ್, ಮುಂತಾದೆಡೆಗಳಲ್ಲಿ ಸೇವೆ ಸಲ್ಲಿಸಿದರು. ಅನೇಕ ಸೇತುವೆಗಳು, ಅಣೆಕಟ್ಟೆಗಳು, ಕಟ್ಟಡಗಳು ಮುಂತಾದವುಗಳನ್ನು ನಿರ್ಮಿಸಿದರು. ಬೊಂಬಾಯಿ ಸರ್ಕಾರಕ್ಕೆ ಮುಖ್ಯ ಇಂಜಿನಿಯರ್ ಆಗಿದ್ದಾಗಲೇ ಅವರನ್ನು ಉದಯಪುರ ಮತ್ತು ಜಯಪುರಗಳ ಮುಖ್ಯ ಇಂಜಿನಿಯರ್ ಆಗಿಯೂ ನೇಮಿಸಲಾಗಿತ್ತು. ಈ ಎಲ್ಲ ಕಡೆಗಳಲ್ಲಿ ಅವರು ಉತ್ತಮ ಇಂಜಿನಿಯರ್ ಎಂಬ ಖ್ಯಾತಿಯನ್ನು ಪಡೆದರು. ಈ ಮಧ್ಯೆ ಅವರ ವಿವಾಹ ಜರುಗಿರಬೇಕು.

ಬೊಂಬಾಯಿಯಲ್ಲಿ ಇವರು ಮಾಡಿದ ಕೆಲಸಗಳ ಪ್ರಭಾವ ಎಷ್ಟಿತ್ತು ಎನ್ನುವುದಕ್ಕೆ ಒಂದು ನಿದರ್ಶನವನ್ನು ಗಮನಿಸಬಹುದು. 'ಮರ್‍ಹಾಠಾ ಎಜುಕೇಷನ್ ಫಂಡ್ 'ಎಂಬ ಸಂಸ್ಥೆ ತಮಿಳುನಾಡಿನಲ್ಲಿ ಚೆದುರಿ ಹೋಗಿದ್ದ ಮರಾಠಿಗರ ಶೈಕ್ಷಣಿಕ ಹಿತವನ್ನು ಕಾಯಲು ೧೯೧೨ರಲ್ಲಿ ಹುಟ್ಟಿಕೊಂಡ ಸಂಸ್ಥೆ. ಇದರ ಕೇಂದ್ರ ಕಚೇರಿ ಮದರಾಸಿನಲ್ಲಿದ್ದಿತು. ೧೯೩೭ರಲ್ಲಿ ಅದರ ರಜತೋತ್ಸವ ಸಂದರ್ಭದಲ್ಲಿ ಅದು ಒಂದು ಸ್ಮರಣ ಸಂಚಿಕೆಯನ್ನು ಹೊರತಂದಿತು. ಅದರ ಒಂದು ಭಾಗ "ಪ್ರಮುಖ ದಕ್ಷಿಣ ಭಾರತೀಯ ಮಹಾರಾಷ್ಟ್ರೀಯರು" ಎಂಬುದಾಗಿದೆ. ಅಂತಹವರ ಸಾಲಿನಲ್ಲಿ ಕರ್ಪೂರ ಶ್ರೀನಿವಾಸರಾಯರನ್ನೂ ಸೇರಿಸಿ  ಒಂದು ವ್ಯಕ್ತಿಚಿತ್ರವನ್ನು ಮತ್ತು ಅವರ ಚಿತ್ರವನ್ನೂ ಸ್ಮರಣ ಸಂಚಿಕೆಯ ಆ ಭಾಗದಲ್ಲಿ ನೀಡಲಾಗಿದೆ. ಇನ್ನೂ ಕೆಲವು ಕನ್ನಡಿಗರು ಅಲ್ಲಿ ಜಾಗವನ್ನು ಪಡೆದುಕೊಂಡಿದ್ದಾರೆ. ಈಗ ಮುಂಬಯಿಯ ಐಐಟಿ ತನ್ನ ಅಂತರಜಾಲತಾಣದಲ್ಲಿ ಈ ಸಂಚಿಕೆಯ ಪೂರ್ಣ ಪಠ್ಯವನ್ನು ತನ್ನ ಜಾಲತಾಣದಲ್ಲಿ ಎಲ್ಲರಿಗೂ ಲಭ್ಯವಾಗುವ ಹಾಗೆ ಇರಿಸಿದೆ.[೩]

ಮೈಸೂರು ಸರ್ಕಾರ, ವಿಶ್ವೇಶ್ವರಯ್ಯನವರನ್ನು ರಾಜ್ಯದ ಮುಖ್ಯ ಇಂಜಿನಿಯರ್ ಆಗಿ ನೇಮಕ ಮಾಡಿಕೊಂಡ ಸಂದರ್ಭದಲ್ಲಿಯೇ ಕರ್ಪೂರ ಶ್ರೀನಿವಾಸರಾಯರಿಗೂ ಆಹ್ವಾನ ನೀಡಿತು. ವಿಶ್ವೇಶ್ವರಯ್ಯನವರ ಜೊತೆಯಲ್ಲಿ ಕೆಲಸ ಮಾಡಿ ಈಗ ಅವರ ಕೆಳಗೆ ಕೆಲಸ ಮಾಡಬೇಕಲ್ಲಾ ಎಂಬ ಭಾವನೆ ಶ್ರೀನಿವಾಸರಾಯರಿಗೆ ಇದ್ದದ್ದನ್ನು ಗುರುತಿಸಿದ ಮೈಸೂರು ಸರ್ಕಾರ ನೀವು ಮೈಸೂರು ಅರಮನೆಯ ಮುಖ್ಯ ಇಂಜಿನಿಯರ್ ಆಗಿ ಬನ್ನಿ ಎಂದು ಆಹ್ವಾನವಿತ್ತು ಅವರನ್ನು ಒಪ್ಪಿಸಿತು. ಕೆಲಕಾಲದಲ್ಲಿಯೇ ವಿಶ್ವೇಶ್ವರಯ್ಯನವರು ಮೈಸೂರು ಸಂಸ್ಥಾನದ ದಿವಾನರಾಗಿ ನೇಮಕಗೊಂಡರು. ಆಗ ಸರ್ಕಾರ ಕರ್ಪೂರ ಶ್ರೀನಿವಾಸರಾಯರನ್ನು ರಾಜ್ಯದ ಮುಖ್ಯ ಇಂಜಿನಿಯರ್ ಆಗಿ ನೇಮಿಸಿತು.

ಮುಖ್ಯ ಇಂಜಿನಿಯರ್ ಅಗಿ ಶ್ರೀನಿವಾಸರಾಯರು ಕರ್ನಾಟಕಕ್ಕೆ ಅಮೋಘ ಸೇವೆಯನ್ನು ಸಲ್ಲಿಸಿದರು. ಕನ್ನಂಬಾಡಿ ಕಟ್ಟೆಯ ನಿರ್ಮಾಣದ ಸಂಪೂರ್ಣ ಉಸ್ತುವಾರಿ

ಇವರ ಪಾಲಿಗೇ ಬಂದಿತ್ತು. ವಿಶ್ವೇಶ್ವರಯ್ಯನವರ ಪಾತ್ರವೂ ಅದರಲ್ಲಿ ಬಹಳವೇ ಇದ್ದರೂ, ದಿನನಿತ್ಯದ ಉಸ್ತುವಾರಿ, ನಿತ್ಯಗಟ್ಟಲೆಯಲ್ಲಿ ಉದ್ಭವಿಸುವ ಸಮಸ್ಯೆಗಳ ಪರಿಹಾರ ಇಂಗ್ಲಿಷ್ ಸರ್ಕಾರದೊಡನೆಯ ಮಾತುಕತೆ ಇವೆಲ್ಲವನ್ನೂ ಶ್ರೀನಿವಾಸರಾಯರೇ ನಿಭಾಯಿಸುತ್ತಿದ್ದರು. ಕನ್ನಂಬಾಡಿ ಕಟ್ಟೆ ಕಟ್ಟುವುದಕ್ಕೆ ಮದ್ರಾಸಿನ ಸರ್ಕಾರದಿಂದ ಅಡೆತಡೆಗಳು ಇರುತ್ತಿದ್ದವು ಎಂಬುದರ ಹಿನ್ನೆಲೆಯಲ್ಲಿ ಶ್ರೀನಿವಾಸರಾಯರ ಕಾರ್ಯವನ್ನು ಗಮನಿಸಬೇಕು. ಈ ಹಿಂದೆಯೇ ಅವರು ಬೊಂಬಾಯಿ ಪ್ರಾಂತ್ಯದಲ್ಲಿದ್ದಾಗಲೇ ಮದ್ರಾಸು ಸರ್ಕಾರ ಅವರನ್ನು ಕಾವೇರಿ ನದಿಯ ಹರಿವನ್ನು ಸಮೀಕ್ಷೆ ಮಾಡಿ ಎಷ್ಟರ ಮಟ್ಟಿಗೆ ಅದನ್ನು ನೀರಾವರಿಗೆ ಬಳಸಿಕೊಳ್ಳಬಹುದು ಎಂಬುದರ ಬಗೆಗೆ ವರದಿ ನೀಡಲು ಕೋರಿಕೊಂಡಿತ್ತು. ಆಗ ಮಾಡಿದ ಕೆಲಸ ಶ್ರೀನಿವಾಸರಾಯರಿಗೆ ಕನ್ನಂಬಾಡಿ ಕಟ್ಟೆಯ ನಿರ್ಮಾಣದ ಸಮಯದಲ್ಲಿ ಮತ್ತು ನಂತರ ೧೯೨೪ರಲ್ಲಿ ಮದ್ರಾಸು ಮತ್ತು ಮೈಸೂರು ಸರ್ಕಾರಗಳ ನಡುವೆ ಮಾಡಿಕೊಂಡ ಒಪ್ಪಂದದ ಸಮಯದಲ್ಲಿ ಬಹಳವಾಗಿ ನೆರವಿಗೆ ಬಂದಿತು.

೧೯೨೪ರ ಸಮಯದಲ್ಲಿ 'ಕಾವೇರಿ ಆರ್ಬಿಟ್ರೇಷನ್ ಬೋರ್ಡ್'ನ ಮದ್ರಾಸು ಸರ್ಕಾರದ ಇಂಗ್ಲಿಷ್ ಅಧಿಕಾರಿಗಳ ಜೊತೆ ಮಾತನಾಡಿ ಒಪ್ಪಂದದ ಅಂಶಗಳನ್ನು ಅಂತಿಮಗೊಳಿಸುವಲ್ಲಿ ಶ್ರೀನಿವಾಸರಾಯರದು ಪ್ರಮುಖಪಾತ್ರ. ಇದಕ್ಕಾಗಿ ಸುಮಾರು ಇಪ್ಪತ್ತು ದಿನಗಳ ಕಾಲ ಅವರು ಮದ್ರಾಸಿನಲ್ಲಿಯೇ ಇರಬೇಕಾಗಿತ್ತು. ಆ ಸಲುವಾಗಿ ಶ್ರೀವಾಸರಾಯರಿಗೆ ಮೈಸೂರು ಮಹಾರಾಜರು ಸ್ವತಃ ತಾವು ಬಳಸುತ್ತಿದ್ದ (ಅಡಿಗೆ ತಿಂಡಿ ಮಾಡಿಕೊಳ್ಳುವ ಸೌಲಭ್ಯವಿದ್ದ) ಸಲೂನ್ ಕಾರನ್ನು ನೀಡಿದ್ದರು. ಅಲ್ಲದೆ ಪ್ರತಿ ದಿನಕ್ಕೂ ಒಂದು ಸಾವಿರ ರೂ.ಗಳ ಭತ್ಯೆ ನೀಡಿದ್ದರು. ಈ ಸಮಯದಲ್ಲಿ ಅವರ ವಿಚಕ್ಷಣೆಯ ನಡವಳಿಕೆ, ವ್ಯವಹಾರ ಕೌಶಲಗಳಿಂದ ಪಡೆದ ಯಶಸ್ಸನ್ನು ಮೆಚ್ಚಿ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಶ್ರೀನಿವಾಸರಾಯರಿಗೆ ಆ ವರ್ಷದ ದಸರಾ ಸಂದರ್ಭದಲ್ಲಿ "ರಾಜಸಭಾ ಭೂಷಣ" ಎನ್ನುವ ಬಿರುದು ನೀಡಿದ್ದಲ್ಲದೆ ಅರಮನೆಗೆ ಕರೆದೊಯ್ದು ಚಿನ್ನದ ಸರಪಣಿ ಸಮೇತವಾಗಿ ಚಿನ್ನದ ಮುಚ್ಚಳದ ಗಡಿಯಾರವನ್ನು ಉಡುಗೊರೆಯಾಗಿ ನೀಡಿದರು. ಇದಾದ ನಂತರ ಕೆಲವು ಸಮಯದಲ್ಲಿ ಅವರಿಗೆ ಆಡಳಿತದ ಕೆಲಸಗಳು ಸಾಕೆನಿಸಿರಬೇಕು. ೧೯೧೭ರಲ್ಲಿ ಅವರು ನಿವೃತ್ತಿ ಹೊಂದಿದರು. ಸರ್ಕಾರೀ ಕೆಲಸದಲ್ಲಿದ್ದರೂ ಶ್ರೀನಿವಾಸರಾಯರು ಅಪ್ರತಿಮ ದೇಶಭಕ್ತರಾಗಿದ್ದರು. ನಿವೃತ್ತಿಯಾಗುತ್ತಲೇ ಖಾದಿ ಉಡುಪನ್ನು ಧರಿಸಲಾರಂಭಿಸಿದರು. ಕಡಪಾ ರಾಘವೇಂದ್ರರಾಯರು, ಮುದುವೀಡು ಕೃಷ್ಣರಾಯರು ನಡೆಸುತ್ತಿದ್ದ ಸ್ವಾತಂತ್ರ್ಯ ಹೋರಾಟದ ಉಪನ್ಯಾಸಗಳ ಸಭೆಗಳಲ್ಲಿ ಅಧ್ಯಕ್ಷತೆ ವಹಿಸುತ್ತಿದ್ದರು. ಬಾಲಗಂಗಾಧರ ತಿಲಕರೆಂದರೆ ಕರ್ಪೂರ ಶ್ರೀನಿವಾಸರಾಯರಿಗೆ ತುಂಬ ಅಭಿಮಾನ. ಅವರ ಕೇಸರಿ ಪತ್ರಿಕೆ ಎಂದರೆ ಅವರಿಗೆ ಬಲು ಮೆಚ್ಚಿಗೆ. ತಿಲಕರು ತೀರಿಕೊಂಡಾಗ ಶ್ರೀನಿವಾಸರಾಯರು ತಮ್ಮ ನೂರು ಜನ ಸ್ನೇಹಿತರೊಡನೆ ಧರ್ಮಾಂಬುಧಿ ಕೆರೆಯಲ್ಲಿ ಧರ್ಮೋದಕ ನೀಡಿದರು.

ಶ್ರೀನಿವಾಸರಾಯರು ಸಂಸ್ಕೃತವನ್ನು ಕ್ರಮವಾಗಿ ಅಧ್ಯಯನ ಮಾಡಿರಲಿಲ್ಲ. ಆದರೆ ವಿವೇಕಾನಂದರು ಬೆಂಗಳೂರಿಗೆ ಬಂದಾಗ ಅವರ ಭಾಷಣವನ್ನು ಕೇಳಿ ಸಂಸ್ಕೃತ ಕಲಿಯಲು ಪ್ರೇರಣೆ ದೊರೆತು ಅದನ್ನು ಅಸಾಂಪ್ರದಾಯಿಕವಾಗಿ ಕಲಿಯತೊಡಗಿದರು. ಅವರಿಗೆ ಆಗಲೇ ಸುಮಾರು ಮುವ್ವತ್ತೈದು ವರ್ಷ. ಸಂಸ್ಕೃತದ ಅಧ್ಯಯನದಲ್ಲಿ ಯಾವ ಮಟ್ಟಕ್ಕೆ ತೊಡಗಿಸಿಕೊಂಡರೆಂದರೆ ಕ್ಷಿಪ್ರ ಅವಧಿಯಲ್ಲಿಯೇ ಅವರು ನಿರರ್ಗಳವಾಗಿ ಸಂಸ್ಕೃತದಲ್ಲಿ ಮಾತನಾಡಬಲ್ಲವರಾದರು. ಸಂಸ್ಕೃತ ಕಾವ್ಯ, ಶಾಸ್ತ್ರಗಳೆಲ್ಲವನ್ನೂ ಜೀರ್ಣಿಸಿಕೊಂಡರು. ವೇದ, ಉಪನಿಷತ್ತು ಮತ್ತು ಇತರ ಆಧ್ಯಾತ್ಮಿಕ ಗ್ರಂಥಗಳೆಲ್ಲ ಅವರಿಗೆ ಪರಿಚಿತವಾದ ಕೃತಿಗಳಾದವು. ದ್ವೈತ ಸಿದ್ಧಾಂತವನ್ನು ಆಳವಾಗಿ ಅಭ್ಯಾಸ ಮಾಡಿದರು. ದ್ವೈತ ಸಿದ್ಧಾಂತದ ನ್ಯಾಯ ಮತ್ತು ವೇದಾಂತ ಭಾಗಗಳಲ್ಲಿ ಅವರಿಗೆ ಆಳವಾದ ಪರಿಜ್ಞಾನವಿತ್ತು. ಹೊಸಕೆರೆ ಚಿದಂಬರಯ್ಯನವರ ಆರ್ಯಧರ್ಮಪ್ರದೀಪ ಗ್ರಂಥದ ಪರಿಶಿಷ್ಟಭಾಗದಲ್ಲಿ ಎಲ್ಲ ಧರ್ಮಗಳ, ಸಿದ್ಧಾಂತಗಳ ಕುರಿತಂತೆ ಲೇಖನಗಳಿವೆ. ಆ ಪೈಕಿ ದ್ವೈತ ಸಿದ್ಧಾಂತದ ಬಗೆಗೆ ಇರುವ ಲೇಖನ ಕರ್ಪೂರ ಶ್ರೀನಿವಾಸರಾಯರದ್ದು. ಶ್ರೀನಿವಾಸರಾಯರಿಗೆ ವಿದ್ಯಾಭೂಷಣ ಎನ್ನುವ ಬಿರುದೂ ಸಂದಿತ್ತು.

ಶ್ರೀನಿವಾಸರಾಯರ ಸಂಸ್ಕೃತ ಕಲಿಕೆಯ ಬಗ್ಗೆ ಮಾತನಾಡುತ್ತಿದ್ದುದನ್ನು ಡಿವಿಜಿ ಒಂದೆಡೆ ಹೀಗೆ ಉಲ್ಲೇಖಿಸುತ್ತಾರೆ:

"ಅವರು (ಶ್ರೀನಿವಾಸರಾಯರು) ಬಹುಮಂದಿಗೆ ಈ ಸಂಗತಿಯನ್ನು (ಸಂಸ್ಕೃತ ಕಲಿಯಲು ವಿವೇಕಾನಂದರಿಂದ ಪ್ರೇರಣೆ ಪಡೆದ ಸಂಗತಿಯನ್ನು) ಉದಾಹರಿಸಿ 'ಸುಲಭವಾದ ಭಾಷೆ ದೇವರೂ. ನೀವಿನ್ನೇನೂ ಮಾಡಬೇಡ್ರಿ. ಶ್ರೀಮದ್ರಾಮಾಯಣ ಓದಿದರೆ ಸಾಕು. ಆನಂದವಾಗಿ ಸಂಸ್ಕೃತ ಕಲಿಯಬಹುದು'–ಎಂದು ಉಪದೇಶಿಸಿದರು."[೪]

ಶ್ರೀನಿವಾಸರಾಯರು ಬೆಂಗಳೂರಿನಲ್ಲಿ ಸಂಸ್ಕೃತ ಪಾಠಶಾಲೆಯನ್ನು ಪ್ರಾರಂಭಿಸಲು ಪ್ರೇರಣೆಯಾದರು. ಉದಾರವಾಗಿ ಅದಕ್ಕೆ ಸಹಾಯ ಮಾಡಿದರು.

ಅವರ ಕನ್ನಡ ಪ್ರೀತಿಯೂ ಕಡಮೆಯದಲ್ಲ. ಎಲ್ಲಾ ಕನ್ನಡ ಕಾವ್ಯಗಳನ್ನೂ ಅವರು ಓದಿಕೊಂಡಿದ್ದರು. ಗರಣಿ ಕೃಷ್ಣಾಚಾರ್ಯರ ಒಡನಾಡಿಗಳಾಗಿದ್ದರು. ಅವರ ಜೊತೆಗಿದ್ದ ವಿದ್ವಾಂಸರುಗಳು ಯಾರೂ ಕಡಿಮೆಯವರಲ್ಲ. ಭಪ್ಪಲ್ಲಿ ವಿಶ್ವೇಶ್ವರಶಾಸ್ತ್ರಿಗಳು, ಮೋಟಗಾನಹಳ್ಳಿ ಶಂಕರಶಾಸ್ತ್ರಿಗಳು, ಎಂ.ಟಿ. ನರಸಿಂಹಯ್ಯಂಗಾರ್ಯರು, ಕರ್ನಾಟಕ ಸಾಹಿತ್ಯ ಪರಿಷತ್ತಿನ ಮೂಲ ಸ್ಥಾಪಕರಾದ ಡಾ. ಪಿ.ಎಸ್. ಅಚ್ಯುತರಾಯರು, ಆರ್. ರಘುನಾಥರಾಯರು, ನಂಗಪುರಂ ವೆಂಕಟೇಶಯ್ಯಂಗಾರ್ಯರು ಇವರೆಲ್ಲರ ಜೊತೆಯಲ್ಲಿ ಕರ್ಪೂರ ಶ್ರೀನಿವಾಸರಾಯರೂ ಸೇರಿದಾಗೆಲ್ಲ ವಿದ್ವತ್ಪೂರ್ಣ ಚರ್ಚೆಗಳಾಗುತ್ತಿದ್ದವು. ಈ ಅಂಶ ಡಿವಿಜಿಯವರ ಜ್ಞಾಪಕ ಚಿತ್ರಶಾಲೆಯಲ್ಲಿ ಉಲ್ಲೇಖವಾಗಿದೆ. ಕನ್ನಡ ಸಾಹಿತ್ಯ ಮತ್ತು ಕನ್ನಡ ಭಾಷೆಯ ಏಳಿಗೆಯಲ್ಲಿ ಅವರಿಗೆ ತೀವ್ರವಾದ ಕಾಳಜಿ ಇತ್ತು. ವಿಶ್ವೇಶ್ವರಯ್ಯನವರು ಏರ್ಪಡಿಸಿದ್ದ 'ಮೈಸೂರು ಸಂಪದಭ್ಯುದಯ ಸಮಿತಿ' ಎಂಬ ಸಂಸ್ಥೆ ಕಾರ್ಯೋನ್ಮುಖವಾಗಿತ್ತು. ಅದರ ಚರ್ಚೆಗಳಲ್ಲಿ ಕನ್ನಡ ಸಾಹಿತ್ಯ ಸಂಸ್ಥೆಯ

ಸ್ಥಾಪನೆಯೂ ಇದ್ದಿತು. ಅದಕ್ಕಾಗಿ ಒಂದು ಸಮಿತಿಯನ್ನು ರಚಿಸಲಾಗಿತ್ತು. ಅದರಲ್ಲಿ ಎಚ್.ವಿ. ನಂಜುಂಡಯ್ಯನವರು, ಕರ್ಪೂರ ಶ್ರೀನಿವಾಸರಾಯರು, ಡಾ॥ ಪಿ.ಎಸ್. ಅಚ್ಯುತ ರಾಯರವರು ಮತ್ತು ಡಿ.ವಿ. ಗುಂಡಪ್ಪನವರು ಇದ್ದರು. ಸಮಿತಿಯ ವರದಿಯಂತೆ ಕರ್ನಾಟಕ ಸಾಹಿತ್ಯ ಪರಿಷತ್ತು ೧೯೧೫ರ ಮೇ ತಿಂಗಳಿನ ಐದನೆಯ ದಿನಾಂಕದಂದು ಉದ್ಘಾಟಿತವಾಯಿತು. ಡಿವಿಜಿಯವರು ದಾಖಲಿಸಿರುವ ಪ್ರಕಾರ ಸಾಹಿತ್ಯ ಪರಿಷತ್ತಿನ ಸ್ಥಾಪನೆಗೆ ಪ್ರಮುಖವಾಗಿ ಕಾರಣರಾದವರು ಎಚ್.ವಿ. ನಂಜುಂಡಯ್ಯನವರು, ಕರ್ಪೂರ ಶ್ರೀನಿವಾಸರಾಯರು, ಪಿ.ಎಸ್. ಅಚ್ಯುತರಾಯರು, ಮತ್ತು ಆರ್. ರಘುನಾಥರಾಯರು. ಕರ್ನಾಟಕ ಸಾಹಿತ್ಯ ಪರಿಷತ್ತಿಗೆ ಕೊಡುಗೆಯಾಗಿ ಐನೂರು ರೂಗಳನ್ನು ನೀಡಿದ ಕರ್ಪೂರ ಶ್ರೀನಿವಾಸರಾಯರು ಆ ಕಾರ್ಯದಲ್ಲಿ ಮೊದಲಿಗರು. ಮುಂದೆ ಪರಿಷತ್ತು ಸಾಹಿತ್ಯ ಸಮ್ಮೇಳನಗಳನ್ನು ಏರ್ಪಡಿಸಿದಾಗ ಸಾಧ್ಯವಾಗುವ ತನಕ ಪ್ರತಿ ಸಮ್ಮೇಳನಕ್ಕೂ ಹೋಗುತ್ತಿದ್ದರು. ದಾವಣಗೆರೆಯಲ್ಲಿ ಸಮ್ಮೇಳನ ನಡೆದಾಗ ಸ್ಥಳೀಯರಿಂದ ಸಹಕಾರ ದೊರೆಯದ ಸಂದರ್ಭ ಉಂಟಾಗಿದ್ದಾಗ, ಡಿವಿಜಿ, ಕರ್ಪೂರ ಶ್ರೀನಿವಾಸರಾಯರು ಮತ್ತು ಇತರರು ಅಲ್ಲಿಯ ಸ್ಥಳೀಯರ ಜೊತೆಗೆ ಮಾತನಾಡಿ, ಜಿಲ್ಲಾಧಿಕಾರಿಗಳ ಸಹಾಯದಿಂದ ಎಲ್ಲವೂ ಸುಗಮವಾಗಿ ನಡೆಯಲು ಅನುವು ಮಾಡಿಕೊಟ್ಟಿದ್ದನ್ನು ಡಿವಿಜಿ ತಮ್ಮ ಜ್ಞಾಪಕ ಚಿತ್ರಶಾಲೆಯಲ್ಲಿ ದಾಖಲಿಸಿದ್ದಾರೆ.[೫]

ಕರ್ಪೂರ ಶ್ರೀನಿವಾಸರಾಯರ ಸಾರಸ್ವತ ಲೋಕದ ಸಾಹಸಗಳಲ್ಲಿ ಇನ್ನೊಂದು ಸ್ವಾರಸ್ಯದ ಸಂಗತಿ ಇದೆ. ಕರ್ಪೂರ ಶ್ರೀನಿವಾಸರಾಯರು ಕುಮಾರವ್ಯಾಸ ಭಾರತವನ್ನು ವಚನ ಶೈಲಿಯಲ್ಲಿ (ಗದ್ಯ) ಐದು ಸಂಪುಟಗಳನ್ನು ಪ್ರಕಟಗೊಳಿಸಿದ್ದಾರೆ ಎಂದು ಸುಬೋಧ ರಾಮರಾಯರು ದಾಖಲಿಸಿದ್ದಾರೆ. ಈ ಸಂಪುಟಗಳು ಬಹಳ ಮಹತ್ತ್ವದ್ದಾಗಿರಬೇಕು. ಇಲ್ಲಿಯವರೆಗೆ ನನಗೆ ಬಸವನಗುಡಿ ಗರ್ಲ್ಸ್ ಹೈಸ್ಕೂಲಿನ ಹೆಡ್‌ಮಾಸ್ಟರ್ ಆಸ್ಥಾನ ವಿದ್ವಾನ್ ಕುಮಾಂಡೂರು ರಾಮಸ್ವಾಮೈಯಂಗಾರ್‌ರವರಿಂದ ಬರೆಯಲ್ಪಟ್ಟು ಕರ್ಪೂರ ಶ್ರೀನಿವಾಸ ರಾಯರಿಂದ ಪರಿಶೋಧಿಸಲ್ಪಟ್ಟಿದೆ ಎಂಬ ಒಂದು ಕೃತಿ : ಮಹಾಭಾರತ ಸಂಗ್ರಹ –ಉದ್ಯೋಗ ಪರ್ವ ಎಂಬ ಸಂಪುಟ ಮಾತ್ರ ಲಭ್ಯವಾಗಿದೆ. ಇದು ೧೯೧೯ರಲ್ಲಿ ಪ್ರಕಟವಾಗಿದೆ. ಮಿಕ್ಕ ಸಂಪುಟಗಳು ಸಿಕ್ಕರೆ ಕುಮಾರವ್ಯಾಸನಿಗೆ ಸಂಬಂಧಿಸಿದಂತೆ ಆಗಿರುವ ದೊಡ್ಡ ಕೆಲಸವೊಂದರ ಅನಾವರಣವಾಗುತ್ತದೆ. ಈ ಕುರಿತು ಅಧ್ಯಯನ ಮಾಡುವವರಿಗೆ ದೊಡ್ಡ ಅನುಕೂಲವಾಗುತ್ತದೆ. ಈಚೆಗೆ ಕುಮಾರವ್ಯಾಸ ಭಾರತದ ಬಗ್ಗೆ ನಮ್ಮ ಎಲ್ಲ ವಿದ್ವಾಂಸರಿಗೂ, ಸಾಹಿತಿಗಳಿಗೂ ಆಸಕ್ತಿ ಹೆಚ್ಚುತ್ತಿರುವ ಹಿನ್ನೆಲೆಯಲ್ಲಿ ಇದು ಮಹತ್ವದ್ದಾಗಿದೆ.

ಕರ್ಪೂರ ಶ್ರೀನಿವಾಸರಾಯರ ಸಾಹಿತ್ಯಕ ಕೆಲಸಗಳು ಮುದ್ರಣವಾಗಿರುವುದು ಕಡಿಮೆ. ಮತ್ತು ಮುದ್ರಣವಾಗಿರುವುದೆಲ್ಲವೂ ಒಂದೆಡೆ ದೊರೆಯುವುದಿಲ್ಲ. ಆದರೆ ಅವರು ಅನೇಕ ಕೃತಿಗಳಿಗೆ ಮುನ್ನುಡಿ ಬರೆದಿದ್ದಾರೆ. ನಿದರ್ಶನಕ್ಕೆ ಹೊಸಕೆರೆ ಚಿದಂಬರಯ್ಯನವರು ಬರೆದಿರುವ 'ವಿದ್ಯಾರಣ್ಯ ಕಾವ್ಯಂ' ಕೃತಿಗೆ ಮುನ್ನುಡಿಯನ್ನು ಶ್ರೀನಿವಾಸರಾಯರು ಬರೆದಿದ್ದಾರೆ. ಮುನ್ನುಡಿಯಲ್ಲಿ ಕೃತಿಯ ವಿದ್ವತ್ಪೂರ್ಣವಾದ

ಸಮೀಕ್ಷೆ ಇದೆ. ಅವರ ಸಮಯದ ಬಹುಭಾಗವೆಲ್ಲ ಆಡಳಿತಾತ್ಮಕ ಕೆಲಸಗಳಲ್ಲಿಯೂ ಉಪನ್ಯಾಸಗಳಲ್ಲಿಯೂ ಆಧ್ಯಾತ್ಮಿಕ ಚರ್ಚೆಗಳಲ್ಲಿಯೂ ಕಳೆಯಿತು ಎಂದು ಕಾಣುತ್ತದೆ. ಹೀಗೆ ಕರ್ಪೂರ ಶ್ರೀನಿವಾಸರಾಯರು ಬರೆದ, ಸಂಪಾದಿಸಿರುವ ಎಲ್ಲ ಬರೆಹಗಳನ್ನೂ ಸಂಗ್ರಹಿಸಿ ಪ್ರಕಟಿಸಿದರೆ ಕನ್ನಡಿಗರು ಅವರಿಗೆ ಅರ್ಪಿಸಬಹುದಾದ ಕೃತಜ್ಞತೆಯ ಜೊತೆಗೆ ಕನ್ನಡ ಸಾಹಿತ್ಯದ ವಿದ್ಯಾರ್ಥಿಗಳಿಗೆ ಮಹತ್ತ್ವದ ಕೊಡುಗೆಯಾಗುತ್ತದೆ. ಕನ್ನಡ ಸಾಹಿತ್ಯ ಪರಿಷತ್ತು ಇಂತಹ ಕೆಲಸವನ್ನು ಕೈಗೆತ್ತಿಕೊಳ್ಳಬೇಕು.

ಸಾಹಿತ್ಯ ಪರಿಷತ್ತಿನ ಪರಿಷತ್ಪತ್ರಿಕೆಯ ಹಲವು ಸಂಚಿಕೆಗಳಲ್ಲಿ ಕರ್ಪೂರ ಶ್ರೀನಿವಾಸರಾಯರು ಬರೆದ ಲೇಖನಗಳನ್ನು ಒಟ್ಟುಮಾಡಿ 'ಸಾಹಿತ್ಯ ಶಾಸ್ತ್ರ' ಎಂಬ ಹೆಸರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ೧೯೭೧ರಲ್ಲಿ ಪ್ರಕಟಿಸಿತು. ೧೯೮೨ರಲ್ಲಿ ಅದರ ಎರಡನೆಯ ಮುದ್ರಣ ಹೊರಬಂದಿದೆ. ಈ ಕೃತಿಯ ವಸ್ತು ಕಾವ್ಯಮೀಮಾಂಸೆ. ಹಿಂದೆ ಇದನ್ನು ಅಲಂಕಾರಶಾಸ್ತ್ರ ಎಂದು ಕರೆಯಲಾಗುತ್ತಿತ್ತು. ಈ ಕೃತಿಯಿಂದಾಗಿ ಕರ್ಪೂರ ಶ್ರೀನಿವಾಸರಾಯರು ಭಾರತೀಯ ಪರಂಪರೆಯ ಕಟ್ಟಾ ಆರಾಧಕರು ಎಂಬುದು ಪ್ರಖರವಾಗಿ ತೋರುತ್ತದೆ. ಸಾಹಿತ್ಯಕ್ಕೆ ಸಂವಾದಿಯಾದ ಲಿಟರೇಚರ್ ಎಂಬ ಪದಕ್ಕೆ ಅಕ್ಷರಗಳ ರಾಶಿ ಎಂದು ಅರ್ಥೈಸಬಹುದು ಅಷ್ಟೇ ಎನ್ನುವ ಅವರು ನಮ್ಮ ಸಾಹಿತ್ಯದಲ್ಲಿ ನಡೆದಿರುವ ಮೀಮಾಂಸಾರೂಪದ ಅಧ್ಯಯನ ಬೇರೆ ವಿದೇಶಿ ಭಾಷೆಗಳಲ್ಲಿ ನಡೆದಿಲ್ಲ ಎಂಬ ಖಚಿತ ನಿಲುವನ್ನು ತಳೆದಿದ್ದಾರೆ. ಇಷ್ಟಾದರೂ ಅವರು ಷೇಕ್ಸ್‌ಪಿಯರ್, ಮಿಲ್ಟನ್ ಮುಂತಾದ ಅನೇಕ ಇಂಗ್ಲಿಷ್ ಸಾಹಿತಿಗಳನ್ನು ಆಳವಾಗಿ ಮತ್ತು ಪ್ರೀತಿಯಿಂದ ಓದಿದ್ದಾರೆ ಎನ್ನುವುದಕ್ಕೆ ಈ ಕೃತಿಯಲ್ಲಿ ಸಾಕ್ಷ್ಯಗಳಿವೆ. ಕೃತಿಯಲ್ಲಿ ಆರು ಅಧ್ಯಾಯಗಳಿವೆ. 'ಕವಿಗಳ ಸಾಮ್ರಾಜ್ಯ' ಕಾವ್ಯ ಎಂಬುದರ ಅರ್ಥ, ಅದರ ಉತ್ಪತ್ತಿ ನಿಷ್ಪತ್ತಿಗಳನ್ನು ತಿಳಿಸುತ್ತದೆ. ಕಾವ್ಯ ಮೀಮಾಂಸೆಗೆ ಪರ್ಯಾಯವಾಗಿ ಕರ್ಪೂರ ಶ್ರೀನಿವಾಸರಾಯರು ಸಾಹಿತ್ಯ ಶಾಸ್ತ್ರ (ಅಲಂಕಾರಶಾಸ್ತ್ರ) ಎನ್ನುವ ಪದವನ್ನು ಬಳಸುತ್ತಾರೆ. ಎರಡನೆಯ ಅಧ್ಯಾಯ ಸಾಹಿತ್ಯಶಾಸ್ತ್ರದ ಪೂರ್ವ ವೃತ್ತಾಂತ. ಇಲ್ಲಿ ವೇದಗಳಿಂದ ಹಿಡಿದು ಸುಮಾರು ಆಧುನಿಕ ಎನ್ನುವವರೆಗಿನ ಸಂಸ್ಕೃತ ಕಾವ್ಯಮೀಮಾಂಸಾ ಗ್ರಂಥಗಳನ್ನೂ ಮತ್ತು ಕನ್ನಡದ ಮೊದಮೊದಲ ಲಕ್ಷಣಗ್ರಂಥಗಳನ್ನೂ ಪರಿಚಯಿಸಿ ಕಾವ್ಯದ ಜೀವಾಳ ಯಾವುದು ಎನ್ನುವುದನ್ನು ಅರಸುತ್ತಾರೆ. ಅವರು ಉಲ್ಲೇಖಿಸುವ ಅಗ್ನಿಪುರಾಣದ ಉಲ್ಲೇಖಗಳ ಪೈಕಿ ಒಂದು ಮುಖ್ಯ ವಾಕ್ಯ ಹೀಗಿದೆ.

"ಕಾವ್ಯಸ್ಯ ನಾಟಕಾದೇಶ್ಚ ಅಲಂಕಾರಾನ್ ವದಾಮ್ಯಥ ॥"[೬]

ಇದರ ಅರ್ಥ ಕಾವ್ಯ ಮತ್ತು ನಾಟಕಗಳಲ್ಲಿರುವ ಅಲಂಕಾರಗಳನ್ನು ಹೇಳು ಎಂದಾಗಬಹುದು. ಅಂದರೆ ಅಲ್ಲಿಂದಲೇ ನಾವು ಕಾವ್ಯಮೀಮಾಂಸೆಯ ಪ್ರಶ್ನೆಗಳನ್ನು ಕೇಳುತ್ತ ಉತ್ತರಗಳನ್ನು ಕಂಡುಕೊಳ್ಳುತ್ತಾ ಬಂದಿದ್ದೇವೆ ಎಂದು ಪ್ರತಿಪಾದಿಸುತ್ತಾರೆ. ಅಗ್ನಿ ಪುರಾಣ ಒಂದು ಸಂಕಲನ ಗ್ರಂಥ. ಅಲ್ಲಿ ಅನೇಕ ವಿಷಯಗಳಿವೆ. ಸಂಕಲನಕಾರ ಯಾವುದನ್ನು ಎಲ್ಲಿಂದ ಎತ್ತಿಕೊಂಡಿದ್ದಾನೆ ಎಂಬುದು ಸ್ಪಷ್ಟವಾಗುವುದಿಲ್ಲ. ಅವರು

ಅಗ್ನಿಪುರಾಣದ ಕಾಲವನ್ನು ಸುಮಾರು ನಾಲ್ಕರಿಂದ ಐದು ಸಾವಿರ ವರ್ಷಗಳೆಂದು ವಿದ್ವಾಂಸರು ನಿರ್ಣಯಿಸಿದ್ದಾರೆ ಎಂದು ದಾಖಲಿಸುತ್ತಾರೆ. ಆದರೆ ಆಧುನಿಕ ವಿದ್ವಾಂಸರು ಅದನ್ನು ಎಂಟು ಒಂಬತ್ತನೇ ಶತಮಾನದಿಂದ ಹದಿನಾರನೆಯ ಶತಮಾನದವರೆಗೂ ಎಳೆದಿದ್ದಾರೆ. ಆದರೂ ಈ ಅಧ್ಯಾಯದಲ್ಲಿ ಕಾವ್ಯ ಮೀಮಾಂಸೆಯ ಕುರಿತಾದ ಆಕರ್ಷಕ ಚರ್ಚೆ ಇದೆ. ಇದನ್ನು ಕರ್ಪೂರ ಶ್ರೀನಿವಾಸರಾಯರು ಬರೆದದ್ದು ೧೯೨೦ರ ದಶಕದಲ್ಲಿ ಎಂಬುದನ್ನು ಗಮನದಲ್ಲಿರಿಸಿಕೊಳ್ಳಬೇಕು. ಹೀಗೆಯೇ ಮುಂದಿನ ಅಧ್ಯಾಯಗಳಾದ 'ಕಾವ್ಯಸ್ವರೂಪ ವಿಚಾರ', 'ಕಾವ್ಯಗಳ ನಿಷ್ಪತ್ತಿಯೂ ಪ್ರಯೋಜನವೂ', 'ಶಬ್ದದ ಅಭಿದಾ ಶಕ್ತಿ' ಮತ್ತು 'ಶಬ್ದದ ಲಕ್ಷಣಾ ಶಕ್ತಿ' ಎನ್ನುವ ಅಧ್ಯಾಯಗಳಲ್ಲಿ ಕಾವ್ಯಮೀಮಾಂಸೆಯ ಇತರ ಸಂಗತಿಗಳನ್ನು ಪ್ರಸ್ತಾಪಿಸುತ್ತಾರೆ. ಕನ್ನಡ ಗ್ರಂಥಗಳ ಪೈಕಿ ಕವಿರಾಜಮಾರ್ಗ, ಕಾವ್ಯಾವಲೋಕನ, ರಸವಿವೇಕ ಅಥವಾ ಶೃಂಗಾರ ರತ್ನಾಕರ, ಉದಯಾದಿತ್ಯಾಲಂಕಾರ, ತಿರುಮಲಾರ್ಯರ ಅಪ್ರತಿಮ ವೀರಚರಿತ ಗ್ರಂಥಗಳನ್ನು ಉಲ್ಲೇಖಿಸುತ್ತಾರೆ.

ಮುಂದೆ ಕವಿಗೂ ಮಿಕ್ಕ ಜ್ಞಾನ ಶಾಖೆಗಳ ಪರಿಚಯವಿರುವುದು ಅಗತ್ಯ ಎನ್ನುವುದನ್ನು ಪ್ರತಿಪಾದಿಸುವಾಗ ಅವರು ಸೊಗಸಾದ ಉದಾಹರಣೆಯನ್ನು ನೀಡುತ್ತಾರೆ. ಕಾಳಿದಾಸ ತನ್ನ ರಘುವಂಶದಲ್ಲಿ ಚಂದ್ರಗ್ರಹಣವನ್ನು ವಿವರಿಸುವಾಗ ಭೂಮಿಯ ನೆರಳು ಚಂದ್ರನ ಮೇಲೆ ಬೀಳುವುದರಿಂದ ಚಂದ್ರಗ್ರಹಣ ಉಂಟಾಗುತ್ತದೆ ಎಂದು ತಿಳಿಸಿದ್ದಾನೆ. ಅದನ್ನು ಉಲ್ಲೇಖಿಸಿ, ಕರ್ಪೂರ ಶ್ರೀನವಾಸರಾಯರು ಭಾಸ್ಕರಾಚಾರ್ಯನ ಸೂರ್ಯಸಿದ್ಧಾಂತರೀತಿ ಯಾಗಿ ಕಂಡುಹಿಡಿದ ಗ್ರಹಣದ ಮೂಲ ತತ್ತ್ವಗಳೂ ಕಾಳಿದಾಸನಿಗೆ ತಿಳಿದಿದ್ದಿರಲೇಬೇಕು ಎನ್ನುವ ಅಂಶವನ್ನು ಪ್ರಸ್ತಾಪಿಸುತ್ತಾರೆ.[೭]

ಓರ್ವ ತಂತ್ರಜ್ಞಾನಿಯಾಗಿ, ಅವರು "ವಿಜ್ಞಾನಿಗಳ ಪ್ರತಿಭೆಯ ಬಗ್ಗೆ ಸಾಮಾನ್ಯ ವಿಷಯಗಳಲ್ಲಿ ವಿಶೇಷ ಕಲ್ಪನೆಗಳನ್ನು ಹುಟ್ಟಿಸುವ ಅಂತಃಪ್ರಕಾಶರೂಪವಾದ ಪ್ರತಿಭಾಶಕ್ತಿಯು ಕವಿಗೂ ಶಾಸ್ತ್ರಜ್ಞನಿಗೂ ಸಮಾನವಾದ ಧರ್ಮವೆಂದು ಹೇಳಬಹುದು"[೮] ಎಂದು ಅಭಿಪ್ರಾಯಪಡುತ್ತಾರೆ. ಇದು ಇಂದೂ ಸಹ ಎಲ್ಲ ವಿಜ್ಞಾನಿಗಳೂ ಕವಿಗಳೂ ಗಮನಿಸಬೇಕಾದ ಅಂಶ.

ಮುಖ್ಯವಾಗಿ ಸಹೃದಯ ವ್ಯಾಖ್ಯೆ 'ಹೃದಯೇನ ಸಹಿತಂ ಸಹೃದಯಾಃ' ಮತ್ತು ಕಾದಂಬರಿಯ ಯಶಸ್ಸನ್ನು ನಿರೂಪಿಸುವ 'ಕಾದಂಬರೀ ರಸಜ್ಞಾನಾಂ ಆಹಾರೋಪಿ ನ ರೋಚತೇ' ಎನ್ನುವ ಉಕ್ತಿಗಳನ್ನು ಅವರು ಬಳಸಿಕೊಂಡಿರುವ ಸಂದರ್ಭ, ಅವುಗಳ ವ್ಯಾಖ್ಯೆ ಎಲ್ಲವೂ ಯಥೋಚಿತವಾಗಿವೆ. ಕವಿಯ ಪ್ರತಿಭೆಗೂ ಮತ್ತು ಕಾವ್ಯವನ್ನು ಓದುವವರಲ್ಲಿ ಅದು ತಂದುಕೊಡುವ ಸಾರ್ವತ್ರಿಕ ಅನುಭೂತಿಗೂ ಅವರು ನೀಡಿರುವ ವಿವರಣೆ ಎಂತಹ ಸಾಮಾನ್ಯರಿಗೂ ಮನವರಿಕೆಯಾಗುವಂತಿದೆ :

"ಆಹಾ ಈ ಕವಿಯು ಎಂತಹ ಕಳ್ಳನು! ಎಂತಹ ಸಮರ್ಥನು! ನನ್ನ ಅಂತಃಕರಣದಲ್ಲಿ ಬಿಂಬಿಸಿದ್ದ ಭಾವಗಳನ್ನೇ ಯಾವುದೋ ಒಂದು ಮಾಯೆಯಿಂದ ತಾನು ಕದ್ದು ನನಗೆ ಸಾಧ್ಯವಲ್ಲದ ಶಕ್ತಿಯಿಂದ ಅದೇ ಭಾವಗಳನ್ನು ವಿಶೇಷ ಚಮತ್ಕಾರವು

ಎಲ್ಲರ ಮನಸ್ಸಿನಲ್ಲಿಯೂ ಹುಟ್ಟುವ ಹಾಗೆ ಶಬ್ದಗಳ ಮೂಲಕ ಹೊರಪಡಿಸಿ ತನ್ನ ಕಳ್ಳತನವನ್ನೂ ಸಾಮರ್ಥ್ಯವನ್ನೂ ಪ್ರಕಟಿಸುವನು."[೯]

ಶ್ರೀನಿವಾಸರಾಯರದು ತುಂಬು ಕುಟುಂಬ ಅವರಿಗೆ ಮೂರು ಜನ ಗಂಡು ಮಕ್ಕಳು: ಸುಬ್ಬರಾವ್, ಗೋವಿಂದ ರಾವ್, ವೆಂಕಟರಾವ್. ಮೂರು ಜನ ಹೆಣ್ಣು ಮಕ್ಕಳು : ಪದ್ಮಾಬಾಯಿ, ಶಾರದಾಬಾಯಿ, ಮತ್ತು ಇಂದಿರಾ ಬಾಯಿ.

ಶ್ರೀನಿವಾಸರಾಯರಿಗೆ ಎಲ್ಲವೂ ಅಚ್ಚುಕಟ್ಟಾಗಿರಬೇಕು. ಡಿವಿಜಿ ತಮ್ಮ ಜ್ಞಾಪಕ ಚಿತ್ರಶಾಲೆಯಲ್ಲಿ ಅವರ ಫಲಾಹಾರದ ರೀತಿಯನ್ನು ಹೀಗೆ ನೆನಪಿಸಿಕೊಂಡಿದ್ದಾರೆ :

"ಕರ್ಪೂರ ಶ್ರೀನಿವಾಸರಾಯರ ಮನೆಗೆ ನಾವಿಬ್ಬರು ಮೂವರು ಮಿತ್ರರು ಸಂಜೆ ಹೋಗುತ್ತಿದ್ದೆವು. ಕಾರಣ ಈಗಲೇ ಸ್ಪಷ್ಟಪಡುತ್ತದೆ. ರಾಯರು ಫಲಾಹಾರಕ್ಕೆ ಕೂಡುತ್ತಿದ್ದರು. ಹದಿನೈದು–ಇಪ್ಪತ್ತು ಚಪಾತಿಗಳು, ಅಥವಾ ಪೂರಿ. ಅದರ ಜೊತೆಗೆ ಎರಡು ದಿನಸುಗಳು: ಒಂದು ಕೊಬ್ಬರಿಚಟ್ನಿ; ಇನ್ನೊಂದು ಸೀಕರಣೆ. ಒಂದಡಿ ವ್ಯಾಸವುಳ್ಳ ಬೆಳ್ಳಿಯ ಬಟ್ಟಲಿನ ತುಂಬ, (ಮಾವಿನ ಹಣ್ಣು ಹಲಸಿನ ಹಣ್ಣುಗಳಿಲ್ಲದಿದ್ದ ಕಾಲದಲ್ಲಿ) ರಸಬಾಳೆಯ ಹಣ್ಣಿನ ಸೀಕರಣೆ. ಅನಂತರ ಒಂದು ಲೋಟ ಹಾಲು. ನಾವು ಹೋಗಿ ಕುಳಿತೊಡನೆಯೇ ಅವರ ಅಡಿಗೆಯಾತ ನಮಗೆ ಎರಡೆರಡು ಚಪಾತಿ ಅಥವಾ ಪೂರಿ, ಅದಕ್ಕೆ ತಕ್ಕಷ್ಟು ಚಟ್ನಿ ಸೀಕರಣೆ ತಂದು ಕೊಡುವನು. ನಾವು ಅದರಲ್ಲಿ ಅರ್ಧ ತಿಂದು ಹೊಟ್ಟೆ ಭಾರವಾಯಿತೆನ್ನುತ್ತಿದ್ದೆವು."[೧೦]

ಶ್ರೀನಿವಾಸರಾಯರಿಗೆ ಈಜು ಮೆಚ್ಚಿನ ಹವ್ಯಾಸ. ಇದನ್ನು ಡಿವಿಜಿಯವರು ದಾಖಲಿಸಿದ್ದಾರೆ. ಶ್ರೀನಿವಾಸರಾಯರ ತಮ್ಮನ ಮೊಮ್ಮಗನಾದ ಶ್ರೀ ಬಿ. ಸತ್ಯಾಜಿರಾವ್ ಅವರೂ ಶ್ರೀನಿವಾಸರಾಯರು ಧರ್ಮಾಂಬುಧಿ ಕೆರೆಯಲ್ಲಿ ಈಜಾಡಲು ತಮ್ಮ ತಂದೆಯವರನ್ನು ಜೊತೆಯಲ್ಲಿ ಕರೆದುಕೊಂಡು ಹೋಗುತ್ತಿದ್ದುದನ್ನು ನೆನಪಿಸಿಕೊಂಡಿದ್ದಾರೆ.

ಶ್ರೀನಿವಾಸರಾಯರದು ತುಂಬ ಕಷ್ಟವನ್ನು ಕಂಡ ಜೀವ. ಅವರಿಗೆ, ಬಡ ವಿದ್ಯಾರ್ಥಿಗಳನ್ನು ಕಂಡರೆ ಬಹು ಪ್ರೀತಿ. ಆ ಹುಡುಗರು ಇವರೆದುರಿಗೆ ಯಾವುದಾದರೂ ಒಂದು ಕಾವ್ಯದ ಪದ್ಯ, ದೇವರನಾಮ ಒಂದು ಸಂಸ್ಕೃತ ಶ್ಲೋಕವನ್ನೋ ಹೇಳಿದರೆ ಸಾಕು. ಅವರಿಗೆ ಉನ್ನತ ಶಿಕ್ಷಣದ ತನಕ ಎಲ್ಲ ಬಗೆಯ ನೆರವನ್ನು ನೀಡುತ್ತಿದ್ದರು. ಇಂತಹ ವಿದ್ಯಾರ್ಥಿಗಳ ಊಟ ಉಪಚಾರಗಳಿಗಾಗಿಯೇ ಅವರ ಮನೆಯ ಪಕ್ಕದಲ್ಲಿದ್ದ ದೊಡ್ಡ ಮನೆಯನ್ನು ಬಿಟ್ಟಿದ್ದರು. ಅಲ್ಲಿ ಪ್ರತಿ ದಿನ ಮೂವತ್ತರಿಂದ ನಲವತ್ತು ಜನ ವಿದ್ಯಾರ್ಥಿಗಳಿಗೆ ಊಟವಾಗುತ್ತಿತ್ತು. ಶ್ರೀನಿವಾಸರಾಯರ ಸಾಹಿತ್ಯ ಪ್ರೀತಿಯ ವಿಚಾರ ಆಗಲೇ ಪ್ರಸ್ತಾಪವಾಗಿದೆ. ಅವರು ಅನೇಕರ ಪುಸ್ತಕ ಪ್ರಕಟಣೆಗಳಿಗೂ ನೆರವೀಯುತ್ತಿದ್ದರು. ವಿಶೇಷವಾಗಿ ಉಲ್ಲೇಖಿಸಬೇಕಾದ್ದು ಸುಬೋಧ ರಾಮರಾಯರ ವಿಚಾರ. ಸುಬೋಧ ರಾಮರಾಯರು ಹೊನ್ನಾಳಿಯಲ್ಲಿದ್ದಾಗ ಶ್ರೀನಿವಾಸರಾಯರು ಅವರನ್ನು ಕರೆದು ಅಗತ್ಯವಾದಷ್ಟು ಹಣವನ್ನು ನೀಡಿ ಸುಬೋಧ ಪತ್ರಿಕೆ ಪ್ರಕಟಿಸಲು ಅನುವು ಮಾಡಿದರು. ಅನಂತರದಲ್ಲಿ ಸುಬೋಧ ಮುದ್ರಣಾಲಯ ಕನ್ನಡಕ್ಕೆ ಎಂತಹ ಕೊಡುಗೆ ನೀಡಿದೆ

ಎಂಬುದು ಇಂದು ಎಲ್ಲರಿಗೂ ತಿಳಿದಿರುವ ವಿಚಾರ. ಸುಬೋಧ ರಾಮರಾಯರು ಶ್ರೀನಿವಾಸರಾಯರು ತೀರಿಕೊಂಡ ಬಳಿಕ ಅವರನ್ನು ಕುರಿತು 'ತತ್ತ್ವವಾದ' ಎಂಬ ಪತ್ರಿಕೆಯಲ್ಲಿ ಒಂದು ಚೊಕ್ಕವಾದ ಲೇಖನವನ್ನು ಬರೆದರು.

ಶ್ರೀನಿವಾಸರಾಯರದು ಮಾನವೀಯತೆಗೆ ತುಡಿಯುವ ಮನಸ್ಸು. ಒಮ್ಮೆ ಅವರು ಪೂನಾದ ಸಮೀಪದ ಖಡಕ್ ವಾಸ್ಲಾ ನದಿ ಪ್ರವಾಹಕ್ಕೆ ಒಳಗಾದಾಗ ಅದರ ನಿರ್ವಹಣೆ ಸಂಬಂಧ ಅಲ್ಲಿ ಕೆಲ ಸಮಯ ಇರಬೇಕಾಗಿತ್ತು. ಆಗಾಗ ಹೋಗಿಬರಬೇಕಾಗಿತ್ತು. ಒಂದು ಸಲ ಅಲ್ಲಿ ಅವರು ಓರ್ವ ಬಡ ಗೃಹಸ್ಥರ ಮನೆಯಲ್ಲಿ ಇಳಿದುಕೊಂಡರು. ಮನೆಯಲ್ಲಿ ಬಡತನವಿದ್ದರೂ ಆ ಗೃಹಸ್ಥನ ಎರಡನೆಯ ಮಗಳು ಚೂಟಿಯಾಗಿ ಓಡಾಡಿಕೊಂಡಿದ್ದುದು ಇವರ ಗಮನಕ್ಕೆ ಬಂದಿತು. ಹಾಗೆಯೇ ಅವಳು ಚದುರಂಗವನ್ನು ಚೆನ್ನಾಗಿ ಆಡಬಲ್ಲಳು ಎಂಬುದೂ ತಿಳಿಯಿತು. ಶ್ರೀನಿವಾಸರಾಯರು ಆ ಗೃಹಸ್ಥನೊಂದಿಗೆ ಮೊದಲ ಮಗಳ ಬಗ್ಗೆ ವಿಚಾರಿಸಿದರು. ದೌರ್ಭಾಗ್ಯವಶಾತ್ ಆ ಗೃಹಸ್ಥನು ತನ್ನ ಮೊದಲ ಮಗಳನ್ನು ಹಣದಾಸೆಯಿಂದ ಯಾರಿಗೋ ಒಪ್ಪಿಸಿಬಿಟ್ಟಿದ್ದ. ಆ ಗೃಹಸ್ಥನ ಜೊತೆ ಮಾತನಾಡಿ ಅವನಿಗೆ ಸಾಕಷ್ಟು ಹಣವನ್ನು ನೀಡಿ ಶ್ರೀನಿವಾಸರಾಯರು ಆ ಎರಡನೆಯ ಮಗಳನ್ನು ಬೆಂಗಳೂರಿಗೆ ಕರೆತಂದು ಮನೆಯವರನ್ನೆಲ್ಲ ಒಪ್ಪಿಸಿ ತಮ್ಮ ಮಗನ ಜೊತೆ ಅವಳ ವಿವಾಹ ಮಾಡಿ ತಮ್ಮ ಸೊಸೆಯನ್ನಾಗಿ ಮಾಡಿಕೊಂಡರು. ಮುಂದೆ ಯಾವುದೇ ಆರ್ಥಿಕ ನಿರ್ಧಾರ ತೆಗೆದುಕೊಳ್ಳುವಾಗಲೆಲ್ಲ ಅವರು ತಮ್ಮ ಸೊಸೆಯೊಡನೆಯೇ ಸಮಾಲೋಚನೆ ಮಾಡುತ್ತಿದ್ದರಂತೆ. ಇದು ಬಹಳ ಅಪರೂಪದ ನಡವಳಿಕೆ.

ಶ್ರೀನಿವಾಸರಾಯರ ಮನೆತನಕ್ಕೆ ಹೇಗೆ ಕರ್ಪೂರ ಎಂಬ ಹೆಸರು ಬಂದಿತು ಎಂಬುದನ್ನು ಪ್ರಸ್ತಾಪಿಸಿದೆ. ಶ್ರೀನಿವಾಸರಾಯರು ಈಗಿಲ್ಲವಾದರೂ ಅವರ ಮನೆತನದವರು ಕನ್ನಡ ನಾಡಿನಲ್ಲಿ ಮತ್ತು ಇತರೆಡೆಗಳಲ್ಲಿ ಕರ್ಪೂರದ ಬೆಳಕನ್ನು ಪ್ರಜ್ವಲಿಸುತ್ತಲೇ ಬಂದಿದ್ದಾರೆ. ಅವರ ಸಂತತಿಗಳ ಪೈಕಿ ಒಂದು ಕುಟುಂಬ ಸದ್ಯ ಚಾಮರಾಜಪೇಟೆಯಲ್ಲಿ ಅವರಿದ್ದ ಮನೆಯ ಜಾಗದಲ್ಲಿಯೇ ವಾಸಿಸುತ್ತಿದ್ದಾರೆ. ಅದರ ಮುಖ್ಯಸ್ಥ ಶ್ರೀ ಬದರೀನಾಥ ಕರ್ಪೂರ ಒಂದು ಬಹುರಾಷ್ಟ್ರೀಯ ಕಂಪನಿಯಲ್ಲಿ ಸಿವಿಲ್ ಇಂಜಿನಿಯರಾಗಿದ್ದಾರೆ. ಜೊತೆಗೆ ಅವರ ಕಟ್ಟಡದಲ್ಲಿ ಕನ್ನಡ ಗಣಕ ಪರಿಷತ್ತಿಗೆ ಆಶ್ರಯ ನೀಡಿದ್ದಾರೆ.

ಭಾರತದಲ್ಲಿ ಗಡಿಯಾರಗಳು ತಯಾರಾಗದ ಸಂದರ್ಭದಲ್ಲಿ ಭಾರತೀಯರಿಗೆ ಗಡಿಯಾರಗಳನ್ನು ಒದಗಿಸಿದ್ದು ಹೆಚ್ ಎಂಟಿ ಕಂಪನಿ. ಅದರ ಮೊದಲ ವ್ಯವಸ್ಥಾಪಕ ನಿರ್ದೇಶಕರು ಶ್ರೀ ಹರಿ ಆರ್. ಚತುರ್ವೇದಿ ಅವರು. ಇವರು ಕರ್ಪೂರ ಶ್ರೀನಿವಾಸರಾಯರ ಮಗ ಕರ್ಪೂರ ಸುಬ್ಬರಾಯರ ಮಗಳು ಶಾರದಾಬಾಯಿಯವರ ಮಗ. ಎಂದರೆ ಶ್ರೀನಿವಾಸರಾಯರ ಮುಮ್ಮಗನ ವಾವೆಯವರು. ಜವಾಹರಲಾಲ್ ನೆಹರು ಅವರ ಆದೇಶದಂತೆ ಅವರು ಜಪಾನು ಮತ್ತು ಸ್ವಿಟ್ಸರ್ಲೆಂಡ್ ದೇಶಗಳಿಗೆ ಭೇಟಿಯಿತ್ತು ಅಲ್ಲಿನ ತಂತ್ರಜ್ಞಾನವನ್ನು ಅರ್ಥ ಮಾಡಿಕೊಂಡು ಅದನ್ನು ಸೂಕ್ತವಾಗಿ

ಮಾರ್ಪಡಿಸಿ ಹೆಚ್ಎಂಟಿಯನ್ನು ಮನೆಮಾತಾಗಿಸಿದರು. ದೇಶದ ಜನ ಕೈಗೆ ಅವರದೇ ಗಡಿಯಾರ ಕಟ್ಟಿಕೊಳ್ಳುವ ಹಾಗೆ ಮಾಡಿದರು. ಈಗ ಟೈಟಾನ್ ಸಂಸ್ಥೆಯಲ್ಲಿ ಅದೇ ಉತ್ಸಾಹದಿಂದ ಕೆಲಸ ಮಾಡುತ್ತಿದ್ದಾರೆ. ಬಿ. ಸತ್ಯಾಜಿರಾವ್ ಅವರು ಎಲ್ಆರ್ಡಿಇ ಸಂಸ್ಥೆಯಲ್ಲಿ ವಿಜ್ಞಾನಿಯಾಗಿದ್ದವರು. ಅವರು ಹವ್ಯಾಸವಾಗಿ ಕ್ರಿಕೆಟ್ ಆಟವನ್ನು ಆಯ್ದುಕೊಂಡವರು. ಕರ್ನಾಟಕದ ಖ್ಯಾತ ಅಂಪೈರ್ ಆಗಿ ಹೆಸರು ಗಳಿಸಿದರು. ಇವರ ಪತ್ನಿ ಶ್ರೀಮತಿ ನಾಗಮಣಿ ಎಸ್. ರಾವ್. ಆಕಾಶವಾಣಿಯಲ್ಲಿ ವಾರ್ತಾ ವಾಚಕಿಯಾಗಿ ಮನೆ ಮಾತಾದವರು. ಸಾಹಿತಿಯಾಗಿ ಹೆಸರಾದವರು. ಹೀಗೆಯೇ ಹಿಂದೆ ಉಲ್ಲೇಖಿತವಾಗಿರುವ ಹರಿ ಅರ್ ಚತುರ್ವೇದಿಯವರ ತಮ್ಮ ಶ್ರೀ ಪದ್ಮನಾಭ ಚತುರ್ವೇದಿಯವರು ಭೂವಿಜ್ಞಾನಿಯಾಗಿ ಗಣಿಗಾರಿಕೆಯಲ್ಲಿ ಅನೇಕ ಹೊಸ ಅಂಶಗಳನ್ನು ಬೆಳಕಿಗೆ ತಂದರು. ಕರ್ನಾಟಕದ ಖ್ಯಾತ ವಿಜ್ಞಾನಿ ಶ್ರೀ ಸಿಎನ್ಆರ್‌ರವರ ಪತ್ನಿ ಶ್ರೀಮತಿ ಇಂದುಮತಿ ಅವರು ಕರ್ಪೂರ ಶ್ರೀನಿವಾಸರಾಯರ ಮೊಮ್ಮಗಳ ಮಗಳು. ಇದನ್ನು ಸ್ವತಃ ಸಿಎನ್ಆರ್ ರಾವ್ ಅವರೇ ತಮ್ಮ ಆತ್ಮಚರಿತ್ರೆಯಲ್ಲಿ ದಾಖಲಿಸಿದ್ದಾರೆ.[೧೧] ಇವರೆಲ್ಲ ಕೇವಲ ಕುಟುಂಬದ ಕೆಲವು ಬಳ್ಳಿಗಳಲ್ಲಿ ಕಂಡು ಹೂವುಗಳು. ಇನ್ನೂ ಹಲವರು ಪ್ರತಿಭಾನ್ವಿತರು ಖ್ಯಾತರಾಗಿದ್ದಾರೆ ಮತ್ತು ಆ ದಿಸೆಯಲ್ಲಿ ಮುಂದುವರೆಯುತ್ತಿದ್ದಾರೆ. ಅಂತರಜಾಲದಲ್ಲಿ ಕರ್ಪೂರ ವಂಶದ ಹಲವಾರು ಜನ ಅವರ ವಂಶವೃಕ್ಷದ ಎಳೆಗಳನ್ನು ಕೂಡಿಸಲು ಪ್ರಯತ್ನಿಸಿದ್ದಾರೆ. ಆ ಎಲ್ಲಾ ಮಾಹಿತಿಯನ್ನೂ ಸೇರಿಸಿ ಅವರ ಕುಟುಂಬ ವರ್ಗದವರು ಒಂದು ಸಮಗ್ರ ವಂಶವೃಕ್ಷವನ್ನು ರಚಿಸಿದರೆ ಅನೇಕರಿಗೆ ಅನುಕೂಲ ವಾದೀತು.

ಶ್ರೀನಿವಾಸರಾಯರು ದೃಢಕಾಯದವರು. ಎಷ್ಟೋ ಕಷ್ಟನಷ್ಟಗಳನ್ನು ಜೀರ್ಣಿಸಿಕೊಂಡವರು. ಆದರೆ ಜೀವನದ ಕೊನೆಯ ದಿನಗಳಲ್ಲಿ ದಾಳಿ ಮಾಡಿದ ಪಾರ್ಶ್ವವಾಯು ಅವರನ್ನು ಕುಗ್ಗಿಸಿತು. ಕನ್ನಡ ಸಾಹಿತ್ಯ ಪರಿಷತ್ತಿನ ಕಟ್ಟಡಕ್ಕೆ ಅವರಿಂದಲೇ ಶಂಕುಸ್ಥಾಪನೆಯಾಗಬೇಕೆಂದು ವೆಂಕಟನರಣಪ್ಪನವರ ಇಚ್ಛೆ. ಅವರು, ಅವರ ಮಿತ್ರರೆಲ್ಲ ಸೇರಿ ಶ್ರೀನಿವಾಸರಾಯರ ಕೈಯಲ್ಲೇ ಅದನ್ನು ೧೨-೦೪-೧೯೩೧ರಂದು ನೆರವೇರಿಸುತ್ತಾರೆ. ಇದನ್ನು ದಾಖಲಿಸಲು ಮಾತ್ರ ಡಿವಿಜಿಯವರ ವಾಕ್ಯಗಳೇ ಸರಿ :

"ಶ್ರೀನಿವಾಸರಾಯರ ಕಡೆಯ ದಿನಗಳನ್ನು ನೆನೆದರೆ ಕೊಂಚ ಸಂಕಟವಾಗುತ್ತದೆ. ಪಾರ್ಶ್ವವಾಯುವಿನಿಂದ ಅವರು ನಿಶ್ಚೇಷ್ಟರಾಗಿದ್ದರು. ಪರಿಷತ್ತಿನ ಕಟ್ಟಡಕ್ಕೆ ಅವರ ಕೈಯಿಂದ ವಾಸ್ತುಶಿಲೆಯನ್ನು ನೆಡಿಸಬೇಕೆಂದು ವೆಂಕಟನಾರಣಪ್ಪನವರ ಸಂಕಲ್ಪ. ಆದರೆ ರಾಯರ ದೇಹಸ್ಥಿತಿ ಅನುಕೂಲವಾಗಿರಲಿಲ್ಲ. ಆದದ್ದರಿಂದ ರಾಯರನ್ನು ಮೋಟಾರು ಕಾರಿನಲ್ಲಿ ಆ ಜಾಗಕ್ಕೆ ಕರತಂದು ಕಾರನ್ನು ರಸ್ತೆಯಲ್ಲಿ ನಿಲ್ಲಿಸಿ ರಾಯರ ಕೈಗೆ ಸೂತ್ರದ ಒಂದು ಕೊನೆಯನ್ನು ಕಟ್ಟಿ ಸೂತ್ರದ ಇನ್ನೊಂದು ಕೊನೆಗೆ ಗಾರೆಯ ಕರಣೆಯನ್ನು ಕಟ್ಟಿ ವೆಂಕಟನಾರಣಪ್ಪನವರು ಅಸ್ತಿಭಾರ ಹಾಕಿದರು. ಹೀಗೆ ಸೂತ್ರದ ಮೂಲಕ ರಾಯರ ಕೈಯಿಂದಲೇ ಕೆಲಸ ನಡೆಯಿತೆಂದು ಸಂಕೇತ. ಈ ಸಂಕೇತದಿಂದ ವೆಂಕಟನಾರಣಪ್ಪನವರ ಮನಸ್ಸಿಗೆ ತೃಪ್ತಿ. ನಮಗೆಲ್ಲ ವೆಂಕಟನಾರಣಪ್ಪನವರು ತೃಪ್ತರಾದರೆಂದು ತೃಪ್ತಿ."[೧೨]

ಅಲ್ಲಿಂದಾಚೆಗೆ ಶ್ರೀನಿವಾಸರಾಯರು ಹೆಚ್ಚುದಿನ ಬದುಕಲಿಲ್ಲ. ದಿನಾಂಕ ೦೨-೦೬-೧೯೫೨ರಂದು ಕನ್ನಡನಾಡಿನಲ್ಲಿ, ಭಾರತದ ಇತರೆಡೆಗಳಲ್ಲಿ ತಾವು ಹಚ್ಚಿದ ಕರ್ಪೂರದ ಕಾಂತಿಯ ಭಾಗವಾಗಿ ಅದರೊಡನೆ ಸೇರಿಹೋದರು.

■

## ಅಡಿ ಟಿಪ್ಪಣಿಗಳು

೧. ನವರತ್ನ ರಾಮರಾವ್ : ೧೯೫೨ರಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ಹಳೆಯ ವಿದ್ಯಾರ್ಥಿ ಸಂಘದವರು ಏರ್ಪಡಿಸಿದ್ದ ಚಕ್ರವರ್ತಿ ರಾಜಗೋಪಾಲಾಚಾರಿ ಮತ್ತು ಸರ್ ಎಂ. ವಿಶ್ವೇಶ್ವರಯ್ಯನವರ ಭಾವಚಿತ್ರಗಳ ಅನಾವರಣ ಸಮಾರಂಭದಲ್ಲಿ ಮಾಡಿದ ಭಾಷಣ. (ಇಂಗ್ಲಿಷಿನಲ್ಲಿದೆ.) www.yabaluri.org/TRIVENI/CDWEB/someoldcentral collegiansoct52.htm

೨. ಡಿವಿಜಿ ಸಮಗ್ರ ಕೃತಿ ಶ್ರೇಣಿ ೬ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ-೧೯೯೬-ಪುಟ ೩೮೦.

೩. ಅಂತರಜಾಲತಾಣ : www. www.cse.iitb.ac.in/~sudarsha/MEF/MEF1937-Part2.pdf.

೪. ಡಿವಿಜಿ ಸಮಗ್ರ ಕೃತಿ ಶ್ರೇಣಿ ೬ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ-೧೯೯೬-ಪುಟ ೩೮೧.

೫. ಡಿವಿಜಿ ಸಮಗ್ರ ಕೃತಿ ಶ್ರೇಣಿ ೬ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ-೧೯೯೬-ಪುಟ ೪೬೮

೬ ಸಾಹಿತ್ಯಶಾಸ್ತ್ರ : ಕನ್ನಡ ಸಾಹಿತ್ಯ ಪರಿಷತ್ತು ಎರಡನೆಯ ಮುದ್ರಣ-೧೯೮೨-ಪುಟ ೩೪.

೭. ಸಾಹಿತ್ಯಶಾಸ್ತ್ರ : ಕನ್ನಡ ಸಾಹಿತ್ಯ ಪರಿಷತ್ತು ಎರಡನೆಯ ಮುದ್ರಣ-೧೯೮೨-ಪುಟ ೮೪.

೮. ಸಾಹಿತ್ಯಶಾಸ್ತ್ರ : ಕನ್ನಡ ಸಾಹಿತ್ಯ ಪರಿಷತ್ತು ಎರಡನೆಯ ಮುದ್ರಣ-೧೯೮೨-ಪುಟ ೬೪.

೯. ಸಾಹಿತ್ಯಶಾಸ್ತ್ರ : ಕನ್ನಡ ಸಾಹಿತ್ಯ ಪರಿಷತ್ತು ಎರಡನೆಯ ಮುದ್ರಣ-೧೯೮೨-ಪುಟ ೬೩-೬೪.

೧೦. ಡಿವಿಜಿ ಸಮಗ್ರ ಕೃತಿ ಶ್ರೇಣಿ ೬ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ-೧೯೯೬-ಪುಟ ೩೮೫-೮೬.

೧೧. Climbing the limitless ladder , Prof. C.N.R. Rao, page 44.

೧೨. ಡಿವಿಜಿ ಸಮಗ್ರ ಕೃತಿ ಶ್ರೇಣಿ ೬ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ-೧೯೯೬-ಪುಟ ೪೬೮.

## ಗ್ರಂಥ ಋಣ

೧. 'ಕರ್ಪೂರ ಶ್ರೀನಿವಾಸರಾಯರು' ಲೇಖನ : ತತ್ತ್ವವಾದ, ಸುಬೋಧ ರಾಮರಾಯರು.

೨. 'ಕರ್ಪೂರ ಶ್ರೀನಿವಾಸರಾಯರು' – ಐಬಿಹೆಚ್ ಪ್ರಕಾಶನ, ಶ್ರೀ ಹೆಚ್.ಎನ್. ಮೂರ್ತಿ.

೩. ಡಿವಿಜಿ ಸಮಗ್ರ ಕೃತಿ ಶ್ರೇಣಿ ೬ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ-೧೯೯೬

೪. ಸಾಹಿತ್ಯಶಾಸ್ತ್ರ : ಕನ್ನಡ ಸಾಹಿತ್ಯ ಪರಿಷತ್ತು, ಕರ್ಪೂರ ಶ್ರೀನಿವಾಸರಾಯರು, ಎರಡನೆಯ ಮುದ್ರಣ, ೧೯೮೨.

೫. M E F Silver Jubilee Souvenir : Madras, 1932.

ಮಾಹಿತಿ ನೆರವು : ಶ್ರೀ ಸತ್ಯಾಜಿ ರಾವ್ ಬಿ. ಚಾಮರಾಜಪೇಟೆ, ಬೆಂಗಳೂರು.
ಶ್ರೀ ಪದ್ಮನಾಭ ಆರ್ ಚತುರ್ವೇದಿ, ಬನಶಂಕರಿ, ಬೆಂಗಳೂರು.
ಶ್ರೀ ಹರಿ ಚತುರ್ವೇದಿ, ನಾಗಸಂದ್ರ, ಬೆಂಗಳೂರು.
ಶ್ರೀ ಬದ್ರೀನಾಥ್ ಕರ್ಪೂರ್, ಚಾಮರಾಜಪೇಟೆ, ಬೆಂಗಳೂರು.

# ಈ ಸಂಚಿಕೆಯ ಲೇಖಕರು

* **ಡಾ. ಅಪ್ಪಣ್ಣ ಎನ್. ಹಂಜೆ,** ಇತಿಹಾಸ ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಹಾಗೂ ಸ್ನಾತಕೋತ್ತರ ಅಧ್ಯಯನ ಕೇಂದ್ರ, ಕೆಐಡಿಎಬಿ ವಸಾಹತು, ನಾಗಸಮುದ್ರ ರಸ್ತೆ, ಬೆಟಗೇರಿ, ಗದಗ-೫೮೨೧೦೨. ದೂ : ೯೮೮೬೫೯೨೯೨೭
* **ಡಾ. ವಿಜಯಾಸುಬ್ಬರಾಜ್,** # ೫೧, ಹಂಸಿ, ೧ನೇ ಎ ಕ್ರಾಸ್, ೩೫ನೇ ಮೈನ್ ಬನಗಿರಿ ನಗರ, ಬನಶಂಕರಿ ೩ನೇ ಹಂತ, ಬೆಂಗಳೂರು-೫೬೦೦೮೫.
* **ಎಸ್. ಬಿಳಿಗಿರಿವಾಸನ್,** # ೭೮, 'ಶ್ರೀ ಶ್ವೇತಾದ್ರಿ', ನ್ಯಾಸಪ್ಪನಹಳ್ಳಿ, ಬೇಗೂರು ಹೋಬಳಿ, ಡಿ.ಎಲ್.ಎಫ್. ಟೌನ್ ಹತ್ತಿರ, ಬೆಂಗಳೂರು-೫೬೦೦೬೮. ದೂ: ೯೦೩೬೬೧೨೪೮೪
* **ಟಿ. ಮಂಜುನಾಥ,** ಹಿರಿಯ ಸಂಶೋಧನಾ ವಿದ್ಯಾರ್ಥಿ, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೫೬೦೦೫೬. ದೂ: ೮೧೨೩೯೪೩೧೯೯.
* **ಡಾ. ಎಂ.ಜಿ. ವಾರಿ,** ಚಾಲುಕ್ಯನಗರ, ೫ನೇ ತಿರುವು, ಬಾದಾಮಿ-೫೮೭೨೦೧. ಜಿ. ಬಾಗಲಕೋಟೆ. ದೂ: ೯೮೪೪೬೬೨೪೨೯
* **ಆಜಪ್ಪ ಬಾಬು ಕಂಬಾರ,** ಪಿಎಚ್.ಡಿ. ವಿದ್ಯಾರ್ಥಿ, ಕನ್ನಡ ವಿಭಾಗ, ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ, ಕಡಗಂಚಿ, ಕಲಬುರಗಿ-೫೮೫೩೧೧. ದೂ: ೮೧೯೭೪೩೦೯೦
* **ಡಾ. ವೀರೇಶ ಬಡಿಗೇರ,** ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩೨೭೬.
* **ಡಾ. ಎಚ್.ಎಸ್. ಅನಂತನಾರಾಯಣ,** ನಿವೃತ್ತ ಭಾಷಾಶಾಸ್ತ್ರ ಪ್ರಾಧ್ಯಾಪಕ, ಬೆಂಗಳೂರು. ದೂ: ೯೯೮೦೬೩೨೮೧೦
* **ಎಚ್.ಎನ್. ಮುರಳೀಧರ,** # ೯೯೬, 'ಶ್ರೀಪದ', ೧೫ನೇ ಕ್ರಾಸ್, ಕುಮಾರಸ್ವಾಮಿ ಲೇಔಟ್ ಮೊದಲನೇ ಹಂತ, ಬೆಂಗಳೂರು-೫೬೦೧೧೧. ದೂ: ೯೪೪೯೩೫೩೮೩೦
* **ಸಂಧ್ಯಾ ಭಟ್,** # ೮೩/೪, 'ಗೌರಿ', ಬಿಒಬಿ ಕಾಲೋನಿ, ೨ನೇ ಮುಖ್ಯರಸ್ತೆ, ಪುಟ್ಟೇನಹಳ್ಳಿ, ಜೆ.ಪಿ. ನಗರ ೭ನೇ ಹಂತ, ಬೆಂಗಳೂರು-೫೬೦೦೭೮. ದೂ: ೯೪೮೧೦೩೩೮೯೪
* **ಅಚ್ಯುತ ಎಸ್. ಹುಲಗಿ,** # ೨೫, ಮೊದಲನೇ ಮಹಡಿ, ೪ನೇ ದೇವಸ್ಥಾನದ ರಸ್ತೆ, ೧೫ನೇ ಕ್ರಾಸ್, ಮಲ್ಲೇಶ್ವರ, ಬೆಂಗಳೂರು.-೫೬೦೦೦೩. ದೂ: ೭೦೧೯೭೨೨೭೨೩
* **ಡಾ. ಮುತ್ತುರಾಜು,** # ೩೩೩೩, ೪೦ ಅಡಿ ಮುಖ್ಯರಸ್ತೆ, ಕುಮಾರಸ್ವಾಮಿ ಬಡಾವಣೆ, ೨ನೇ ಹಂತ, ಬೆಂಗಳೂರು-೫೬೦೦೭೮. ದೂ: ೦೯೮೪೫೭೭೯೬೫೦
* **ಡಾ. ಕೆಳದಿ ಗುಂಡಾಜೋಯಿಸ್,** ಅಂಚೆ : ಕೆಳದಿ ೫೭೭೪೦೧. ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.
* **ಜಿ.ಎನ್. ನರಸಿಂಹಮೂರ್ತಿ,** ಕಾರ್ಯದರ್ಶಿಗಳು, ಕರ್ನಾಟಕ ಗಣಕ ಪರಿಷತ್ತು, ಮೊದಲನೆ ಮುಖ್ಯರಸ್ತೆ ಚಾಮರಾಜಪೇಟೆ, ಬೆಂಗಳೂರು-೫೬೦೦೧೮. ದೂ: ೯೮೪೫೩೬೨೯೫೬

# ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

'ಕನ್ನಡದ ಕಣ್ವ' ಆಚಾರ್ಯ ಬಿ.ಎಂ.ಶ್ರೀಕಂಠಯ್ಯನವರು ಹೊಸಗನ್ನಡದ ಯುಗಪುರುಷರು; ಇಂತಹ ಆಚಾರ್ಯಪುರುಷರ ಹೆಸರಿನ ಈ ಸಂಸ್ಥೆ ಸೃಜನ ಮತ್ತು ಸಂಶೋಧನ ಎರಡೂ ಸಾಹಿತ್ಯ ಕ್ಷೇತ್ರಗಳಲ್ಲಿ ದುಡಿಯುತ್ತಿದೆ. ಒಂದು, ಪ್ರಾಚೀನ ಸಾಹಿತ್ಯದ ಪರಿಷ್ಕರಣ; ಇನ್ನೊಂದು, ಆಧುನಿಕ ಸಾಹಿತ್ಯದ ಪುರಸ್ಕರಣ. ಈ ಸಂಸ್ಥೆಯನ್ನು ೧೯೭೯ರಲ್ಲಿ ಪ್ರೊ. ಎಂ.ವಿ. ಸೀತಾರಾಮಯ್ಯನವರು ಸ್ಥಾಪಿಸಿದ್ದು, ಇದು ಯಶಸ್ವೀ ಮೂವತ್ತನಾಲ್ಕು ವರ್ಷಗಳನ್ನು ಪೂರೈಸಿ ೨೦೦೪ರಲ್ಲಿ ರಜತೋತ್ಸವವನ್ನು ಆಚರಿಸಿದೆ.

ಈಗಾಗಲೇ ಈ ಸಂಸ್ಥೆಯು ರಾಷ್ಟ್ರಮಟ್ಟದಲ್ಲಿ ಹೆಸರು ಮಾಡಿದೆ. ಕರ್ನಾಟಕದಲ್ಲಿ ಸಂಶೋಧನೆ ಮತ್ತು ಪಾಂಡಿತ್ಯ ಸಂವರ್ಧನೆಗಳಿಗೆ ಮೀಸಲಾದ ಪ್ರತಿಷ್ಠಿತ ಸಂಶೋಧನಾ ಕೇಂದ್ರವಾಗಿದೆ. ಈವರೆಗೆ ಸುಮಾರು ೧೮೫ ಗ್ರಂಥಗಳನ್ನು ಹೊರತಂದಿದೆ. ಸಂಶೋಧನ ಕಾರ್ಯಕ್ಕೆ ಅನುಕೂಲವಾಗುವಂತೆ ಹದಿನೈದು ಸಾವಿರಕ್ಕೂ ಅಧಿಕ ಅಮೂಲ್ಯ ಗ್ರಂಥಗಳ ಆಕರಗ್ರಂಥಾಲಯವನ್ನೂ, ಸುಮಾರು ಒಂದು ಸಾವಿರಕ್ಕೂ ಅಧಿಕ ಪ್ರಾಚೀನ ಓಲೆಗರಿ ಗ್ರಂಥಗಳ ಹಸ್ತಪ್ರತಿ ಭಂಡಾರವನ್ನೂ ಹೊಂದಿರುವ ಪ್ರತಿಷ್ಠಾನ, ಸದಸ್ಯರು, ಉದಾರ ದಾನಿಗಳು ಮತ್ತು ಅಭಿಮಾನಿಗಳಿಂದಲೇ ಬೆಳೆಯುತ್ತಿದೆ.

## ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದಿಂದ ಮಾನ್ಯತೆ ಪಡೆದಿರುವ ಸ್ನಾತಕೋತ್ತರ ಸಂಶೋಧನ ಕೇಂದ್ರವಾಗಿರುವ ಪ್ರತಿಷ್ಠಾನದಲ್ಲಿ ಗಣ್ಯ ವಿದ್ವಾಂಸರ ಮಾರ್ಗದರ್ಶನದಲ್ಲಿ ಅನೇಕರು ಪಿಎಚ್.ಡಿ. ಪದವಿ ಮತ್ತು ಎಂ.ಫಿಲ್. ಪದವಿ ಪಡೆದಿರುತ್ತಾರೆ. ನುರಿತ ಮಾರ್ಗದರ್ಶಕರ ಸಹಕಾರದಿಂದ ಈ ಅಧ್ಯಯನ ಕೇಂದ್ರವನ್ನು ನಡೆಸಲಾಗುತ್ತಿದೆ.

## ರಾಷ್ಟ್ರೀಯ ಹಸ್ತಪ್ರತಿ ಮಿಷನ್‌ನ ಮಾನ್ಯತೆಯ ಕೇಂದ್ರ

ರಾಷ್ಟ್ರೀಯ ಹಸ್ತಪ್ರತಿ ಮಿಷನ್‌ನಿಂದ ಮಾನ್ಯತೆ ಪಡೆದಿರುವ ಪ್ರತಿಷ್ಠಾನವು ರಾಷ್ಟ್ರದ ಪ್ರತಿಷ್ಠಿತ ಹಸ್ತಪ್ರತಿ ಅಧ್ಯಯನ ಕೇಂದ್ರವಾಗಿದ್ದು ಅಮೂಲ್ಯ ಓಲೆಗರಿ ಗ್ರಂಥಗಳು, ಕಾಗದಪತ್ರಗಳು, ನಮ್ಮ ತಲೆಮಾರಿನ ಸಾಹಿತಿ-ಗಣ್ಯರ ಪತ್ರಗಳು ಮತ್ತು ಹಸ್ತಪ್ರತಿಗಳನ್ನು ಸಂರಕ್ಷಿಸುತ್ತ ನಾಡಿನ ಆಸ್ತಿಯನ್ನು ಉಳಿಸಲು ಶ್ರಮಿಸುತ್ತಿರುವ ಸೇವಾಸಂಸ್ಥೆಯಾಗಿದೆ.

## ಬಿ.ಎಂ.ಶ್ರೀ. ಕಲಾಭವನ

ಮೂರು ಮಹಡಿಗಳ ಭವ್ಯ ಬಿ.ಎಂ.ಶ್ರೀ. ಕಲಾಭವನವನ್ನು ಸಂಸದರ ನಿಧಿ ಮತ್ತು ದಾನಿಗಳ ನೆರವಿನಿಂದ ಕಟ್ಟಲಾಗಿದೆ. 'ಎಂ.ವಿ.ಸೀ. ಸಭಾಂಗಣ', ಗ್ರಂಥಾಲಯ, ವಸ್ತು-ಹಸ್ತಪ್ರತಿ ಸಂಗ್ರಹಾಲಯ, ಉಪನ್ಯಾಸ ಕೊಠಡಿಗಳು ನಿರ್ಮಾಣವಾಗಿವೆ.

## ಚಟುವಟಿಕೆಗಳು

'ಕರ್ನಾಟಕ ಲೋಚನ' ವಿದ್ವತ್ ಪತ್ರಿಕೆ ಹಾಗೂ 'ಹೊಂಗನಸು' ವಾರ್ತಾಪತ್ರದ ಪ್ರಕಟಣೆ, ಸಹೃದಯ ಗೋಷ್ಠಿಯ ಆಯೋಜನೆ, ಹಸ್ತಪ್ರತಿ ಶಾಸ್ತ್ರ ಮತ್ತು ಹಸ್ತಪ್ರತಿ ಅಧ್ಯಯನ ತರಗತಿಗಳು, ಹಸ್ತಪ್ರತಿ ಸಮಾವೇಶ, 'ಸಿರಿಕಂಟ' ವಿದ್ಯಾರ್ಥಿಗೋಷ್ಠಿ, ಹಳಗನ್ನಡ ಕಾವ್ಯಾಭ್ಯಾಸ ಶಿಬಿರ ಮೊದಲಾದುವು ಪ್ರತಿಷ್ಠಾನದ ಮುಖ್ಯ ಚಟುವಟಿಕೆಗಳಾಗಿವೆ.